ಜನ್ನಕವಿ ವಿರಚಿತ

# ಅನಂತನಾಥ ಪುರಾಣಂ

ಸಂಪಾದಕರು

ಎಚ್. ದೇವೀರಪ್ಪ

ಎಂ. ಸಿ. ಪದ್ಮನಾಭಶರ್ಮ






ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

೧೯೭೨

ಕನ್ನಡ ಅಧ್ಯಯನ ಸಂಸ್ಥೆ

ಪ್ರಾಚ್ಯಕಾವ್ಯ ಮಾಲೆ–೨೧

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ

ಎನ್. ಬಸವಾರಾಧ್ಯ



ಜನ್ನಕವಿ ವಿರಚಿತ

# ಅನಂತನಾಥ ಪುರಾಣಂ



ಜನ್ನಕವಿ ವಿರಚಿತ

# ಅನಂತನಾಥ ಪುರಾಣಂ




ಸಂಪಾದಕರು

ಎಚ್. ದೇವೀರಪ್ಪ

ಎಂ. ಸಿ. ಪದ್ಮನಾಭಶರ್ಮ






ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

೧೯೭೨

ANANTANATHA PURANA by Janna; Edited by H. Deveerappa and M. C. Padmanabha Sharma; Published by the Institute of Kannada Studies, Manasa Gangotri, University of Mysore, Mysore-6. First Edition 1972. Pp. xxx+೩೪೩.



ಬೆಲೆ

ಸಾದಾ ಪ್ರತಿ : ೮–೦೦

ಉತ್ತಮ ಪ್ರತಿ : ೧೫–೦೦



ಮಾರಾಟಗಾರರು

ಡೈರೆಕ್ಟರ್

ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು



ಮುದ್ರಕರು

ಉಷಾ ಪ್ರೆಸ್, ಮೈಸೂರು-೧

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಪ್ರಾಚ್ಯ ಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ.ಶ. ೧೪೩೬ ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ 'ಪುಷ್ಪದಂತ ಪುರಾಣ'ದ ಹಸ್ತಪ್ರತಿಯಿಂದ ಹಿಡಿದು ೧೮೫೦ ರಲ್ಲಿ ಲಿಖಿತವಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ, ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯ ಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯ ಕೃತಿಗಳನ್ನು ಪ್ರತಿಮಾಡಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ-ಶಾಸ್ತ್ರ-ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ–ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ

ಅನುಪಲಬ್ಧವಾಗಿವೆ. ಶಾಸನಗಳಲ್ಲಿ, ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ'ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತ ಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶಕಾಲಪರಿಸರಗಳ ಪ್ರಭಾವ ದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆ ಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸ ಲಾರದೆ ನದಿಯ ಪಾಲೋ ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕುಕಂಡು ಪೂಜಾರ್ಹ ವಾಗಿ, ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರ ಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಹೊತ್ತಿದೆ ಈ ಸಂಸ್ಥೆಯ ಸಂಪಾದನ ವಿಭಾಗ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿ ತ್ಯಕ್ಕೆ ಪರಿಷ್ಕಾರನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕ ಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿ ಯಿಂದ ಬೆಳೆಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿ ಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟ ನಿರೋಧಕ ತೈಲ ಲೇಪನಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು ಪ್ರಧೂ ಮನ ಉಪಚಾರ ನೀಡುವುದು [Fumigation Treatment], ತೀರ ತ್ರುಟಿತವಾದ ಹಸ್ತಪ್ರತಿಗಳನ್ನು ಮೈಕ್ರೊಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯ ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ

ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು ವ್ಯುತ್ಪತ್ತಿ ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೆ. ಪ್ರತಿಭಾವಂತರೂ, ವ್ಯುತ್ಪನ್ನ ಮತಿಗಳೂ, ಕಾವ್ಯರಚನಾ ಸಮರ್ಥರೂ, ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲ ಧಾಟಿಗೆ ಭಂಗ ಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು; (ಒಂದು ವೇಳೆ ವಾಸ್ತವವಾಗಿ, ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ!) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದದುಂಟು. ಇಂತಹ ಅನೇಕ ಕಾರಣಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅದೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದು ಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟ ಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನಾ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ ದೇಶ ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು, ಅರ್ಥಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯ ಸಂಶೋಧನಾಲಯದ ಅಂಗವಾಗಿದ್ದಾಗ ಹೊರತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ

ಮೇಲೆ 'ಪ್ರಾಚ್ಯ ಮಾಲೆ'ಯ ಹೆಸರಿನಲ್ಲಿ ಈಗಾಗಲೇ ೨೦ ಗ್ರಂಥಗಳನ್ನು ಹೊರತರಲಾಗಿದೆ. ಪ್ರಕಟಣೆಯ ವಿವಿಧ ಹಂತಗಳಲ್ಲಿರುವ ಕೃತಿಗಳ ಸಂಖ್ಯೆ ೧೦. ಪ್ರಕಟಣೆಗೆ ಸಿದ್ಧವಾಗಿರುವುವು ೬. ಸಂಪಾದನೆಗೆ ಆಯ್ದುಕೊಂಡಿರುವ ಗ್ರಂಥಗಳ ಸಂಖ್ಯೆ ೫೦. ಬೆಳಕು ಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೆ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ್ದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನುಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಚಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟಕುವ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಈ ಗ್ರಂಥಸಂಪಾದನ ಕಾರ್ಯಕ್ಕೆ ಅನುಕೂಲಿಸುವಂತೆ ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ಉಪಯೋಗಿಸಲು ಕೊಟ್ಟಿರುವ ಮಹನೀಯರಿಗೆ ವಂದನೆಗಳು. ಈಗ ಪ್ರಕಟವಾಗುತ್ತಿರುವ ಜನ್ನಕವಿಯ ಅನಂತನಾಥ ಪುರಾಣವನ್ನು ಶ್ರೀ ಎಚ್. ದೇವೀರಪ್ಪ ಮತ್ತು ಶ್ರೀ ಎಂ. ಸಿ. ಪದ್ಮನಾಭಶರ್ಮ ಅವರು ಸಂಪಾದಿಸಿಕೊಟ್ಟಿದ್ದಾರೆ. ಈ ಗ್ರಂಥದ ಕರಡುಗಳನ್ನು ತಿದ್ದುವಲ್ಲಿ, ಪೀಠಿಕೆ ಮತ್ತು ಅನುಬಂಧಗಳನ್ನು ಪರಿಷ್ಕರಿಸುವಲ್ಲಿ ಸಂಪಾದನ ವಿಭಾಗದ ಶ್ರೀ ಬಿ. ಎಸ್. ಸಣ್ಣಯ್ಯ ಮತ್ತು ಶ್ರೀ ಎಸ್. ಎನ್. ಕೃಷ್ಣಜೋಯಿಸ್ ಅವರು ವಿಶೇಷ ನೆರವು ನೀಡಿದ್ದಾರೆ. ಇದನ್ನು ಉಷಾ ಪ್ರೆಸ್ ಮಾಲೀಕರು ಅಚ್ಚು ಮಾಡಿಕೊಟ್ಟಿದ್ದಾರೆ. ಇವರಿಗೆ ನಮ್ಮ ವಂದನೆಗಳು.

ಮೈಸೂರು
7-2-1972

ಹಾ. ಮಾ. ನಾಯಕ
ನಿರ್ದೇಶಕ

# ವಿಷಯ ಸೂಚಿಕೆ

# ಪೀಠಿಕೆ

“ ಈ ಗ್ರಂಥಕರ್ತನಾದ ಜನ್ನನು ‘ ಕವಿಚಕ್ರವರ್ತಿ ’ ಯೆಂಬ ಬಿರುದನ್ನು ಪಡೆದು ಕನ್ನಡ ವಾಙ್ಮಯವನ್ನು ಅಲಂಕರಿಸಿದ ಕವಿಶ್ರೇಷ್ಠನು. ಇವನು ಜೈನನು ; ಕಮ್ಮೆವಂಶದ ಕಾಶ್ಯಪಗೋತ್ರದ ಶಂಕರನ ಮಗನು. ಇವನ ತಾಯಿ ಗಂಗಾದೇವಿ ಮತ್ತು ಇವನ ಹೆಂಡತಿ “ ರಾಯ ದಂಡಾಧಿನಾಥ ಕೃತಾಂತಂ ರೇಚಯಂ ಪೆತ್ತ ಪುತ್ರಿ ಲಕುಮಾದೇವಿ ”[1] ಎಂದೂ ಇವನ ಕಾವ್ಯಗಳಿಂದಲೇ ತಿಳಿಯಬಹುದು. ಇವನು ತನ್ನ ಚಿಕ್ಕ ವಯಸ್ಸಿನಲ್ಲಿಯೇ ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿ ಅಭಿನವ ಶರ್ವವರ್ಮನೆಂಬ ಬಿರುದನ್ನು ಪಡೆದಿದ್ದ ನಾಗವರ್ಮನಿಗೆ[2] ಶಿಷ್ಯನಾಗಿ ವಿದ್ಯೆಯನ್ನು ಕಲಿತು, ತರ್ಕ ವ್ಯಾಕರಣ ಸಾಹಿತ್ಯ ನಾಟ್ಯ ಇವೇ ಮೊದಲಾದ ಶಾಸ್ತ್ರಗಳಲ್ಲಿ ಪೂರ್ಣಪಾಂಡಿತ್ಯವನ್ನು ಪಡೆದುದಾಗಿ ಹೇಳಿಕೊಂಡಿರುವನು.[3]

ಜನ್ನನು ಈಗಿನ ವಿದ್ಯಾರ್ಥಿಗಳಂತೆ ಶಾಸ್ತ್ರಾಭ್ಯಾಸವೊಂದರಲ್ಲಿಯೇ ದೃಷ್ಟಿಯಿಟ್ಟರಲಿಲ್ಲ. ಇವನು ದೃಢಕಾಯನೂ ಧೈರ್ಯಶಾಲಿಯೂ ಆಗಿದ್ದುದರಿಂದ ಶಾಸ್ತ್ರಪ್ರಾವೀಣ್ಯಕ್ಕೆ ಅನುಗುಣವಾಗಿ ಶಸ್ತ್ರದಲ್ಲಿಯೂ ವಿಶೇಷ ಶಿಕ್ಷೆಹೊಂದಿ ಪ್ರಾವೀಣ್ಯವನ್ನು ಪಡೆದಿದ್ದನು. ಹೀಗೆ ಶಸ್ತ್ರಶಾಸ್ತ್ರಗಳೆರಡರಲ್ಲಿಯೂ ಅದ್ಭುತಪಾಂಡಿತ್ಯವನ್ನು ಪಡೆದ ಇವನ ಪ್ರಭಾವವು ಲೋಕದಲ್ಲೆಲ್ಲಾ ಪ್ರಸರಿಸಿ ಆಗ ಆಳುತ್ತಿದ್ದ ರಾಜನ ಕಿವಿಯನ್ನು ಮುಟ್ಟಿತು. ದೊರೆಯು ಇವನ ನೀತಿನೈಪುಣ್ಯಕ್ಕೂ ಶಸ್ತ್ರಕುಶಲತೆಗೂ ಮೆಚ್ಚಿ ಇವನನ್ನು ತನ್ನ ಮಂತ್ರಗೋಷ್ಠಿಗೆ ಸೇರಿಸಿಕೊಂಡುದಲ್ಲದೆ ಒಬ್ಬ ದಂಡಾಧೀಶನನ್ನಾಗಿಯೂ ನೇಮಿಸಿದನು.[4]

ಜನ್ನನಿಗೆ ಎಲ್ಲಾ ಕಲೆಗಳಲ್ಲಿಯೂ ಬುದ್ಧಿಯನ್ನು ನುಗ್ಗಿಸುವ ಸಾಮರ್ಥ್ಯವಿದ್ದರೂ ಕಾವ್ಯಕಲೆಯಲ್ಲಿ ವಿಶೇಷ ಅಭಿಮಾನವಿದ್ದಂತೆ ಕಂಡುಬರುವುದು. ಚಿಕ್ಕವಯಸ್ಸಿನಲ್ಲಿಯೇ ಇವನಿಗೆ ಕವಿತಾದೇವಿಯು ಒಲಿದಿದ್ದಳು. ಇದಕ್ಕೆ ಈತನು ಬರೆದಿರುವ ಶಾಸನಗಳೇ ನಿದರ್ಶನವಾಗಿವೆ. ಹೀಗೆ ಬಾಲ್ಯದಲ್ಲಿಯೇ ಆತನಲ್ಲಿ ಅಂಕುರಿಸಿದ ಕವಿತಾಶಕ್ತಿಯೂ ಆತನ ಸ್ವಂತ ವ್ಯವಸಾಯದಿಂದ ಶೀಘ್ರದಲ್ಲಿಯೆ ಲತೆಯಾಗಿ, ಯಶೋಧರಚರಿತೆ, ಅನಂತನಾಥ ಪುರಾಣಗಳೆಂಬ ಪುಷ್ಪಗಳನ್ನು ಬಿಟ್ಟು, ರಸಿಕರ ಮನಸ್ಸನ್ನು ಆಕರ್ಷಿಸಿ, ಅವರು ಅವುಗಳ ರಸವನ್ನು ಪಾನಮಾಡಿ ಹೆಮ್ಮೆಯಿಂದ ಝೇಂಕರಿಸುವಂತೆ ಮಾಡಿತು. ಆಗಿನ ದೊರೆಯಾಗಿದ್ದ ವೀರಬಲ್ಲಾಳನೂ ಈತನ ಕವಿತಾಪುಷ್ಪದ ರಸವನ್ನು ಆಸ್ವಾದನೆಮಾಡಿ ತೃಪ್ತ

---

1 ಅ. ಪು. ೧–೨೬, ೪–೧೩೬, ೧೩೭, ೧೪–೭೫

2 ಅ. ಪು. ೧–೩೪.

3 ಯಶೋ. ೧–೧೮, ೧೯

4 ಅ. ಪು. ೧–೫೪, ೫೬, ೧೪–೮೧. ಯಶೋ. ೧–೨೦

ನಾಗಿ ಆತನನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಆತನಿಗೆ 'ಕವಿಚಕ್ರವರ್ತಿ' ಎಂಬ ಬಿರುದನ್ನಿತ್ತು ವಿಶೇಷ ಮರ್ಯಾದೆಯನ್ನು ಮಾಡಿದನು.

ಕನ್ನರನಾದರದಿಂ ಕುಡೆ
ಹೊನ್ನಂ ಮನಮೊಸೆದು ತೈಲಪಂ ಕುಡೆ ರನ್ನಂ
ಮನ್ನಿಸಿ ಬಲ್ಲಾಳಂ ಕುಡೆ
ಜನ್ನಂ ಕವಿಚಕ್ರವರ್ತಿವೆಸರಂ ಪಡೆದಂ (ಯಶೋ. ೧-೨೧)

ಈ ಕವಿಯು ತನಗೆ ಜನ್ನನೆಂಬ ಹೆಸರಲ್ಲದೆ ಜನಾರ್ದನ, ಜನ್ನಮರಸ, ಜನ್ನಮಯ್ಯ, ಜನ್ನಿಗ, ಜಾನಕಿ ಎಂಬ ಹೆಸರುಗಳೂ ತನ್ನ ಕವಿತಾ ಸಾಮರ್ಥ್ಯ ಪ್ರದರ್ಶಕಗಳಾದ ಕವಿಭಾಳಲೋಚನ, ರಾಜವಿದ್ವಸ್ಸಭಾಕಳಹಂಸ, ಸಾಹಿತ್ಯ ರತ್ನಾಕರ, ವಿನೇಯಜನ ಮುಖತಿಲಕ ಎಂಬ ವಿಶೇಷಣಗಳೂ ಇದ್ದುವೆಂದು ತನ್ನ ಗ್ರಂಥಗಳಲ್ಲಿಯೇ ಹೇಳಿರುತ್ತಾನೆ.

ಈತನಿಗೆ ಕವಿತ್ವದಲ್ಲಿ ಇದ್ದ ಹಾಗೆಯೇ ಆತ್ಮೋಜ್ಜೀವನಕ್ಕೆ ಬೇಕಾದ ವಿದ್ಯೆಯಲ್ಲಿಯೂ ಅಭಿರುಚಿ ಇತ್ತು. ಆದಕಾರಣ ಈತನು ಆ ಕಾಲದಲ್ಲಿ ಜೈನಮತದಲ್ಲಿ ಹೆಸರು ಪಡೆದ ಕಾಣೂರ್ಗಣ ಮಾಧವಚಂದ್ರ ತ್ರೈವಿದ್ಯನ ಶಿಷ್ಯನಾದ ಗಂಡವಿಮುಕ್ತ ರಾಮಚಂದ್ರ ಮುನಿವರ್ಯನ ಪಾದವನ್ನು ಹಿಡಿದು ಅವನಲ್ಲಿ ಜೈನಮತವನ್ನು ಕೂಲಂಕಷವಾಗಿ ತಿಳಿದುಕೊಂಡನು.[5] ಹೀಗೆ ಜನ್ನನು ಮತ ವಿಚಾರದಲ್ಲಿ ಅಸ್ಮಾದೃಶವಾದ ಪಾಂಡಿತ್ಯವನ್ನು ಪಡೆದು ಮತೋದ್ಧಾರಕ್ಕಾಗಿಯೇ ತನ್ನ ಬುದ್ಧಿಶಕ್ತಿ, ಕಾಯಶಕ್ತಿ, ಕವಿತಾಶಕ್ತಿ ಮತ್ತು ಧನಸಂಪತ್ತಿ ಇವುಗಳೆಲ್ಲವನ್ನೂ ದಾನಮಾಡಿದನು. ಇದಕ್ಕೆ ಇವನು ಮಾಡಿರುವ ಕಾರ್ಯಗಳೇ ನಿದರ್ಶನಗಳಾಗಿವೆ.

ಲೋಕದಲ್ಲಿ ಸಾಮಾನ್ಯವಾಗಿ ಕವಿತ್ವಕ್ಕೂ ಬಡತನಕ್ಕೂ ಪರಸ್ಪರ ಸಂಬಂಧವುಂಟು; ಕವಿತ್ವವಿರುವ ಕಡೆ ಬಡತನವಿಲ್ಲದೇ ಇರದು. ಜನ್ನನು ಕವಿಯಾದರೂ ಬಡತನಕ್ಕೆ ಸಿಕ್ಕಿ ನರಳಲಿಲ್ಲ. ಒಂದು ದಿನವಾದರೂ ಮತ್ತೊಬ್ಬರನ್ನು ಕೈಯೊಡ್ಡಿ ಕೇಳಿದವನಲ್ಲ.[6] ಈತನಿಗೆ ಸರಸ್ವತಿ ಒಲಿದಂತೆ ಲಕ್ಷ್ಮಿಯೂ ಒಲಿದಿದ್ದಳು. ಇದಕ್ಕೆ ಈತನು ಹೆಮ್ಮೆ ಪಡಲಿಲ್ಲ. ಇವನು ಬಹಳ ಉದಾರಿಯಾದುದರಿಂದ ಪರರ ಹಿತವನ್ನೇ ಬಯಸುತ್ತ ಅನೇಕರಿಗೆ ದಾನಧರ್ಮಗಳನ್ನು ಮಾಡುತ್ತಿದ್ದನು.[7] ಇಷ್ಟೇ ಅಲ್ಲದೆ ತನಗೆ ಬಂದ ಹಣವನ್ನು ಮತಪ್ರಚಾರಕ್ಕಾಗಿ ವಿನಿಯೋಗಿಸುವುದು ಶ್ರೇಯೋವಹವೆಂದು ನಂಬಿ ಈತನು ಗಂಡರಾದಿತ್ಯನ ಪೊಳಲಲ್ಲಿ ಅನಂತನಾಥನ ಬಸದಿಯನ್ನು ಸ್ವಂತ ಹಣದಿಂದ ಕಟ್ಟಿಸಿಯೂ, ದ್ವಾರಸಮುದ್ರದಲ್ಲಿ ವಿಜಯಪಾರ್ಶ್ವಜಿನೇಶ್ವರನ ಬಸದಿಯ

---

5 ಅ. ಪು. ೧-೨೫

6 ಅ. ಪು. ೧-೫೧, ೧೪-೮೦, ೮೧; ಯಶೋ. ೧-೨೦, ೪-೮೬

7 ಅ. ಪು. ೧-೫೧; ೧೪-೮೦, ೮೧; ಯಶೋ. ೪-೮೬

ದ್ವಾರವನ್ನು ಮಾಡಿಸಿಯೂ ತನ್ನ ಔದಾರ್ಯವನ್ನೂ, ಜಿನಮತ ನಿಷ್ಠೆಯನ್ನೂ ಪ್ರಕಾಶ ಪಡಿಸಿದನು.[8]

ಈತನು ಆರ್ಜಿಸಿದ ಬುದ್ಧಿಶಕ್ತಿಯನ್ನೂ ಜಿನಮತ ಪ್ರಚಾರಕ್ಕಾಗಿಯೇ ವಿನಿಯೋಗಿಸಿದನು. ಇವನು ಬರೆದಿರುವ ಯಶೋಧರಚರಿತೆ, ಅನಂತನಾಥಪುರಾಣ ಎಂಬೆರಡು ಪ್ರಬಂಧಗಳೂ ಮುಂದೆ ವಿವರಿಸುವಂತೆ, ಜೈನಧರ್ಮೋಪದೇಶಕ್ಕಾಗಿಯೇ ಬರೆಯಲ್ಪಟ್ಟುವಾಗಿ ಕಂಡುಬರುತ್ತವೆ. ಇವುಗಳಲ್ಲಿ ಮುಖ್ಯವಾದ ಅನಂತನಾಥ ಪುರಾಣವನ್ನು ಜಿನಭಕ್ತನಾದ ತನಗೆ ಬರೆಯುವುದು ಕರ್ತವ್ಯವೆಂದೆಣಿಸಿ ಬರೆದುದಾಗಿ ಇವನು ಹೇಳಿಕೊಂಡಿರುವನು. "*

## ಯಶೋಧರ ಚರಿತೆ

ಇದು ವರ್ಣಕಕಾವ್ಯ. ಇದರಲ್ಲಿ ಯಶೋಧರ ಅಮೃತಮತಿಯರ ಕಥೆ ನಿರೂಪಿತವಾಗಿದ್ದರೂ ಜೈನಧರ್ಮದ ಜೀವದಯಾಷ್ಟಮಿಯ ಕಥೆಯನ್ನು ಹೇಳುವುದೇ ಕವಿಯ ಮುಖ್ಯ ಗುರಿಯಾಗಿದೆ. ಜೈನರ ಪಂಚಮಹಾವ್ರತಗಳಲ್ಲಿ ಮುಖ್ಯವಾದ 'ಅಹಿಂಸಾ ಪರಮೋ ಧರ್ಮಃ' ಎಂಬ ಮೂಲ ಮಂತ್ರವನ್ನು ಸಾರಿದ್ದಾನೆ; ಸಹೃದಯ ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾನೆ. ಈ ಕಾವ್ಯವನ್ನು ವೀರಬಲ್ಲಾಳನ ಆಳ್ವಿಕೆಯಲ್ಲಿ (1173-1220) ಶುಕ್ಲವರ್ಷದಲ್ಲಿ, ಎಂದರೆ 1209 ರಲ್ಲಿ ಬರೆದಂತೆ ಹೇಳಿಕೊಂಡಿದ್ದಾನೆ.

## ಅನಂತನಾಥ ಪುರಾಣ

ಇದು ಜೈನರ ೨೪ ತೀರ್ಥಂಕರರಲ್ಲಿ ೧೪ ನೆಯವನಾದ ಅನಂತ ಜಿನ ಮತ್ತು ಆ ವಂಶಕ್ಕೆ ಸೇರಿದ ಸುಪ್ರಭ ಪುರುಷೋತ್ತಮರೆಂಬ ಬಲದೇವ ವಾಸುದೇವ ಚರಿತ್ರೆಯೂ ಪ್ರತಿವಾಸುದೇವನಾದ ಮಧುಕೈಟಭನ ಚರಿತ್ರೆಯೂ ನಿರೂಪಿತವಾಗಿದೆ.

**ಕಥಾಸಾರ:** ಜಂಬೂದ್ವೀಪದ ದಕ್ಷಿಣಭಾಗದಲ್ಲಿ ಭರತಕ್ಷೇತ್ರವಿದೆ. ಆ ಕ್ಷೇತ್ರದಲ್ಲಿ ಅತಿಶಯ ಸೌಖ್ಯವೂ ಲಾಭವೂ ಯಶಸ್ಸೂ ತುಂಬಿರುವ ಕೋಸಲ ದೇಶವಿದೆ. ಸುಖ ಸಂತೋಷಗಳ ಬೀಡಾಗಿ ಆನಂದದ ನೆಲೆವೀಡಾಗಿ ಮೆರೆಯುತ್ತಿರುವ ಕೋಸಲ ದೇಶದ ಮಣಿಮಕುಟದಂತೆ ಮೆರೆಯುತ್ತಿರುವುದು ಅಯೋಧ್ಯಾಪಟ್ಟಣ. ಅಲ್ಲಿ ಯಾವಾಗಲೂ ಅನೇಕ ವಿಜಯೋತ್ಸವಗಳು ನಡೆಯುತ್ತಿದ್ದವು. ಕೋಗಿಲೆಗಳ ಧ್ವನಿಯಿಂದ ತುಂಬಿಗಳ ಸಮೂಹದಿಂದ, ಮಂದಾನಿಲಗಳ ಸಂಯೋಗದಿಂದ, ಕೆದರಿರುವ ಚಿನ್ನದಂಥಾ ಬಾಳೆಯೆಂಬ ಚಾಮರ ಸಮೂಹಗಳಿಂದ ಆ ಪುರದ ಬಹಿರುದ್ಯಾನವು ಮನ್ಮಥನ ಸಕಲ

---

8 ಅ. ಪು. ೧೪-೮೨, ೮೩

* ಅದಿಯಿಂದ ಇಲ್ಲಿಯವರೆಗೂ ನಮ್ಮ ಮೊದಲ ಆವೃತ್ತಿಯದನ್ನೇ ಕೊಡಲಾಗಿದೆ.

ಸಾಮ್ರಾಜ್ಯದಂತೆ ಮೆರೆಯುತ್ತಿದ್ದಿತು. ಇದನ್ನು ಆಳುವ ಸಿಂಹಸೇನ ಮಹಾರಾಜನು ತನ್ನ ಭುಜಬಲಪರಾಕ್ರಮದಿಂದ ಸತ್ಯಸಂಯಮಗಳಿಂದ ಭೂಷಿತನಾಗಿ ರಾಜ್ಯಭಾರ ಮಾಡುತ್ತಿದ್ದನು.

ವಿದ್ಯಾಸಂಪನ್ನನೂ ಯಶಸ್ತಿಲಕನೂ ಆದ ಸಿಂಹಸೇನ ಮಹಾರಾಜನು ಇಕ್ಷ್ವಾಕು ಕುಲಕ್ಕೆ ಸೇರಿದವನಾಗಿದ್ದನು. ಈತನು ತನ್ನ ಪರಾಕ್ರಮದಿಂದ ಅರಿಭಯಂಕರನಾಗಿ ವಿಜೃಂಭಿಸುತ್ತಿದ್ದನು. ಈತನಿಗೆ ಮನೋನಯನೆಯಾದ ಜಯಶ್ಯಾಮಾದೇವಿಯು ಪತ್ನಿಯಾಗಿದ್ದಳು. ಆಕೆಯು ರತಿಯಂತೆ ಮನೋಹರೆಯಾಗಿದ್ದಳು. ಸಿಂಹಸೇನ ಮಹಾರಾಜನು ತನ್ನ ವೈಭವಗಳಿಂದ ಸಂಪನ್ನನಾಗಿ ಪರಿಚಾರಕರು ಚತುರಂಗಬಲ ಸಮೇತನಾಗಿ ರತ್ನಖಚಿತ ಸಿಂಹಾಸನದಲ್ಲಿ ಜಯಶ್ಯಾಮಾದೇವಿಯೊಡನೆ ಕೂಡಿ ಒಂದು ದಿನ ರಾಜಸಭೆಯನ್ನು ನಡೆಸುತ್ತಿದ್ದ ಸಮಯದಲ್ಲಿ ಪುಷ್ಪಕವಿಮಾನದಿಂದ ಅಪ್ಸರ ಸ್ತ್ರೀಯರೊಡನೆ ಇಷ್ಟಶರ್ಮನೆಂಬ ಬ್ರಾಹ್ಮಣನು ರಾಜನನ್ನು ಆಶೀರ್ವದಿಸುತ್ತ ಸಭೆಯನ್ನು ಗಂಭೀರವಾಗಿ ಪ್ರವೇಶಿಸಿದನು. ಆತನು ' ನಿನ್ನ ವಂಶದಲ್ಲಿ ಮುಂದಿನ ತೀರ್ಥಂಕರನಾದ ಅನಂತನಾಥನು ಉದಯಿಸಲಿ' ಎಂದು ಸಿದ್ಧ ಶೇಷಾಕ್ಷತೆಯೊಡನೆ ಆಶೀರ್ವಾದವನ್ನು ಮಾಡಿದನು. ಜೊತೆಯಲ್ಲಿ ಬಂದಿದ್ದ ವಿದ್ಯಾಧರ ಕನ್ನೆಯರು ಉಚಿತ ಸ್ಥಾನದಲ್ಲಿ ಕುಳಿತರು. ಆ ಸುರಸುಂದರಿಯರಲ್ಲಿ ಮದನಮಂಜರಿ ಎಂಬಾಕೆಯ ಪರಿಚಯವನ್ನು ಪಡೆದ ಜಯಶ್ಯಾಮಾದೇವಿಯು ಆಕೆಯನ್ನು ಬಿಗಿಯಪ್ಪಿದಳು. ಮದನಮಂಜರಿಯು ತನ್ನ ವೃತ್ತಾಂತವನ್ನು ತಿಳುಹಿಸಿದಳು.

ಮಹಾಪ್ರಾಜ್ಞನಾದ ಇಷ್ಟಶರ್ಮನು ಸಿಂಹಸೇನ ಮಹಾರಾಜನನ್ನು ಕುರಿತು ಕಥೆಯನ್ನು ಹೇಳಲು ಪ್ರಾರಂಭಿಸಿದನು. ಜಂಬೂದ್ವೀಪವನ್ನು ಸುತ್ತಿಕೊಂಡು ಧಾತಕೀಷಂಡವೆಂಬುದಿದೆ. ಅದನ್ನು ಕಾಲೋದಕ ಸಮುದ್ರವು ಸುತ್ತಿಕೊಂಡಿರುತ್ತದೆ. ಅಲ್ಲಿನ ಐರಾವತ ಕ್ಷೇತ್ರದಲ್ಲಿ ಕೋಸಲದೇಶವಿದೆ. ಅಲ್ಲಿ ಅರಿಷ್ಟಪುರವು ಇಂದ್ರನ ಅಮರಾವತಿಯಂತೆ ಅತ್ಯಂತ ಶೋಭಾಯಮಾನವಾಗಿದೆ. ಆ ದೇಶದ ಅರಸು ಪದ್ಮರಥರಾಜ. ಆತನ ಪಟ್ಟಮಹಿಷಿ ಲಕ್ಷ್ಮೀಮತಿ. ಅವನು ಧರ್ಮ ಅರ್ಥ ಕಾಮಗಳನ್ನು ಪರಸ್ಪರ ವಿರೋಧವಿಲ್ಲದ ರೀತಿಯಲ್ಲಿ ಬಹುಕಾಲ ರಾಜ್ಯವಾಳಿದನು. ಆತನಿಗೆ ಮೇಘರಥನೆಂಬ ಪುತ್ರನು ಜನಿಸಿದನು. ಅವನನ್ನು ಅಮರ ವೈಭವದೊಡನೆ ಸಾಕುತ್ತ ಸುಖಸಂಕಥಾ ವಿನೋದದಿಂದ ಇರುತ್ತಿದ್ದನು.

ರಾಜನು ಶಿಷ್ಟಪರಿಪಾಲನೆಯಲ್ಲಿ ತೊಡಗಿ ಜಿನಧರ್ಮಪರಾಯಣನಾಗಿ ಇರುತ್ತಿದ್ದನು. ಹೀಗಿರುವಾಗ ಪದ್ಮರಥನ ಆಸ್ಥಾನಕ್ಕೆ ಒಬ್ಬ ದೂತನು ಬಂದು ಕೈಮುಗಿದು ದೂರದಿಂದಲೆ ನತಮಸ್ತಕನಾಗಿ 'ಮಹಾಪ್ರಭುವೆ! ನಮ್ಮ ಭೂತಗಿರಿ ಜಿನಾಲಯದ ನಂದನ ವನಕ್ಕೆ ದಿವ್ಯ ಮಹಾಯೋಗಿಗಳು ದಯಮಾಡಿಸಿರುವರು. ಅವರು ಬಂದಕಾರಣ ಆರು ಋತುಗಳ ಫಲ ಪುಷ್ಪಗಳುಂಟಾಗಿವೆ' ಎಂದು ಬಿನ್ನವಿಸಿ ಅಕಾಲ ಫಲಪುಷ್ಪಗಳನ್ನು ರಾಜನಿಗೆ ಸಮರ್ಪಿಸಿದನು. ರಾಜನು ಆ ಮುನಿಗಳಿದ್ದ ದಿಕ್ಕಿಗೆ ಏಳಡಿ ಮುಂದೆ ಹೋಗಿ ಪರೋಕ್ಷ ವಂದನೆಯನ್ನು ಮಾಡಿದನು. ಶುಭಸಮಾಚಾರವನ್ನು ತಿಳಿಸಿದ ದೂತನಿಗೆ ಅಂಗಚಿತ್ತ

ವನ್ನು ಕೊಟ್ಟು ಸತ್ಕರಿಸಿದನು. ಮುನಿದರ್ಶನಕ್ಕಾಗಿ ರಾಜವೈಭವದೊಡನೆ ಬಂದು ದೂರದಲ್ಲೆ ಸಕಲವೈಭವಗಳನ್ನು ಬಿಟ್ಟು ಮುನಿಗಳ ಸಮೀಪಕ್ಕೆ ಬಂದನು. ಅಲ್ಲಿಯ ಜಿನಾಲಯದಲ್ಲಿದ್ದ ಜಿನನನ್ನು ಸ್ತುತಿಸಿ ಪೂಜಿಸಿ ಅನಂತರ ಮುನಿಶ್ರೇಷ್ಠರಾದ ಆ ಸ್ವಯಂಪ್ರಭ ಭಟ್ಟಾರಕರನ್ನು ವಿನಯಪೂರ್ವಕ ವಂದಿಸಿ, ಸ್ತುತಿಸಿ ಆತ್ಮನಿಗೆ ಸುಖದ ಮಾರ್ಗವಾವುದೆಂದು ಪ್ರಶ್ನಿಸಿದನು. ಆಗ ಸ್ವಯಂಪ್ರಭ ಭಟ್ಟಾರಕರು 'ಎಲೈ ರಾಜನೆ! ಯಾವುದು ಸಂಸಾರ ದುಃಖದಿಂದ ನಿವೃತ್ತಿಮಾಡಿ ನಿತ್ಯಸುಖವನ್ನೀಯುವುದೊ ಅದೇ ಧರ್ಮವು, ಸಮ್ಯಗ್ದರ್ಶನ ಜ್ಞಾನ ಚಾರಿತ್ರವು' ಎಂದು ಹೇಳಿ ಈ ರತ್ನತ್ರಯಗಳ ಸ್ವರೂಪವನ್ನು ಸಪ್ತ ತತ್ವ, ನವಪದಾರ್ಥ, ಷಡ್ದ್ರವ್ಯ, ಪಂಚಾಸ್ತಿಕಾಯ ಈ ೨೭ ತತ್ವಗಳನ್ನೂ ಚೆನ್ನಾಗಿ ವಿವರಿಸಿದರು. ಗೃಹಸ್ಥರ ಮತ್ತು ಮುನಿಧರ್ಮದ ಸ್ವರೂಪವನ್ನು ವಿಸ್ತಾರವಾಗಿ ಹೇಳಿದರು. ಪದ್ಮರಥಮಹಾರಾಜನು ಬಹಳ ಆನಂದಿತನಾಗಿ ಗುರುಗಳಿಗೆ ಮತ್ತೆ ವಂದಿಸಿ ನಗರಕ್ಕೆ ಹಿಂತಿರುಗಿದನು.

ರಾಜನು ಸಂಧ್ಯಾಕಾಲದಲ್ಲುಂಟಾದ ಉಲ್ಕಾಪಾತವನ್ನು ನೋಡಿ ಶರೀರಾದಿಗಳು ಅಸ್ಥಿರವೆಂದು ತಿಳಿದು ಸಂಸಾರ ಶರೀರ ಭೋಗಗಳಲ್ಲಿ ವಿರಕ್ತರಾಗಿ ಮೇಘರಥನಾದ ಯುವ ರಾಜನಿಗೆ ರಾಜ್ಯದ ಪಟ್ಟವನ್ನು ಕಟ್ಟಿ ಜಿನದೀಕ್ಷೆಯನ್ನು ಸ್ವೀಕರಿಸಲು ಸ್ವಯಂಪ್ರಭ ಭಟ್ಟಾರಕರಲ್ಲಿಗೆ ಬಂದನು. ತಂದೆಯು ದೀಕ್ಷೆಗೆ ಹೋದುದನ್ನು ನೋಡಿ ಸಹಿಸಲಾರದೆ ಮೇಘರಥನೂ ಅವನ ಪರಿಚಾರಕರೂ ರಾಣಿವಾಸದವರೂ ಅವನನ್ನು ಹಿಂಬಾಲಿಸಿ ಬಂದರು.

ರಾಜನು ಎಲ್ಲರನ್ನೂ ಸಂತೈಸಿ ನಗರಕ್ಕೆ ಕಳುಹಿಸಿದನು. ಪಾದಮಾರ್ಗದಿಂದ ಸ್ವಯಂಭುವಿನ ಆಶ್ರಮದ ಅರಣ್ಯವನ್ನು ಸೇರಿದನು. ಆ ಮುನಿಗಳಿಗೆ ಮೂರು ಪ್ರದಕ್ಷಿಣೆ ಮಾಡಿ ಬಹಳ ವಿನಯದಿಂದ ಕೈಮುಗಿದು ನಮಸ್ಕರಿಸಿದನು. ಮುನಿಗಳ ಉಪದೇಶವನ್ನು ಕೇಳಿ ಅಂತರಂಗ ಬಹಿರಂಗ ಪರಿಗ್ರಹವನ್ನು ತೊರೆದು ದಿಗಂಬರ ಮಹಾಮುನಿಯ ದೀಕ್ಷೆಯನ್ನು ಸ್ವೀಕರಿಸಿದನು. ಈತನ ಜೊತೆಯಲ್ಲಿ ಬಂದಿದ್ದ ಐನೂರು ಪ್ರಸಿದ್ಧ ಮಕುಟಬದ್ಧ ರಾಜರುಗಳು ಸಹ ಜಿನದೀಕ್ಷೆಯನ್ನು ಕೈಗೊಂಡರು. ಪಂಚ ಮಹಾವ್ರತಗಳನ್ನು ೨೮ ಮೂಲ ಗುಣಗಳನ್ನು ಧರಿಸಿ ಯತೀಶ್ವರನಾದನು. ಆ ಮುನೀಂದ್ರನು ಚತುರ್ದಶ ಪೂರ್ವದ್ವಾದಶಾಂಗಗಳನ್ನು ಸಂಪೂರ್ಣವಾಗಿ ಅಭ್ಯಸಿಸಿದನು. ಮನವಚನ ಕಾಯಗಳ ಶುದ್ಧಿಯಿಂದಲೂ, ಪಂಚಸಮಿತಿ ತ್ರಿಗುಪ್ತಿಗಳಿಂದಲೂ ಶೋಭಿತನಾಗಿ ರತ್ನತ್ರಯಾರಾಧಕನಾಗಿ ಜಿನಶಾಸನರತ್ನಪ್ರದೀಪಕನಾದನು. ಹದಿನೆಂಟು ಸಾವಿರ ಶೀಲ ಗುಣಗಳಿಂದಲೂ ಎಂಬತ್ತನಾಲ್ಕು ಲಕ್ಷ ಗುಣಗಳಿಂದಲೂ ಶೋಭಿತನಾಗಿ ಆರನೆಯ ಪ್ರಮತ್ತ ಗುಣಸ್ಥಾನವನ್ನು ಹೊಂದಿದನು. ಉತ್ತಮಕ್ಷಮಾದಿ ಹತ್ತು ಧರ್ಮಗಳಿಂದಲೂ ಆಚಾಮ್ಲವರ್ಧನ, ಸಿಂಹನಿಷ್ಕ್ರೀಡಿತ ಮೊದಲಾದ ಮಹೋಪವಾಸಗಳಿಂದಲೂ ಅನಶನಾದವಮೌದರ್ಯ ಮೊದಲಾದ ಅಂತರಂಗ ಬಹಿರಂಗ ತಪಸ್ಸಿನಿಂದಲೂ ಬೇಸಿಗೆಯಲ್ಲಿ ಪರ್ವತದ ಮೇಲೂ, ವರ್ಷಾಕಾಲದಲ್ಲಿ ನದೀ ತೀರದಲ್ಲೂ, ಚಳಿಗಾಲದಲ್ಲಿ ಬಯಲಿನಲ್ಲೂ ವೀರ ತಪಸ್ಸನ್ನು

ಮಾಡುತ್ತ ಬಹಳ ಕೃಶನಾದನು. ಈ ತಪಸ್ಸಿನಿಂದ ಸಪ್ತರ್ಧಿ ಸಂಪನ್ನನಾಗಿ ಎರಡೂ ವರೆ ದ್ವೀಪಗಳಲ್ಲಿರುವ ಅಕೃತ್ರಿಮ ಚೈತ್ಯಾಲಯಗಳ ದರ್ಶನ ಮಾಡುತ್ತ ದರ್ಶನ ವಿಶುದ್ಧಿ ಮೊದಲಾದ ಷೋಡಶ ಭಾವನೆಗಳನ್ನು ಭಾವಿಸಿ, ತೀರ್ಥಕರ ನಾಮವನ್ನು ಸಂಪಾದಿಸಿ, ಅಂತ್ಯದಲ್ಲಿ ಪ್ರಾಯೋಪಗಮನ ಮರಣದಿಂದ ಶರೀರವನ್ನು ತ್ಯಾಗ ಮಾಡಿ, ಸುಖಕ್ಕೆ ಗಣಿ ಯಂತಿರುವ ಅಚ್ಯುತ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರೋಪಮಕಾಲ ದಿವ್ಯಸುಖವ ನುಂಡು ಅಲ್ಲಿಂದ ಚ್ಯುತನಾಗಿ ಜಯಶ್ಯಾಮಾದೇವಿಯ ಗರ್ಭದಲ್ಲಿ **ಅನಂತನಾಥನೆಂಬ** ಪವಿತ್ರ ಹೆಸರಿನಿಂದ ಪುತ್ರನಾಗುವನೆಂದು ವಿಶಿಷ್ಟಶರ್ಮನು ಸವಿಸ್ತಾರವಾಗಿ ಸಿಂಹಸೇನ ಜಯಶ್ಯಾಮೆಯರಿಗೆ ಈ ಕಥೆಯನ್ನು ಹೇಳಿದನು.

ಅನಂತರ ಸಿಂಹಸೇನನು ಇಷ್ಟಶರ್ಮನನ್ನೂ ಮದನಮಂಜರಿಯನ್ನೂ ಸತ್ಕರಿಸಿ ಬೀಳ್ಕೊಟ್ಟನು. ಜಯಶ್ಯಾಮಾದೇವಿಯು ತನ್ನ ಸಹೋದರಿಯ ಅಗಲಿಕೆಯಿಂದ ಬಹಳ ದುಃಖಿತಳಾದಳು. ಈ ಎಲ್ಲಾ ಸಮಾಚಾರ ಕೇಳಿದ ಸಭಾಜನರು ಅತ್ಯಂತ ಹರ್ಷ ಗೊಂಡರು.

ಅಯೋಧ್ಯಾನಗರಿಗೆ ದೇವೇಂದ್ರನ ಅಪ್ಪಣೆಯಂತೆ ಶ್ರೀ ಹ್ರೀ ಧೃತಿ ಮೊದಲಾದ ದಿಕ್ಕನ್ನೆಯರು ಜಯಶ್ಯಾಮಾದೇವಿಯ ಸೇವೆಯನ್ನು ಮಾಡಲು ಬಂದರು. ಕುಬೇರನು ಅನಂತಜಿನನು ಹುಟ್ಟುವ ಆರು ತಿಂಗಳು ಮೊದಲೆ ಪ್ರತಿ ದಿನವೂ ತ್ರಿಕಾಲದಲ್ಲೂ ರತ್ನ ವೃಷ್ಟಿಯನ್ನು ಕರೆದು ತನ್ನ ಅಪೂರ್ವವಾದ ಸೇವೆಯನ್ನು ಸಲ್ಲಿಸಿದನು. ಹೀಗಿರಲಾಗಿ ಜಯಶ್ಯಾಮಾದೇವಿಯು ನಾಲ್ನೀರನ್ನು ಮಿಂದು ಅಂದು ರಾತ್ರಿಯಲ್ಲಿ ತನ್ನ ಪತಿಯಾದ ಸಿಂಹಸೇನನೊಡನೆ ಸುಖಸಂಕಥಾ ವಿನೋದದಿಂದ ನಿದ್ರೆಯಲ್ಲಿದ್ದು ಅಂದಿನ ಬೆಳಗಿನ ಝಾವ ದಲ್ಲಿ ಹದಿನಾರು ಸ್ವಪ್ನಗಳನ್ನು ಕಂಡು ಜಾಗ್ರತೆಯಾಗಿ ಎದ್ದು ಸ್ನಾನಾದಿಗಳನ್ನು ಮಾಡಿ ಪತಿಯ ಸಮೀಪಕ್ಕೆ ಬಂದು ತಾನು ಕಂಡ ಸ್ವಪ್ನಗಳನ್ನು ತಿಳಿಸಿದಳು. ಇದನ್ನು ಕೇಳಿದ ರಾಜನು ಆನಂದಿತನಾಗಿ ಆಕೆಯ ಗರ್ಭದಲ್ಲಿ ತ್ರಿಲೋಕಾಧಿಪತಿಯಾದ ಅನಂತ ಬಲದಿಂದ ಕೂಡಿದ ಜಿನನು ಉದಯಿಸುವನೆಂದು ಹೇಳಿದನು. ಅಚ್ಯುತ ಸ್ವರ್ಗದಲ್ಲಿದ್ದ ಅಹಮಿಂದ್ರನು ಜಯಶ್ಯಾಮಾದೇವಿಯ ಗರ್ಭದಲ್ಲಿ ಕಾರ್ತಿಕಮಾಸದ ಪಾಡ್ಯದಲ್ಲಿ ರೇವತಿ ನಕ್ಷತ್ರದಲ್ಲಿ ಬಂದು ಸೇರಿದನು. ದೇವಿಯರ ಸೇವೆಯಿಂದಲೂ ಸ್ವರ್ಗದ ದಿವ್ಯಾಹಾರಗಳಿಂದಲೂ ದಿನೇ ದಿನೇ ಗರ್ಭವು ಬೆಳೆದು ಒಂಬತ್ತನೆಯ ಮಾಸವು ತುಂಬಿತು. ಒಂಬತ್ತು ಸಾಗರೋಪಮ ಕಾಲ ಕಳೆದ ನಂತರ ಮೂರನೇ ಪಲ್ಯೋಪಮಾನಂತರ ಅಂದರೆ ವಿಮಲ ತೀರ್ಥಂಕರರ್ರ್ ಮುಕ್ತರಾದ ಬಳಿಕ ಇಷ್ಟು ಕಾಲಾನಂತರ ಕಾಶ್ಯಪ ವಂಶಜದಲ್ಲಿ ಅನಂತ ತೀರ್ಥಂಕರನು ಉಚ್ಛಗ್ರಹಗಳು ತಮ್ಮ ತಮ್ಮ ಸ್ಥಾನದಲ್ಲಿರುವಾಗ ಆಷಾಢ ಕೃಷ್ಣ ತ್ರಯೋದಶಿ ರೇವತಿ ಯಲ್ಲಿ ಜಗತ್ತ್ರಯವಲ್ಲಭನಾದ ಪುತ್ರನಾಗಿ ಜನಿಸಿದನು. ಆ ಜಿನಬಾಲಕನ ಜನನವಾದ ನಂತರದಲ್ಲಿ ಅಯೋಧ್ಯಾನಗರಿಯ ನಾಗರಿಕರೆಲ್ಲರೂ ಆನಂದೋತ್ಸವದಲ್ಲಿ ನಲಿದರು. ಇದ ನ್ನರಿದ ಸೌಧರ್ಮೇಂದ್ರನು ಜಿನಬಾಲಕನನ್ನು ತರಿಸಿ ಐರಾವತ ಗಜದ ಮೇಲಿಟ್ಟು ಅನೇಕ ವೈಭವಯುತವಾದ ವಾದ್ಯ, ಸೇನೆ, ನರ್ತನ, ಸಂಗೀತ ಮೊದಲಾದುವುಗಳಿಂದ ಮಹಾ

ಮೇರು ಪರ್ವತದ ಪಾಂಡುಕಶಿಲೆಯಲ್ಲಿ ಸ್ಥಾಪಿಸಿ, ನವರತ್ನ ಖಚಿತವಾದ ಕುಂಭಗಳಿಂದ ಕಲಶಗಳನ್ನು ವಿಧಿಪೂರ್ವಕವಾಗಿ ಅರ್ಚಿಸಿ ಪಂಚಸಮುದ್ರದ ನೀರಿನಿಂದ ಅಭಿಷೇಕ ವನ್ನು ಇಂದ್ರ ಮತ್ತು ಈಶಾನೇಂದ್ರರು ಮಾಡಿದರು. ಸಮಸ್ತ ದೇವತೆಗಳು ಜಿನಬಾಲಕನ ಜನ್ಮಾಭಿಷೇಕವನ್ನು, ಅಷ್ಟವಿಧಾರ್ಚನೆ ಪೂಜೆಯನ್ನು ವೈಭವದಿಂದ ನೆರವೇರಿಸಿ ಆನಂದ ವನ್ನು ಪಡೆದರು. ಅಭಿಷೇಕವಾದ ನಂತರ ಮಹಾವೈಭವದಿಂದ ಚತುರ್ನಿಕಾಯಾಮರ ದೇವತೆಗಳು ಆನಂದೋತ್ಸಾಹದಿಂದ ಅಯೋಧ್ಯಾನಗರಿಗೆ ಬಂದು ಜಿನ ಶಿಶುವಿಗೆ ಅನಂತ ಜಿನ ಎಂದು ನಾಮಕರಣೋತ್ಸವವನ್ನು ಮಾಡಿ ಅವರ ತಂದೆ ತಾಯಿಗೆ ಒಪ್ಪಿಸಿ ಸ್ತೋತ್ರ ಮಾಡಿ ತಂದೆ ತಾಯಿಯರುಗಳನ್ನು ವಂದಿಸಿ ಸತ್ಕರಿಸಿದರು. ಚತುರ್ನಿಕಾಯಾಮರ ರೆಲ್ಲರು ಅನಂತಜಿನನ ಜನ್ಮಾಭಿಷೇಕವನ್ನು ಮಾಡಿ ಸ್ವರ್ಗಕ್ಕೆ ತೆರಳಿದರು. ಆ ಜಿನ ಬಾಲಕನನ್ನು ಪಡೆದ ತಂದೆ ತಾಯಿಯರು ಬಹಳ ಆನಂದವನ್ನು ಪಡೆದರು. ಮಗುವಿನ ಬಾಲಲೀಲೆಯನ್ನು ನೋಡುತ್ತ ಇರಲು ಸ್ತ್ರೀಯರು ಒಬ್ಬರಿಂದ ಮತ್ತೊಬ್ಬರು ತೆಗೆದು ಕೊಂಡು ಆಡಿಸುತ್ತಿದ್ದರು. ಆತನು ತಾರೆಗಳ ಸಮೂಹದಲ್ಲಿ ಚಂದ್ರನಂತೆ ಶೋಭಿಸು ತ್ತಿದ್ದನು. ಕ್ರಮವಾಗಿ ತೊದಲುನುಡಿಗಳನ್ನು ಆಡುತ್ತ ದಿನೇ ದಿನೇ ವೃದ್ಧಿಯನ್ನು ಹೊಂದುತ್ತಿದ್ದನು. ಇದರಿಂದ ಸಮಸ್ತ ಪುರಜನರೂ ದೇವತೆಗಳೂ ಆನಂದವನ್ನು ಪಡೆದರು.

ಛಂದಸ್ಸು ಅಲಂಕಾರ ಕಾಮ ತಂತ್ರ ಸಂಗೀತ ಕಲೆ ಧರ್ಮಾರ್ಥ ಕಾಮ ಮೋಕ್ಷ ರೂಪಚತುಷ್ಟಯ ಸಮಸ್ತವಿದ್ಯಾ ಕಲಾಪೂರ್ಣನಾಗಿ ಮತಿಶ್ರುತಾವಧಿ ಜ್ಞಾನ ಯುಕ್ತನಾದ ಅನಂತಜಿನನು ನಿರಂತರ ವೃದ್ಧಿಯನ್ನು ಹೊಂದಿ ಯೌವನ ಸಂಪನ್ನ ನಾದನು. ತಂದೆ ತಾಯಿಗಳು ಸರ್ವಾಂಗ ಸುಂದರವಾದ ಯೌವನಶಾಲಿಯಾದ ಭದ್ರಾ ಕೃತಿಯುಳ್ಳ ಪುತ್ರನನ್ನು ನೋಡಿ ಆತನಿಗೆ ವಿವಾಹ ಕಾರ್ಯವನ್ನು ಮಾಡಲು ಚಿಂತಿಸಿ ದರು. ಹೀಗೆ ಚಿಂತಿಸುತ್ತಿರುವಾಗ ಸೈನ್ಯಾಧಿಪತಿಯಾದ ಬಲಭದ್ರನೆಂಬವನು ಸಿಂಹಸೇನ ಮತ್ತು ಜಯಶ್ಯಾಮಾದೇವಿಯನ್ನು ಕಂಡು ಕೀರ್ತಿಸೇನನ ಮಗಳಾದ ರತ್ನಮಾಲೆಯು ಸ್ವಾಮಿಗೆ ತಕ್ಕ ವಧುವಾಗಿರುವಳೆಂದು ಬಿನ್ನವಿಸಿಕೊಂಡನು.

ಅಂತೆಯೇ ಸಿಂಹಸೇನ ಮಹಾರಾಜನು ಜಯಶ್ಯಾಮಾದೇವಿಯರು ಕೀರ್ತಿ ಶೇಖರ ಮಹಾರಾಜನಲ್ಲಿಗೆ ಬಂದು ಅನಂತನಾಥಸ್ವಾಮಿಯ ವಿವಾಹವನ್ನು ಮಾಡ ಬೇಕೆಂದು ತಮ್ಮ ಕನ್ಯಾರತ್ನವಾದ ರತ್ನಮಾಲೆಯನ್ನು ಕೊಡಬೇಕೆಂದು ಬಿನ್ನವಿಸಲಾಗಿ ಕೀರ್ತಿಶೇಖರನು ಈ ವಿಷಯವನ್ನು ತಿಳಿದು ಬಹಳ ಆನಂದಿತನಾದನು. ಅದರಂತೆ ಆತನು ತಮ್ಮ ಒಪ್ಪಿಗೆಯನ್ನಿತ್ತನು. ಸಿಂಹಸೇನ ಮಹಾರಾಜನು ಅಯೋಧ್ಯೆಗೆ ಬಂದು ಅನಂತನಾಥಸ್ವಾಮಿಯನ್ನು ಕುರಿತು 'ಸ್ವಾಮಿ! ತಮ್ಮ ಉದಯದಿಂದ ಜಗತ್ತೇ ಪವಿತ್ರವಾಯಿತು. ಸಂಸಾರದ ಕ್ರಮಾನುಗತವಾದ ಪದ್ಧತಿಯಂತೆ ತಮಗೆ ವಿವಾಹ ಕಾರ್ಯವನ್ನು ಮಾಡಬೇಕೆಂದು ನಿಶ್ಚಯಿಸಿದ್ದೇವೆ' ಎಂದು ಬಿನ್ನವಿಸಿಕೊಂಡರು. ಅನಂತ ನಾಥ ಸ್ವಾಮಿಯು ಈ ಎಲ್ಲಾ ವಿಷಯಗಳನ್ನು ಚಿಂತಿಸಿ ತನ್ನ ಮುಗುಳ್ನಗೆಯಿಂದ ವಿವಾಹ ಸಮ್ಮತಿಯನ್ನು ಸೂಚಿಸಿದರು.

ಅನಂತರ ದೇವೇಂದ್ರ ಶಚೀದೇವಿಯರೂ ಸಮಸ್ತ ದಿಕ್ಪಾಲಕರೂ ಅನಂತನಾಥ ಸ್ವಾಮಿಯ ವಿವಾಹದ ಕಾರ್ಯದಲ್ಲಿ ಭಾಗವಹಿಸಿದರು. ವಿವಾಹವು ವೈಭವಯುತವಾಗಿ ನೆರವೇರಿತು. ಅದೇ ಸಮಯದಲ್ಲಿ ಸಿಂಹಸೇನ ಮಹಾರಾಜನು ಅನಂತನಾಥ ಸ್ವಾಮಿಗೆ ರಾಜ್ಯಾಭಿಷೇಕ ವೈಭವವನ್ನು ನೆರವೇರಿಸಿ ರಾಜ್ಯವನ್ನು ವಹಿಸಿಕೊಟ್ಟನು.

ವಿವಾಹ ಮಹೋತ್ಸವವಾದನಂತರ ವಸಂತಋತು ಬರಲಾಗಿ ನಾನಾ ವಿಧ ಕ್ರೀಡೆಗಳಿಂದ ಮನೋಲ್ಲಸಿತರಾಗಿ ವಸಂತೋತ್ಸವವನ್ನು ವೈಭವದಿಂದ ನೆರವೇರಿಸಿ ಅನಂತ ನಾಥಸ್ವಾಮಿ ರತ್ನಮಾಲೆಯರು ಅತ್ಯಂತ ಆನಂದದಿಂದ ಸಂಸಾರ ಸುಖವನ್ನು ಅನುಭವಿಸಿದರು.

ಅನಂತನಾಥ ರತ್ನಮಾಲೆಯರ ವಿವಾಹಾನಂತರ ಅವರನ್ನು ವಾರಾಂಗನಾ ಸ್ತ್ರೀಯರು, ಬಂಧು ಬಾಂಧವರು ವೈಭವದಿಂದ ಸ್ವಾಗತಿಸಿದರು. ಅಂದಿನ ಸಮಯದಲ್ಲಿ ಸಾಯಂಕಾಲದ ಚಂದ್ರೋದಯವಿರುತ್ತಿರಲು ನವದಂಪತಿಗಳು ನಾನಾ ವಿಧವಾದ ಲತಾ ಮಂಟಪಗಳಲ್ಲಿ, ಮಾವಿನಮರದ ತೋಟಗಳಲ್ಲಿ, ಸಂಪಿಗೆ ಮರದ ವನಗಳಲ್ಲಿ, ಮಲ್ಲಿಕಾ ಮಾಲೆಯ ವಿವಿಧ ಸ್ಥಳಗಳಲ್ಲಿ ಆನಂದದಿಂದ ಕಾಲ ಕಳೆದರು. ವಿವಿಧ ಪ್ರಜಾವರ್ಗವು ಇವರುಗಳನ್ನು ಸಂದರ್ಶಿಸಿ ಆನಂದತುಂದಿಲರಾದರು.

ಆ ಅಯೋಧ್ಯಾನಗರಿಯಲ್ಲಿ ಕೌಮುದಿ ಉತ್ಸವದ ಸಮಯದಲ್ಲಿ ಸಮಸ್ತನಾಗರಿಕರು ವಿವಿಧ ಉಡುಪುಗಳಿಂದಲಂಕರಿಸಿಕೊಂಡು ವಿವಿಧ ಅಂಗಡಿಗಳಲ್ಲಿ ತಮತಮಗೆ ಬೇಕಾದ ವಸ್ತುವನ್ನು ತೆಗೆದು ಆನಂದದಿಂದ ವಿಹರಿಸುತ್ತಿದ್ದರು. ಅಲ್ಲಿಯ ಸೂಳೆಗೇರಿಯ ವಿಟ ವಿಟಗಾರ್ತಿಯರು ವಿವಿಧ ಶೃಂಗಾರಗಳಿಂದಲೂ ವಿವಿಧ ವಿನೋದಾವಳಿಗಳಿಂದಲೂ ಕಾಲಕಳೆಯುತ್ತಿದ್ದರು. ಸ್ತ್ರೀಯರು ಗಾನದಿಂದಲೂ ವಿವಿಧ ನೃತ್ಯಗಳಿಂದಲೂ ವಿಟರನ್ನು ಸಂತೋಷಗೊಳಿಸುತ್ತಿದ್ದರು. ಅನಂತನಾಥಸ್ವಾಮಿಯು ದೇವೋಪನೀತವಾದ ಸಮಸ್ತ ಭೋಗೋಪಭೋಗವಸ್ತುಗಳಿಂದಲೂ ವಿವಿಧ ಸಂಗೀತ, ನರ್ತನ, ವಾದ್ಯಗಳಿಂದಲೂ ಸಮಯವನ್ನು ಕಳೆಯುತ್ತಿದ್ದನು. ಅಯೋಧ್ಯಾನಗರಿಯ ನಾಗರಿಕರಾದ ಸ್ತ್ರೀಪುರುಷರು ತಮ್ಮ ತಮ್ಮ ವೈಭವಕ್ಕೆ ತಕ್ಕಂತೆ ನಾನಾ ವಿಧವಾದ ಭೋಗೋಪಭೋಗಗಳಿಂದ ಕೂಡಿ ಕೌಮುದಿ ಉತ್ಸವವನ್ನು ಬಹುವೈಭವದಿಂದ ನೆರವೇರಿಸಿದರು.

ಅಯೋಧ್ಯಾನಗರಿಯಲ್ಲಿ ಪಟ್ಟಾಭಿಷಿಕ್ತನಾದ ಅನಂತಸ್ವಾಮಿಯು ದೇವೋಪನೀತವಾದ ಭೋಗೋಪಭೋಗ ವಸ್ತುಗಳನ್ನು ಬಹುದೀರ್ಘಕಾಲ ಅಂದರೆ ೫೦ ಲಕ್ಷದವರೆಗೆ ರಾಜ್ಯ ಸುಖವನನುಭವಿಸುತ್ತಿರಲು ಒಂದುದಿನ ವರ್ಷಾಕಾಲವು ಬಂದಿತು. ಭೀಕರವಾದ ಗಾಳಿಯಿಂದಲೂ ಕಾರ್ಗತ್ತಲೆಯಿಂದ ಮುಚ್ಚಿದ ಮೋಡಗಳಿಂದಲೂ ಭಯಂಕರವಾದ ಮಿಂಚು ಗುಡುಗುಗಳಿಂದಲೂ ಕೂಡಿದ ಆ ದಿನವು ಪ್ರಳಯ ಕಾಲದಂತೆ ತೋರುತ್ತಿದ್ದಿತು. ಅನಂತ ನಾಥನು ಆ ಕಾಲದ ವೈಪರೀತ್ಯವನ್ನು ನೋಡಿ ಸಂಸಾರ ಶರೀರ ಭೋಗಗಳಲ್ಲಿ ವೈರಾಗ್ಯ ಪರನಾದನು. ಸಂಸಾರದ ಸುಖವು ಕ್ಷಣಭಂಗುರವಾದುದೆಂದು ಭಾವಿಸುತ್ತ ತನ್ನ ತಂದೆಯಾದ ಸಿಂಹರಥನನ್ನೂ ತನ್ನ ತಾಯಿಯಾದ ಜಯಶ್ಯಾಮಾದೇವಿಯನ್ನೂ ಪರಿಜನ ಪುರ

ಜನರನ್ನು ಬರಿಸಿ ಧರ್ಮದಿಂದ ಬಾಹಿರರಾದವರಿಗೆ ಸಂಸಾರದಲ್ಲಿ ಯಾವ ಕಡೆಯೂ ಸುಖವಿಲ್ಲ; ಎಲ್ಲಿಯವರೆಗೆ ಕೈವಲ್ಯಸುಖ (ಮುಕ್ತಿಸುಖ)ವನ್ನು ಹೊಂದುವುದಿಲ್ಲವೋ ಅಲ್ಲಿಯವರೆಗೂ ಈ ಆತ್ಮನು ಸಂಸಾರಚಕ್ರದಲ್ಲಿ ತಿರುಗುತ್ತಿರುತ್ತಾನೆ; ಈ ಆತ್ಮನು ಉತ್ತಮ ಮಧ್ಯಮ ಜಘನ್ಯ ವಿವಿಧ ಕ್ಷೇತ್ರಗಳಲ್ಲಿ ದೇವತೆಗಳಾಗಿ ಜ್ಯೋತಿಷ್ಕರಾಗಿ ಸಾಗರೋಪಮ ಪಲ್ಯೋಪಮ ಪರಿಮಿತವಾದ ಆಯುಷ್ಯಗಳನ್ನು ಪಡೆದು ಆ ಸುಖಗಳನ್ನು ಅನುಭವಿಸಿ ಮನುಷ್ಯರಾಗಿ ಹುಟ್ಟುತ್ತಾರೆ; ಅಂಥಾ ಜೀವರುಗಳು ಮೃತ್ಯುವನ್ನಪ್ಪುತ್ತಾರೆಂದ ಮೇಲೆ ಮನುಷ್ಯಜಾತಿಯ ಜೀವರಾಶಿಗಳ ಮೃತ್ಯುವು ಲೆಕ್ಕಿಸಲಾಗುತ್ತದೆಯೆ ಎಂಬುದಾಗಿ ವಿವರಿಸಿದರು. ಹಾಗೆಯೆ ರತ್ನಪ್ರಭಾದಿ ಏಳು ನರಕಗಳಲ್ಲಿ ನಾನಾ ವಿಧವಾದ ಮಹತ್ತರ ದುಃಖವನ್ನು ಅನುಭವಿಸುತ್ತಿರುವ ನರಕಾವಸ್ಥೆಯನ್ನು ವಿವರಿಸುತ್ತಾರೆ.

ಜೀವಾತ್ಮರುಗಳು ಅನಾದಿಯಿಂದ ಕರ್ಮಬದ್ಧರಾಗಿದ್ದು ತಮ್ಮದಲ್ಲದ ವಸ್ತುಗಳನ್ನು ತಮ್ಮದೆಂಬುದಾಗಿ ಅಹಂಕಾರ ಮಮಕಾರಗಳಿಂದ ಸಂಸಾರದಲ್ಲಿ ನಿರಂತರ ದುಃಖವನ್ನು ಅನುಭವಿಸುತ್ತಿರುವರು. ಬುದ್ಧಿವಂತರಾದವರು ಸಂಸಾರ ದುಃಖವನ್ನು ಮನನಮಾಡಿ ನಿತ್ಯಸುಖವನ್ನು ಲಾಭಮಾಡಿಕೊಳ್ಳುವರು. ಹೀಗೆ ದಿವ್ಯಾಮೃತವಾದ ಧರ್ಮವನ್ನು ಬೋಧಿಸಲು ವಿನೀತರಾದ ಮಕುಟಬದ್ಧರಾಜರುಗಳು ಸರ್ವರು ಬಹಳ ಆನಂದವನ್ನು ಹೊಂದಿ ಎಲ್ಲರೂ ಸ್ವಾಮಿಯ ಜೊತೆಯಲ್ಲಿಯೆ ದೀಕ್ಷೆಯನ್ನು ಸ್ವೀಕರಿಸಲು ಸಿದ್ಧರಾದರು.

ಇಷ್ಟರಲ್ಲೆ ಬ್ರಹ್ಮಲೋಕದ ಎಂಟು ವಿಧ ಲೌಕಾಂತಿಕ ದೇವತೆಗಳು ಸೌಧರ್ಮಾದಿ ಸಮಸ್ತ ಪರಿವಾರ ದೇವತೆಗಳು ಸೋಮಾದಿ ದಿಕ್ಪಾಲಕರುಗಳು ಭವನ, ವ್ಯಂತರ, ಜ್ಯೋತಿಷ್ಕ ಮೊದಲಾದ ದೇವತೆಗಳು ಅಯೋಧ್ಯಾನಗರಿಯ ಅನಂತನಾಥರ ಸಭಾಮಂಟಪಕ್ಕೆ ಬಂದು ವಿನೀತ ಮಸ್ತಕರಾಗಿ ಸ್ತೋತ್ರಮಾಡುತ್ತ 'ವೃದ್ಧಿಯನ್ನು ಹೊಂದು' 'ವಿಜಯಶಾಲಿಯಾಗು' ಇತ್ಯಾದಿ ಮಂಗಳ ಶಬ್ದಗಳಿಂದ ವೈರಾಗ್ಯವನ್ನು ಸ್ಥಿರೀಕರಿಸಿ ನಮಿಸಿದರು. ಸಮಸ್ತ ದೇವತೆಗಳು ತಮತಮಗೆ ನಿಯುಕ್ತವಾದ ಕಾರ್ಯದಲ್ಲಿ ನಿರತರಾದರು. ಅನಂತನಾಥಸ್ವಾಮಿಯು ತಮ್ಮ ಪುತ್ರನಾದ ಅನಂತಕರ್ಮವಿಜಯನಿಗೆ ಪಟ್ಟಾಭಿಷೇಕವನ್ನು ಮಾಡಿ ರಾಜ್ಯಭಾರವನ್ನು ವಹಿಸಿದನು. ತಂದೆ ತಾಯಿಯರನ್ನು ಮಗನನ್ನು ಸಂತೈಸಿದನು. ದೇವನಿರ್ಮಿತವಾದ ಶಿಬಿಗೆಯನ್ನು ಹತ್ತಿದನು. ಸಾವಿರಾರು ಮಕುಟಬದ್ಧ ರಾಜರು ಅವನ ಜೊತೆಯಲ್ಲಿ ತಪೋವನಕ್ಕೆ ತೆರಳಿದರು. ಹೀಗೆ ನಡೆದ ಅವರು ಸಹೇತುಕವೆಂಬ ವನವನ್ನು ಪ್ರವೇಶಿಸಿ, ಆ ವನದ ಮಧ್ಯಪ್ರದೇಶದಲ್ಲಿ ಮಣಿಮಯ ಮಂಟಪಗಳಿಂದಲೂ ತಳಿರು ತೋರಣಗಳಿಂದಲೂ ಧ್ವಜ ಪತಾಕೆಗಳಿಂದಲೂ ಅಲಂಕೃತವಾದ ಚಂದ್ರಕಾಂತ ಶಿಲೆಯ ಮೇಲೆ ಪೂರ್ವಾಭಿಮುಖವಾಗಿ ಕುಳಿತು ಸಮಸ್ತವಸ್ತ್ರಭೂಷಣಾದಿಗಳನ್ನು ತ್ಯಜಿಸಿ, ದಿಗಂಬರ ಮಹಾಮುನಿಯಾದರು. ಆಗ ದೇವೇಂದ್ರನೂ ಶಚೀದೇವಿಯರೂ ಆರತಿಯನ್ನೆತ್ತುತ್ತಿರಲು ಮಹಾಮಂಗಳ ವಾದ್ಯಗಳು ಭೋರ್ಗರೆದವು. ಆಗ ಅನಂತನಾಥಸ್ವಾಮಿಯವರು "ನಮಃ ಸಿದ್ಧೇಭ್ಯ" ಎಂಬ ವಚನವನ್ನು ಹೇಳುತ್ತ ಪಂಚಮುಷ್ಟಿಗಳಿಂದ ಸಮಸ್ತ ತಲೆಗೂದಲನ್ನು ಕಿತ್ತು ಹಾಕಿದರು. ಜ್ಯೇಷ್ಠಮಾಸದ

ಕೃಷ್ಣ ಪಕ್ಷದ ದ್ವಾದಶಿ ತಿಥಿಯ ಸಾಯಂಕಾಲದ ರೇವತಿ ನಕ್ಷತ್ರದಲ್ಲಿ ಅನಂತನಾಥಸ್ವಾಮಿ ದಿಗಂಬರ ಮಹಾಮುನಿಯಾದರು. ಅವರಿಗೆ ಮನಃಪರ್ಯಾಯ ಜ್ಞಾನವುಂಟಾಯಿತು. ಸಾವಿರಾರು ರಾಜರುಗಳು ದೀಕ್ಷೆಯನ್ನು ಸ್ವೀಕರಿಸಿದರು. ಸ್ವಾಮಿ ಅನಂತನಾಥರನ್ನು ಬಹುವಿಧವಾಗಿ ಸ್ತೋತ್ರಮಾಡಿ ಆನಂದ ನರ್ತನವನ್ನು ಮಾಡಿ ಸಮಸ್ತ ದೇವಾದಿ ದೇವತೆಗಳು ದೀಕ್ಷಾಕಲ್ಯಾಣವನ್ನು ವೈಭವದಿಂದ ನೆರವೇರಿಸಿ ಸ್ವರ್ಗಾಭಿಮುಖವಾಗಿ ಹೊರಟು ಹೋದರು. ಅನಂತನಾಥಸ್ವಾಮಿಯವರು ಮುನಿಯಾದ ಎರಡನೆಯ ದಿನ ಷಷ್ಠೋಪವಾಸ ನಿಯಮವನ್ನು ಪರಿಪಾಲಿಸುವುದರಲ್ಲಿ ನಿರತರಾದರು. ತಪೋನಿಷ್ಠರಾದ ಅನಂತನಾಥರು ಯಾವ ನಗರಿಯಲ್ಲಿ ಸುಖ ಭೋಗಾದಿಗಳನ್ನು ಅನುಭವಿಸುತ್ತಿದ್ದರೋ ಆ ಅಯೋಧ್ಯಾ ನಗರಿಗೆ ಆಹಾರ ನಿಮಿತ್ತವಾಗಿ ದಿಗಂಬರ ಮಹಾಮುನಿಯಾಗಿ ಆಗಮಿಸಿದರು. ವಿಶಾಖ ನೃಪನೆಂಬ ಅರಸನು ಚರಿಗೆಗೆ ಬಂದ ಅನಂತನಾಥರನ್ನು ನವಧಾಭಕ್ತಿಯಿಂದ ತಡೆದು ದುಗ್ಧಾಹಾರವನ್ನು ಕೊಟ್ಟು ಕೃತಾರ್ಥನಾದನು. ದೇವತೆಗಳು ದಾನ ಮತ್ತು ಪಾತ್ರತೆಯನ್ನು ನೋಡಿ ಪಂಚಾಶ್ಚರ್ಯ (ರತ್ನವೃಷ್ಟಿ ಮೊದಲಾದ)ವನ್ನು ಕರೆದರು. ಅನಂತನಾಥರು ಆಹಾರ ಸ್ವೀಕರಿಸಿದನಂತರ ವನದ ಕಡೆ ತೆರಳಿದರು. ಆ ವನದ ಮಧ್ಯದಲ್ಲಿ ಬೆಳ್ಳಗೂ ಸ್ವಚ್ಛವಾಗಿಯೂ ಇರುವ ಕಲ್ಲಪಾಠದಲ್ಲಿ ಕುಳಿತು ಧ್ಯಾನಾರೂಢರಾದರು. ಒಂದು ತಿಂಗಳು ಪ್ರತಿಯೋಗಧಾರಿಗಳಾಗಿದ್ದ ಅನಂತಸ್ವಾಮಿಯನ್ನು ಭವನವಾಸಿ ವ್ಯಂತರರು ವನದೇವತೆಗಳು ಮಹಾವೈಭವದಿಂದ ಜಲ, ಗಂಧ, ಅಕ್ಷತೆ, ಪುಷ್ಪ, ನೈವೇದ್ಯ, ದೀಪ, ಧೂಪ, ಫಲ ಮೊದಲಾದ ಅಷ್ಟದ್ರವ್ಯಗಳಿಂದ ಪೂಜಿಸುತ್ತ ಸ್ತೋತ್ರ ಮಾಡುತ್ತ ತಮ್ಮ ಅಪೂರ್ವವಾದ ಭಕ್ತಿಯನ್ನು ವ್ಯಕ್ತಪಡಿಸುತ್ತಿದ್ದರು. ಗಿಳಿಗಳು ಹಾಡುತ್ತಿದ್ದುವು. ದುಂಬಿಗಳು ಝೇಂಕರಿಸುತ್ತಿದ್ದುವು. ಕೋಗಿಲೆಗಳು ಮನೋಹರವಾದ ಶಬ್ದವನ್ನು ಮಾಡುತ್ತಿದ್ದುವು. ಮಂದಮಾರುತವು ಬೀಸುತ್ತಿದ್ದಿತು.

ಇವರ ತಪೋಮಹಿಮೆಯಿಂದ ಪ್ರಾಣಿಗಳೆಲ್ಲವೂ ತಮ್ಮ ಜಾತಿವೈರವನ್ನು ಮರೆತು ವಿಹರಿಸುತ್ತಿದ್ದುವು. ಅನಂತಜಿನರು ಘೋರತಪವನ್ನಾಚರಿಸಿ ಅಷ್ಟಮಹಾವೃದ್ಧಿಯನ್ನು ಪಡೆದ ಔಷಧಿ, ರಸ, ಅಕ್ಷೀಣವೃದ್ಧಿ ಮೊದಲಾದವನ್ನು ಪಡೆದು ಸದಾ ಯೋಗಾರೂಢರಾಗಿ ಆತ್ಮಚಿಂತೆಯಲ್ಲಿ ನಿರತರಾದರು. ಅವರು ದೀರ್ಘಕಾಲ ತಪಸ್ಸು ಮಾಡುತ್ತ ಅನೇಕ ಗ್ರಾಮ ನಗರಗಳಲ್ಲಿ ವಿಹರಿಸುತ್ತ ಧರ್ಮೋಪದೇಶವನ್ನು ಮಾಡುತ್ತ ಎರಡು ವರುಷಗಳನ್ನು ಕಳೆದರು. ಮೌನವನ್ನು ಧರಿಸಿ ಅರಳಿ ಮರದ ಕೆಳಗೆ ಕೇವಲ ಜ್ಞಾನವನ್ನು ಪಡೆಯುವುದಕ್ಕೋಸ್ಕರವಾಗಿ ಪ್ರತಿಮಾಯೋಗಧಾರಿಯಾಗಿಯೂ ಶುದ್ಧೋಪಯೋಗವುಳ್ಳವರಾಗಿಯೂ ಪೂರ್ವಾಭಿಮುಖವಾಗಿ ಕುಳಿತು ಧ್ಯಾನಾರೂಢರಾದರು. ಸಮ್ಯಕ್ತ್ವಜ್ಞಾನ ದರ್ಶನ ಸಿದ್ಧಪರಮೇಷ್ಠಿಗಳ ಅಷ್ಟಗುಣಾರಾಧಕರಾಗಿಯೂ ನಾಲ್ಕು ಪ್ರಕಾರವಾದ ಧರ್ಮಧ್ಯಾನದಲ್ಲಿ ನಿರತರಾಗಿಯೂ ದ್ವಾದಶಾನುಪ್ರೇಕ್ಷೆಗಳನ್ನು ಭಾವಿಸುತ್ತಾ ಲೋಕಸ್ವರೂಪವನ್ನು ಚಿಂತಿಸುತ್ತಾ ಸಂಸ್ಥಾನವಿಚಯದಲ್ಲಿ ನಿಶ್ಚಿಂತರಾಗಿ ಕ್ಷಾಯಿಕ ಸಮ್ಯಗ್ದೃಷ್ಟಿಯನ್ನು ತಳೆದವರಾದರು. ಅನಂತರ ಅವರು ಜ್ಞಾನ

ವೈರಾಗ್ಯ ಸಂಪನ್ನರಾಗಿ ಪ್ರಮತ್ತ, ಅಪ್ರಮತ್ತ ಗುಣಗಳನ್ನು ಕಳೆದು ಶುದ್ಧೋಪ ಯೋಗದೊಳಿದ್ದು ಕ್ಷಪಕಶ್ರೇಣಿಯನ್ನು ಏರಿದವರಾಗಿ ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣಗಳನ್ನು ಕ್ರಮವಾಗಿ ಏರಿ, ಸಮಸ್ತ ಕರ್ಮಗಳನ್ನು ನಿರ್ಜರೆಮಾಡುತ್ತ ಪ್ರತಿಸಮಯದಲ್ಲು ವಿಶುದ್ಧಿ ಪರಿಣಾಮವುಳ್ಳವರಾಗಿ, ಲೋಭ ಸಂಜ್ವಲ ಕಷಾಯಾದಿ ಗಳನ್ನು ನಷ್ಟಮಾಡಿ, ಸೂಕ್ಷ್ಮ ಸಾಂಪರಾಯಗುಣಸ್ಥಾನವನ್ನು ಹನ್ನೆರಡನೆಯ ಗುಣ ಸ್ಥಾನವಾದ ಕ್ಷೀಣಕಷಾಯ ಗುಣಸ್ಥಾನದಲ್ಲಿ ೨೮ ಮೋಹನೀಯ ಪ್ರಕೃತಿಗಳನ್ನು ಸಂಪೂರ್ಣವಾಗಿ ನಾಶಮಾಡಿ ಯಥಾಖ್ಯಾತ ಚಾರಿತ್ರವನ್ನು ಧರಿಸಿ ಏಕತ್ವ ವಿತರ್ಕ ವಿಚಾರವೆಂಬ ಚರಮ ಶುಕ್ಲಧ್ಯಾನದಲ್ಲಿ ನಿರತರಾಗಿ ನಿದ್ರಾನಿದ್ರಾ ಪ್ರಚಲಾಪ್ರಚಲೆಗಳನ್ನು ನಷ್ಟಮಾಡಿ ಹದಿಮೂರನೆಯ ಅರ್ಹಂತ್ಯಾವಸ್ಥೆಯನ್ನು ಹೊಂದಿ ಕೇವಲ ಜ್ಞಾನವನ್ನು ಪಡೆದರು.

ಅನಂತನಾಥಸ್ವಾಮಿಯವರಿಗೆ ಕೇವಲಜ್ಞಾನವಾಗುತ್ತಲೇ ಐದುಸಾವಿರ ಬಿಲ್ಲು ಪ್ರಮಾಣದ ಎತ್ತರದಲ್ಲಿ ಕೇವಲ ಜ್ಞಾನಿಯಾದ ಪರಮಾತ್ಮನು ಕೋಟಿ ಚಂದ್ರ ಸೂರ್ಯರ ಪ್ರಭೆಗಿಂತಲು ಅತಿ ಮಿಗಿಲಾದ ಪ್ರಕಾಶಮಾನವಾದ ಪರಮೌದಾರಿಕ ಶರೀರ ಯುಕ್ತ ರಾಗಿ ಆಕಾಶಾಂಗಣದಲ್ಲಿ ನಿಂತರು.

ಅನಂತನಾಥರ ಘಾತಿಕರ್ಮಗಳ ಜಯವು ಲೋಕದ ಸಂತಾಪವನ್ನು ದೂರ ಮಾಡಿ ಅದನ್ನು ಶಾಂತಪಡಿಸುತ್ತಿರಲು ಜಯಶೀಲರಾದ ಆ ಸ್ವಾಮಿಯ ಕೈವಲ್ಯೋತ್ಪತ್ತಿ ಯೆಂಬ ಗಾಳಿಹೊಡೆತದಿಂದ ಮೂರುಲೋಕದಲ್ಲಿ ದಿವ್ಯವಚನವನ್ನು ಕೇಳಬೇಕೆಂಬ ಸಂಭ್ರಮವುಂಟಾಯಿತು.

ಕೇವಲಜ್ಞಾನವೆಂಬ ಪೂರ್ಣಚಂದ್ರನು ಉದಯವಾಗಲಾಗಿ ಜಗತ್ತೆಂಬ ಸಮುದ್ರವು ಸಂತೋಷಗೊಂಡಿತು, ಹಾಗೆಯೇ ವೃದ್ಧಿಯನ್ನು ಹೊಂದಿತು. ದೇವೇಂದ್ರನು ತನ್ನ ಅವಧಿಜ್ಞಾನದಿಂದ ಅನಂತನಾಥರಿಗೆ ಕೇವಲಜ್ಞಾನವಾಗಿರುವುದನ್ನು ತಿಳಿದು ಶಚೀದೇವಿಯೊಡನೆ ಭರತ ಕ್ಷೇತ್ರದ ಅಯೋಧ್ಯಾನಗರಿಗೆ ಹೊರಡಲು ಉದ್ಯುಕ್ತನಾದನು. ಪ್ರಯಾಣಭೇರಿ ಹೊಡೆಯಲಾಗಿ ಸಮಸ್ತ ದೇವಾದಿ ದೇವತೆಗಳು ತಮ್ಮ ತಮ್ಮ ಆಭೂಷಣವಾಹನ ಸಮೇತರಾಗಿ ಪಂಚವಿಧವಾದ ವಾದ್ಯಗಳೊಡನೆ ಮಹಾವೈಭವ ದಿಂದ ಹೊರಟರು. ಸಮಸ್ತ ದೇವತೆಗಳು ಜಯ ಜಯಾಕಾರವನ್ನು ಮಾಡುತ್ತಲು, ಗಂಧರ್ವ ದೇವತೆಗಳು ಹಾಡುತ್ತಲು, ಅಪ್ಸರ ಸ್ತ್ರೀಯರು ನರ್ತನ ಮಾಡುತ್ತಲು, ಸೈನ್ಯ ರೂಪವಾದ ದೇವತೆಗಳು ಮಹಾವೈಭವದಿಂದಲೂ ಆನಂದದಿಂದಲೂ ಹೊರಟಿತು. ಆಕಾಶದಿಂದಿಳಿಯುತ್ತಿರುವ ಸಮಸ್ತ ದೇವತೆಗಳನ್ನು ನೋಡಿದರೆ ಇದೇನು ಬೇರೊಂದು ಸ್ವರ್ಗವು ನಿರ್ಮಿತವಾಯಿತೋ ಎಂಬಂತೆ ಭಾಸವಾಗುತ್ತಿತ್ತು. ಈ ಮೊದಲೇ ದೇವೇಂದ್ರನು ಕುಬೇರನಿಗೆ ಸಮವಸರಣ ಮಂಟಪವನ್ನು ರಚಿಸಲು ಆಜ್ಞೆಯಿತ್ತಿದ್ದನು. ಆ ಸಮಸ್ತ ದೇವತೆಗಳು ಮಹಾವೈಭವದಿಂದ ಬಂದು ಸಮವಸರಣದ ಮಹಾವಿಭೂತಿ ಯನ್ನು ನೋಡಿ ಬಹಳ ಆನಂದಿತರಾದರು.

ಆ ಸಮವಸರಣ ಭೂಮಿಯು ಶ್ರೇಷ್ಠವಾದ ಇಂದ್ರನೀಲ ರತ್ನಗಳಿಂದ ನಿರ್ಮಿತವೂ ಪ್ರಕಾಶಮಾನವಾದ ನೆಲಗಟ್ಟುಳ್ಳುದೂ ಆದ ಹನ್ನೆರಡು ಯೋಜನ ವಿಸ್ತಾರವುಳ್ಳುದಾಗಿದ್ದಿತು. ಇಂದ್ರನೀಲ ರತ್ನಗಳಿಂದ ನಿರ್ಮಿತವೂ ವರ್ತುಲಾಕಾರವೂ ಆದ ಆ ಸಮವಸರಣ ಭೂಮಿಯು ಮೂರು ಲೋಕದ ಲಕ್ಷ್ಮಿಯ ಮುಖವನ್ನು ನೋಡುವ ಮಂಗಳಕರವಾದ ಕನ್ನಡಿಯಂತೆ ಪ್ರಕಾಶಿಸುತ್ತಿತ್ತು. ಆ ಸಮವಸರಣವು ರತ್ನಧೂಳಿಯಿಂದ ವ್ಯಾಪಕವಾಗಿದ್ದಿತು. ರತ್ನಧೂಳಿಯ ಸಾಲೆಯ ಕಂಬಗಳಲ್ಲಿ ವಿವಿಧ ರತ್ನಮುತ್ತುಗಳ ಸರಗಳು ಜೋಲುತ್ತ ಜನರಿಗೆ ಆನಂದವನ್ನು ಉಂಟುಮಾಡುತ್ತಿದ್ದುವು. ಆ ರತ್ನಧೂಳಿ ಸಾಲೆಯ ನಾಲ್ಕು ದಿಕ್ಕಿನ ಮಹಾದ್ವಾರದಲ್ಲಿ ಭಂಗಾರದಿಂದ ನಿರ್ಮಿತವೂ ಮಹೋನ್ನತವೂ ಮಾನವರ ಗರ್ವವನ್ನು ನಷ್ಟಮಾಡುವುದೂ ದೇವ ಮನುಷ್ಯರಿಂದ ಪೂಜಿಸಲ್ಪಟ್ಟುದೂ ಆಗಿ ಮಾನಸ್ತಂಭಗಳು ಅಧಿಕವಾಗಿ ಪ್ರಕಾಶಿಸುತ್ತಿದ್ದುವು. ಆ ಮಾನಸ್ತಂಭಗಳು ಧ್ವಜಪತಾಕೆಗಳಿಂದ ಅಲಂಕೃತವಾಗಿದ್ದುವು. ನಿರ್ಮಲವಾದ ಜಲಗಳಿಂದಲೂ ಗಂಗಾನದಿಯಂತೆಯೂ ಅಲ್ಲಿಯ ಕಂದಕಗಳು ಅತ್ಯಂತ ಶೋಭಾಯಮಾನವಾಗಿದ್ದವು. ಅಲ್ಲಿಯ ಲತಾವನಗಳು ಪುಷ್ಪಗಳಿಂದ ಕೂಡಿ ಶೋಭಿಸುತ್ತಿದ್ದುವು. ಆಕಾಶ ಪ್ರದೇಶವನ್ನು ಹೊಂಬಣ್ಣವನ್ನಾಗಿ ಮಾಡಿದ ಇಂದ್ರಧನುಸ್ಸುಗಳು ನಿಜವಾಗಿ ಕೋಟೆಯ ನೆಪದಿಂದ ಆ ಭೂಮಿಯನ್ನು ಹೊಂದಿ ಅಲಂಕರಿಸಿದ್ದುವು. ಅಲ್ಲಿಯ ನಾಲ್ಕು ದಿಕ್ಕಿನ ಕೋಟೆಗಳು ವಿಜಯಾರ್ಧ ಪರ್ವತದ ಬೆಳ್ಳಿಯ ಬೆಟ್ಟದ ಶಿಖರದಂತೆ ಶೋಭಿಸಿದ್ದುವು. ಗರುಡ, ಸಿಂಹ, ಚಕ್ರ, ನಾಗ, ಪಕ್ಷಿಗಳೇ ಮೊದಲಾದ ಚಿಹ್ನೆಗಳುಳ್ಳ ಧ್ವಜಪತಾಕೆಗಳು ನಾಲ್ಕು ದಿಕ್ಕಿನಲ್ಲಿ ಬೆಳಗುತ್ತಿದ್ದುವು. ಅನೇಕ ಕಲ್ಪವೃಕ್ಷಗಳು ವಿವಿಧ ಫಲಗಳಿಂದ ಭರಿತವಾಗಿ ವಿಶ್ರಮಿಸಿಕೊಳ್ಳುವವರಿಗೆ ನೆರವನ್ನು ಕೊಡುವವುಗಳಾಗಿದ್ದುವು. ಸಾವಿರ ಮುಖಭಾಗವುಳ್ಳ ಧರ್ಮಚಕ್ರರತ್ನವನ್ನು ಧರಿಸಿರುವ ಸರ್ವಾಹ್ಣ ಯಕ್ಷನು ನಾಲ್ಕು ದಿಕ್ಕಿನಲ್ಲಿ ಅನೇಕ ಶೃಂಗಾರವನ್ನು ಧರಿಸಿ ಅತ್ಯಂತ ಶೋಭಾಯಮಾನನಾಗಿದ್ದನು. ಅಷ್ಟಮಂಗಲ ದ್ರವ್ಯಗಳಿಂದ ಆ ಸಮವಸರಣ ಭೂಮಿಯು ಶೋಭಿಸುತ್ತಿತ್ತು. ಇದರ ಮಧ್ಯಭಾಗದಲ್ಲಿ ಇಂದ್ರನೀಲ ಮಣಿಯಿಂದ ರಚಿತವಾದ ತ್ರಿಮೇಖಲಾ ಪೀಠದ ಮೇಲೆ ಸಾವಿರ ಎಸಳುಗಳುಳ್ಳ ಕಮಲದ ಮೇಲೆ ಅದನ್ನು ಸೋಂಕದೆ ಕುಳಿತಿರುವ ಅನಂತತೀರ್ಥಂಕರ ಪರಮ ಜಿನರನ್ನು ದೇವೇಂದ್ರಾದಿ ಸಮಸ್ತ ದೇವತೆಗಳು ಸಾಷ್ಟಾಂಗ ಪ್ರಣುತರಾಗಿ ತ್ರಿಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ ಸ್ತೋತ್ರಮಾಡಿದರು. ಭಗವಾನ್ ಅರ್ಹಂತರಾದ ಅನಂತನಾಥಮುಖ ಕಮಲದಿಂದ ಗಂಭೀರವೂ ಸರ್ವಭಾಷಾತ್ಮಕವೂ ಆದ ಅರ್ಧಮಾಗಧಿಯಲ್ಲಿ ದಿವ್ಯ ಧ್ವನಿಯು ಹೊರಟಿತು. ಜಯನಾಥ ಗಣಧರರು ಆ ದಿವ್ಯಧ್ವನಿಯನ್ನು ವ್ಯಾಖ್ಯಾನ ಮಾಡಲು ಪ್ರಾರಂಭಿಸಿದರು. ಆ ವ್ಯಾಖ್ಯಾನದಲ್ಲಿ ಜೀವನ ವಿವಿಧ ಸ್ವರೂಪಗಳನ್ನೂ ದ್ರವ್ಯಗಳೂ ಚಾರಿತ್ರಗಳೂ ಮೊದಲಾದ ವಿವಿಧ ಜೈನತತ್ವಗಳನ್ನೂ ನಿರೂಪಿಸಲಾಯಿತು.

ಮದನಪತಾಕೆಯೆಂಬ ವಿದ್ಯಾಧರಿಯು ತನ್ನ ತಂಗಿಯಾದ ಚಿತ್ರಲತೆಗೆ ಜಯನಾಥ

ಗಣಧರರು ಹೇಳಿದ ಸುಪ್ರಭ ಪುರುಷೋತ್ತಮರ ಕಥೆಯನ್ನು ಹೇಳುತ್ತಾರೆ: ಭಾರತ ವರ್ಷದ ಸುರಮ್ಯಮಂಡಲದಲ್ಲಿ ಅತ್ಯಂತಮನೋಹರವಾದ ಪೌದನಪುರವು ಶೋಭಾಯ ಮಾನವಾಗಿದ್ದಿತು. ಆ ಪುರದ ಅರಸು ವಸುಷೇಣನು ಮಹಾಪರಾಕ್ರಮಿಯೂ ಸುಂದ ರಾಂಗನೂ ಷಡಂಗಬಲಸೇನಾಯುಕ್ತನೂ ಮಹಾದಯಾಲುವೂ ಜಿನಧರ್ಮಪರಾಯಣನೂ ದೇವಗುರುಶಾಸ್ತ್ರಗಳಲ್ಲಿ ಅತ್ಯಂತ ಶ್ರದ್ಧೆವುಳ್ಳವನೂ ಆಗಿ ಸಮಸ್ತ ಪುರಜನ ಪರಿಜನರನ್ನು ನ್ಯಾಯಯುಕ್ತವಾಗಿ ಆಳುತ್ತಿದ್ದನು. ಈತನಿಗೆ ಅತ್ಯಂತ ಸುಂದರಾಂಗಿಯೂ ಮನೋ ಮುಗ್ಧಳೂ ವಿನಯಸಂಪನ್ನಳೂ ಪತಿಭಕ್ತಿ ಪರಾಯಣೆಯೂ ಆದ ಸುನಂದಾದೇವಿಯು ವಸುಷೇಣ ಮಹಾರಾಜನ ಪಟ್ಟದ ರಾಣಿಯಾಗಿದ್ದಳು. ಜೊತೆಗೆ ಐದುನೂರು ಜನ ಅರಸಿಯರಿದ್ದರು. ಈ ಮಹಾಸತಿಯರೊಡನೆ ವಸುಷೇಣ ರಾಜನು ಬಹಳ ದೀರ್ಘಕಾಲದ ವರೆಗೆ ಆನಂದಸಾಗರದಲ್ಲಿ ನಿರತನಾಗಿದ್ದನು. ಹೀಗಿರುವಲ್ಲಿ ಸುದರ್ಶನನೆಂಬುವನು ಮಿತ್ರ ನಾದ ಚಂಡಶಾಸನನು ಬರುವ ವಿಚಾರವನ್ನು ವಸುಷೇಣ ಮಹಾರಾಜನಿಗೆ ತಿಳಿಸುತ್ತಾನೆ. ಚಂಡಶಾಸನನು ತನ್ನ ಷಡಂಗಬಲಸೇನಾಯುಕ್ತನಾಗಿ ಮಹಾವೈಭವದಿಂದ ವಸುಷೇಣನ ರಾಜಧಾನಿಗೆ ಬಂದನು. ಆಗ ವಸುಷೇಣನು ಬಹಳ ಆನಂದದಿಂದ ಮಿತ್ರನಾದ ಚಂಡ ಶಾಸನನನ್ನು ಮಹಾವೈಭವದಿಂದ ಸ್ವಾಗತಿಸಿ ತನ್ನರಮನೆಗೆ ಕರೆದುಕೊಂಡು ಬಂದನು. ಸ್ವಲ್ಪ ಸಮಯ ವಿಶ್ರಮಿಸಿದನಂತರ ಭೋಜನಕ್ಕಾಗಿ ವಸುಷೇಣ ಮತ್ತು ಚಂಡಶಾಸನನು ಆಸನದಲ್ಲಿ ಕುಳಿತರು. ಆಗ ಸುನಂದಾ ಮಹಾದೇವಿಯೇ ಊಟಕ್ಕೆ ಬಡಿಸಿದಳು. ಚಂಡ ಶಾಸನನು ಸುನಂದಾದೇವಿಯ ರೂಪುಲಾವಣ್ಯಕ್ಕೆ ಮೋಹಗೊಳ್ಳುವನು. ತನಗಾದ ಅವಸ್ಥೆಯನ್ನು ಸುದರ್ಶನನಿಗೆ ಕೇಳಿಕೊಳ್ಳುವನು. ವನವಿಹಾರಕ್ಕೆ ಹೋದಾಗ ದಾರಿ ತಪ್ಪಿ ಬಂದ ಸುನಂದಾದೇವಿಯನ್ನು ಚಂಡಶಾಸನನು ಹಾವನ್ನು ಹಿಡಿದ ಗಿಡಗನಂತೆ ಬಲವಂತದಿಂದ ಕೊಂಡುಹೋದನು. ಸುನಂದಾದೇವಿಯು ಪತಿಯನ್ನು ಸ್ಮರಿಸುತ್ತ ಗೋಳಿಟ್ಟಳು. ಸ್ತ್ರೀಯು ಗೋಳಾಡುವ ಶಬ್ದವನ್ನು ಕೇಳಿದ ಸಾಮಾಂತರಾಜನಾದ ಸಿಂಹಚೂಡನು ಆತನನ್ನು ತಡೆದು ಬಹಳ ಪರಾಕ್ರಮದಿಂದ ಹೋರಾಡಿದನು. ಆದರೆ ಚಂಡಶಾಸನನು ಸಿಂಹಚೂಡನ ತಲೆಯನ್ನು ಕತ್ತರಿಸಿ ಮುಂದುವರಿದು ತನ್ನ ದುರ್ಗವನ್ನು ಸೇರುವನು.

ವಸುಷೇಣನು ವನವಿಹಾರದಲ್ಲಿ ನಿರ್ದಿಷ್ಟವಾದ ಸ್ಥಳಕ್ಕೆ ಬಂದಾಗ ಸುನಂದೆ ಮತ್ತು ಅತಿಥಿಯಾದ ಚಂಡಶಾಸನನು ಬರುವರೆಂದು ಕಾಯುವನು. ಆಗ ಅವನ ಪರಿವಾರದ ಜನರು ಅಗ್ರಮಹಿಷಿಯಾದ ಸುನಂದಾದೇವಿಯನ್ನು ಚಂಡಶಾಸನನು ಕೊಂಡೊಯ್ದ ಸಮಾಚಾರವನ್ನು ತಿಳಿಸುವರು. ಇದನ್ನು ಕೇಳಿದ ವಸುಷೇಣನು ಮೂರ್ಛೆ ಹೋಗಿ ಶೈತ್ಯೋಪಚಾರದಿಂದ ಮೇಲೆದ್ದು ವಿರಹದಿಂದ ಸಂತಪ್ತನಾಗುತ್ತಾನೆ. ಕೊನೆಯಲ್ಲಿ ಧೈರ್ಯ ತಾಳಿ ಸೈನ್ಯಸಮೇತನಾಗಿ ಹೊರಟು ಸಿಂಹಚೂಡನ ಮಾಣಿಕ್ಯಪುರವನ್ನು ಸೇರು ತ್ತಾನೆ. ಕತ್ತರಿಸಿ ಬಿದ್ದಿದ್ದ ಸಿಂಹಚೂಡನನ್ನು ನೋಡಿ ದುಃಖಿಸುತ್ತಾನೆ. ಅವನು ಪರಾ ಕ್ರಮದಿಂದ ಹೋರಾಡಿದ ವಿಷಯ ತಿಳಿದು ಮುಂದೆ ಪ್ರಯಾಣ ಬೆಳಸಿ ಚಂಡಶಾಸನನ

ದುರ್ಗದ ಹೊರಗೆ ಬೀಡುಬಿಟ್ಟು ಅಂದಿನ ರಾತ್ರಿಯನ್ನು ಕಳೆಯುತ್ತಾನೆ. ಮರುದಿನ ಚಂಡಶಾಸನನೊಡನೆ ಘೋರ ಯುದ್ಧವು ನಡೆಯುತ್ತದೆ. ಅಷ್ಟರಲ್ಲಿ ರಾತ್ರಿಯಾಗುತ್ತದೆ. ಆ ರಾತ್ರಿ ಚಂಡಶಾಸನನು ಸುನಂದೆಯನ್ನು ವರಿಸುವಂತೆ ಪೀಡಿಸುತ್ತಾನೆ. ಒಬ್ಬರಿಗೊಬ್ಬರಿಗೆ ಸಂವಾದವಾಗುತ್ತದೆ. ಹೀಗೆ ಸಂವಾದವಾಗುತ್ತಿರುವಾಗಲೆ ಬೆಳಗಾಗುತ್ತದೆ.

ಚಂಡಶಾಸನನು ಸುನಂದಾದೇವಿಯನ್ನು ಹೇಗಾದರೂ ವಶಪಡಿಸಿಕೊಳ್ಳಬೇಕೆಂಬ ಹಂಬಲದಿಂದ ವಿವಿಧೋಪಾಯಗಳನ್ನು ಮಾಡಿ ಕೊನೆಗೆ ವಸುಷೇಣನ ಸೇನೆ ಸೋತು ಹೋಯಿತೆಂದೂ ಪಗೆಯ ಪಂದಲೆ ಕೈಸೇರಿತೆಂದೂ ಸುಳ್ಳು ಹೇಳಿ ವಸುಷೇಣನ ಮಾಯದ ತಲೆಯನ್ನು ಸುನಂದೆಯ ಮುಂದೆ ಆಕೆಯನ್ನು ಕೂಡುವ ಅಳಿಯಾಸೆಯಿಂದ ಈಡಾಡುತ್ತಾನೆ. ಆದರೆ ತಾನೊಂದು ಬಗೆದರೆ ದೈವವೊಂದು ಬಗೆಯಿತು ಎಂಬಂತೆ ಮಾಯದ ಶಿರವನ್ನು ತನ್ನ ಪತಿಯ ಶಿರವೆಂದೇ ಬಗೆದ ಪತಿವ್ರತೆ ಸುನಂದಾದೇವಿಯ ಪ್ರಾಣವೇ ಹಾರಿಹೋಗುತ್ತದೆ. ಇದನ್ನು ಕಂಡ ಚಂಡಶಾಸನನು ಆ ಹೆಣ್ಣಿನ ಹೆಣದ ವ್ಯೆಸೋಂಕಿನಿಂದ ಮೂರ್ಛಿತನಾಗುತ್ತಾನೆ. ಕೊನೆಗೆ ತಾನು ಬದುಕಿ ಫಲವಿಲ್ಲವೆಂದು ಬಗೆದು ಮುಂದಿನ ಜನ್ಮದಲ್ಲಿಯಾದರೂ ಆಕೆಯನ್ನು ಕೂಡುವ ಭರವಸೆಯಿಂದ ಸಂಸಾರ ಶರೀರಭೋಗಗಳಲ್ಲಿ ವೈರಾಗ್ಯವನ್ನು ಹೊಂದಿ ಸುನಂದೆಯ ಶವದೊಡನೆ ಸಹಗಮನ ಮಾಡುತ್ತಾನೆ.

ಇತ್ತ ವಸುಷೇಣನಿಗೆ ಸುನಂದೆಯ ಸಾವಿನ ಸುದ್ದಿ ತಿಳಿದು ಪಟ್ಟಣಕ್ಕೆ ಹಿಂದಿರುಗಿ ಮಗನಿಗೆ ಪಟ್ಟಕಟ್ಟಿ ಜಿನೇಶ್ವರ ಪ್ರಣೀತವಾದ ದಿಗಂಬರ ಮಹಾವ್ರತವನ್ನು ಸ್ವೀಕರಿಸಿ, ದ್ವಾದಶವಿಧ ತಪಸ್ಸನ್ನು ಆಚರಿಸಿ ಆ ತಪಸ್ಸಿನ ಪ್ರಭಾವದಿಂದ ದೇವಲೋಕದ ಸುಖದಲ್ಲಿ ನಿರತನಾಗಿ ಬಹುದೀರ್ಘ ಸಮಯವನ್ನು ಕಳೆಯುತ್ತಾನೆ.

ಹೀಗಿರುವಲ್ಲಿ ವತ್ಸಕಾವತಿ ವಿಷಯದ ಆನಂದ ಪುರವನ್ನು ಆಳುತ್ತಿದ್ದ ಮಹಾಬಲನೆಂಬ ರಾಜನು ಸಂಸಾರ ಶರೀರಭೋಗಗಳಲ್ಲಿ ವಿರಕ್ತನಾಗಿ ದಿಗಂಬರ ಮಹಾವ್ರತವನ್ನು ಸ್ವೀಕರಿಸಿ ಘೋರ ತಪಸ್ಸನ್ನಾಚರಿಸಿ ದೇವಲೋಕವನ್ನು ಹೊಂದಿ ದೇವಲೋಕ ಶಿಖರನಾಗಿದ್ದನು.

ಜಂಬೂದ್ವೀಪದ ಭರತಖಂಡದಲ್ಲಿರುವ ದ್ವಾರಾವತಿ ಪಟ್ಟಣದ ದೊರೆ ಸೋಮಪ್ರಭ. ಆತನ ಪಟ್ಟದ ರಾಣಿಯರು ಜಯಾವತಿ, ಸೀತೆ ಎಂಬಿಬ್ಬರು ಮಹಾನ್ ಸೌಂದರ್ಯವತಿಯರೂ ಧರ್ಮಪರಾಯಣೆಯರೂ ಆಗಿದ್ದರು. ಇವರು ಇಷ್ಟವಿಷಯಕಾಮ ಸುಖಭೋಗಗಳನ್ನನುಭವಿಸುತ್ತಿರುವಲ್ಲಿ ಇವರುಗಳಿಗೆ ಬಹುಕಾಲ ಮಕ್ಕಳಾಗಲಿಲ್ಲ. ಕೆಲವು ಸಮಯದ ನಂತರ ಮಕ್ಕಳನ್ನು ಪಡೆಯಬೇಕೆಂಬ ಬಯಕೆಯುಂಟಾಯಿತು. ಸೀತೆಯು ತಾನು ಕಂಡ ಹದಿನಾರು ಸ್ವಪ್ನಗಳನ್ನು ಪತಿದೇವನಲ್ಲಿ ತಿಳಿಸಲಾಗಿ ಮುಂದೆ ನಿನ್ನ ಗರ್ಭದಲ್ಲಿ ಶಲಾಕ ಮಹಾಪುರುಷನಾದ ಚಕ್ರಧರನು ಹುಟ್ಟುತ್ತಾನೆಂದು ತಿಳಿಸುವನು. ಸೀತೆಯ ಗರ್ಭದಲ್ಲಿ ವಸುಷೇಣನು ವಾಸುದೇವನಾಗಿ ಹುಟ್ಟಿಬಂದು ಮಹಾಬಲಶಾಲಿಯಾಗಿ ಬೆಳೆದನು.

ಅರ್ಧಚಕ್ರಿಯ ದೈತ್ಯನ ಒಡ್ಡೋಲಗಕ್ಕೆ ನಾರದನು ಬರಲು ಆತನನ್ನು ದೈತ್ಯನು

ಪರಮಾದರದಿಂದ ಸತ್ಕರಿಸಿದನು. ಅನಂತರ ನಾರದನು ರಾಮಕೃಷ್ಣರ ಪರಾಕ್ರಮವನ್ನು ವರ್ಣಿಸಿ ದೈತ್ಯನ ಕೋಪವನ್ನು ಹೆಚ್ಚಿಸಿ ಅಲ್ಲಿಂದ ಬೀಳ್ಕೊಂಡು ದ್ವಾರಾವತಿಯನ್ನು ಸೇರುವನು. ಅಲ್ಲಿ ರಾಮಕೃಷ್ಣರನ್ನು ಸಂದರ್ಶಿಸಿ ದೈತ್ಯನ ಅಹಂಕಾರ ಮತ್ತು ಅದರಿಂದ ದೇಶಕ್ಕೆ ಆಗುವ ವಿಪತ್ತನ್ನು ವರ್ಣಿಸಿ ಸಂರಕ್ಷಣೆ ಮಾಡಬೇಕೆಂದು ಹೇಳುವನು. ದೈತ್ಯನು ಸಂಧಿಗೆ ಬರುತ್ತೇನೆಂದು ಹೇಳಿದರೂ ಒಪ್ಪದೆ ಯುದ್ಧಕ್ಕೆ ರಾಮಕೃಷ್ಣರು ಹೊರಡುವರು. ಯುದ್ಧವು ಭಯಂಕರವಾಗಿ ನಡೆಯುವುದು. ಬಹು ಸಮಯದ ವರೆಗೆ ಘೋರ ಕಾಳಗವು ನಡೆದ ನಂತರ ಅತ್ಯಂತ ಕೋಪಾವಿಷ್ಟನಾಗಿ ತನ್ನರಮನೆಯ ಆಯುಧಾಗಾರದಲ್ಲಿ ಹುಟ್ಟಿದ ಸುದರ್ಶನ ಚಕ್ರವನ್ನು ಕೃಷ್ಣನ ಮೇಲೆ ಪ್ರಯೋಗಿಸುವನು. ಇದರಿಂದ ಲೋಕವೆಲ್ಲ ನಡುಗಿತು. ಆ ಚಕ್ರರತ್ನವು ಶ್ರೀಕೃಷ್ಣನನ್ನು ಮೂರು ಸುತ್ತು ಸುತ್ತಿ ಆತನ ಬಲಭಾಗ ದಲ್ಲಿ ನಿಂತಿತು. ಅದೇ ಸಮಯದಲ್ಲಿ ಕೃಷ್ಣನು ಮಧುಕೈಟಭನ ತಲೆಯನ್ನು ತನ್ನ ಚಕ್ರ ರತ್ನದಿಂದ ಕತ್ತರಿಸಿದನು. ಕೃಷ್ಣ ಬಲಭದ್ರರು ವಿಜಯ ಸಂಕೇತದೊಡನೆ ಪುರಪ್ರವೇಶ ಮಾಡಿದರು. ಶ್ರೀಕೃಷ್ಣನು ಪಟ್ಟಾಭಿಷಕ್ತನಾಗುವನು. ಮಧುಕೈಟಭನ ಕಡೆಯವರಿ ಗೆಲ್ಲ ಅಭಯ ವಚನ ದೊರೆಯುವುದು.

## ಅನಂತನಾಥನ ಪರಿನಿರ್ವಾಣ ಕಲ್ಯಾಣ

ಅನಂತನಾಥ ಅರ್ಹಂತ ಕೇವಲಿಯು ಇಡೀ ಭರತಕ್ಷೇತ್ರದ ಆರ್ಯಾಖಂಡದ ಮುಖ್ಯ ವಾದ ಪಟ್ಟಣಗಳಲ್ಲಿ ವಿಹರಿಸಿ ಧರ್ಮಾಮೃತ ಪಾನದಿಂದ ಸಂತೃಪ್ತಗೊಳಿಸಿದನು. ಅನಂತ ಜಿನನ ಸಮವಸರಣದಲ್ಲಿ ಜಯನೆ ಮೊದಲಾದ ಐವತ್ತು ಗಣಧರರೂ ಏಕಾದಶಾಂಗ ಚತುರ್ದಶಪೂರ್ವಧರರಾದ ಒಂದು ಸಹಸ್ರಮುನಿಗಳೂ ವಾದಿಮುನಿಗಳೂ ಮೂರು ಸಾವಿರದ ಎರಡುನೂರು ಮಂದಿಗಳೂ ಶಿಕ್ಷಕ ಮುನಿಗಳೂ ಮೂವತ್ತೊಂಬತ್ತು ಸಾವಿರದ ಐನೂರು ಮುನಿಗಳೂ ಅವಧಿಜ್ಞಾನಸಂಪನ್ನರಾದ ನಾಲ್ಕುಸಾವಿರದ ಮೂರು ನೂರು ಮುನಿಗಳೂ ಕೇವಲ ಜ್ಞಾನಸಂಪನ್ನರಾದ ಐದುಸಾವಿರ ಮುನಿಗಳೂ ವಿಕ್ರಿಯರ್ಧಿ ಸಂಪನ್ನ ರಾದ ಎಂಟುಸಾವಿರ ಮುನಿಗಳೂ ಮನಃಪರ್ಯಯ ಜ್ಞಾನಸಂಪನ್ನರಾದ ಐದುಸಾವಿರ ಮುನಿಗಳೂ ಒಟ್ಟು ೬೬ ಸಾವಿರಮಂದಿ ಮುನಿಗಳೊಡನೆ ಕೂಡಿದವರಾಗಿದ್ದರು. ಒಂದು ಲಕ್ಷ ಎಂಟುಸಾವಿರ ಮಂದಿ ಸವಶ್ರೀ ಮೊದಲಾದ ಆರ್ಯಿಕೆಯರೂ ಎರಡುಲಕ್ಷ ಶ್ರಾವಕರೂ ನಾಲ್ಕು ಲಕ್ಷ ಶ್ರಾವಕಿಯರೂ ಅಸಂಖ್ಯಾತ ದೇವದೇವಿಯರೂ ಅಸಂಖ್ಯಾತ ತಿರ್ಯಕ್ ಪ್ರಾಣಿ ಗಳೂ ಸಹ ಇದ್ದರು. ಹೀಗೆ ಪ್ರಖ್ಯಾತವಾದ ಹನ್ನೆರಡು ಭವ್ಯಸಮುದಾಯಕ್ಕೆ ಅಗ್ರಗಾ ಮಿಯೂ ಜೀವಾಜೀವಾದಿ ತತ್ತ್ವ ಪ್ರತಿಪಾದಿಸುವರೂ ಆದ ಅನಂತಜಿನರು ಸಮವಸರಣ ವಿಹಾರವನ್ನು ತ್ಯಜಿಸಿ ಅನಾದಿಸಿದ್ಧವಾದ ಸಮ್ಮೇದಗಿರಿಯನ್ನು ಹೊಂದಿ ಆರುಸಾವಿರದ ನೂರು ಮಂದಿ ಮುನಿಗಳೊಡನೆ ಒಂದು ತಿಂಗಳವರೆಗೆ ಪ್ರತಿಮಾಯೋಗಧಾರಿಗಳಾಗಿದ್ದು ಚೈತ್ರಮಾಸದ ಅಮಾವಾಸ್ಯೆಯ ದಿವಸ ಬೆಳಗಿನ ಜಾವದಲ್ಲಿ ನಾಲ್ಕನೆಯದಾದ ವ್ಯುಪರತ

ಕ್ರಿಯಾ ನಿವೃತ್ತಿಯೆಂಬ ಶುಕ್ಲಧ್ಯಾನದ ಸಂಬಂಧದಿಂದ ಸಿದ್ಧಪದವಿಯನ್ನು ಪಡೆದರು. ಅಂದರೆ ಪರಮಔದಾರಿಕ ಶರೀರವನ್ನು ತ್ಯಜಿಸಿ ಸ್ವಲ್ಪ ಆಕಾರ ಕಡಮೆಯಾದ ಸ್ಥಿತಿಯಲ್ಲಿ ಲೋಕಾಗ್ರಭಾಗದಲ್ಲಿರುವ ತನುವಾತವಲಯದಲ್ಲಿ ಸ್ಥಿರವಾಗಿ ಅನಂತಜ್ಞಾನ, ಅನಂತ ದರ್ಶನ, ಅನಂತವೀರ್ಯ, ಅನಂತಸುಖಗಳಿಂದಲೂ ಸಿದ್ಧರ ಎಂಟು ಗುಣಗಳಿಂದಲೂ ಶೋಭಿಸುತ್ತಿರುವರು.

ದೇವೇಂದ್ರನು ತನ್ನ ಸಮಸ್ತ ಚತುರ್ನಿಕಾಯಾಮರರಿಂದ ಕೂಡಿ ಸಮ್ಮೇದಗಿರಿಯಲ್ಲಿ ನಿರ್ವಾಣಕಲ್ಯಾಣ ಪೂಜೆಯನ್ನು ಮಾಡಿ ಸ್ತುತಿಸಿ ಆನಂದನರ್ತನವನ್ನು ಮಾಡಿ ಸ್ವರ್ಗಲೋಕಕ್ಕೆ ತೆರಳಿದನು.

## ಅನಂತನಾಥ ಪುರಾಣಕ್ಕೆ ಆಧಾರ

ಅನಂತನಾಥ ಜಿನನ ಕಥೆಯನ್ನು ಗುಣಭದ್ರಾಚಾರ್ಯರು ಉತ್ತರ ಪುರಾಣದಲ್ಲಿ ಅರನೆಯ ಪರ್ವದಲ್ಲಿ ವಿವರವಾಗಿ ಸಂಸ್ಕೃತ ಪದ್ಯರೂಪವಾಗಿ ಬರೆದಿರುವರು. ಈ ಕಥೆಯನ್ನೇ ಚಾವುಂಡರಾಯನು ಕನ್ನಡದಲ್ಲಿ ಗದ್ಯರೂಪವಾಗಿ ತ್ರಿಷಷ್ಠಿಶಲಾಕಾಪುರುಷರ ಪುರಾಣವನ್ನು ರಚಿಸಿರುತ್ತಾನೆ. ಇವುಗಳನ್ನೇ ಆಧಾರವಾಗಿಟ್ಟುಕೊಂಡು ರಸೋತ್ಪಾದಕಗಳಾದ ನೂತನ ಸನ್ನಿವೇಶಗಳನ್ನು ಕಲ್ಪಿಸಿ ಶ್ರೋತೃಗಳಿಗೆ ಬೇಸರವಾಗದಂತೆ ರಸಿಕರಿಗೆ ರಂಜನೆಯಾಗುವಂತೆ, ಜಿನನಲ್ಲಿ ಅನನ್ಯಭಕ್ತಿ ಹುಟ್ಟುವಂತೆ ಕಾವ್ಯಲಕ್ಷಣಕ್ಕನುಸಾರ ಪಂಪ ಮಹಾಕವಿಗಳ ಮಾರ್ಗವನ್ನು ಅನುಸರಿಸಿ ಈ ಕಾವ್ಯಪುರಾಣವನ್ನು ಬರೆದು ಜನ್ನನು ತನ್ನ ಅಪ್ರತಿಮ ಕವಿತಾ ಪ್ರೌಢಿಮೆಯನ್ನು ಪ್ರಕಾಶಪಡಿಸಿರುತ್ತಾನೆ.

## ಕವಿಯ ಪ್ರತಿಭೆ

ಜನ್ನ ಕವಿಯು ಪಂಚಕಲ್ಯಾಣಾತ್ಮಕವಾದ ಜಿನನ ಕಥೆಯನ್ನು ಪುರಾಣಶೈಲಿಯಲ್ಲಿ ವಿವರಿಸುತ್ತಾನೆ. ಅಲ್ಲಲ್ಲಿ ತತ್ವೋಪದೇಶವನ್ನು ಮಾಡುತ್ತಾನೆ. ಅನಂತಜಿನನಿಗೆ ಕೇವಲಜ್ಞಾನವಾದಾಗ ಸಮವಸರಣಸಭೆಯಲ್ಲಿ ಅನಂತಜಿನನಿಂದಾದ ಉಪದೇಶಗಳನ್ನು ಬಹುಸೊಗಸಾಗಿ ವರ್ಣಿಸಿರುತ್ತಾನೆ.

ಕವಿಯು ಅನೇಕ ನೂತನ ಸನ್ನಿವೇಶಗಳನ್ನು ಕಲ್ಪಿಸಿ ಅನೇಕ ಭಾವತರಂಗಗಳೂ ನಾನಾ ರಸಗಳೂ ಸಹೃದಯರ ಹೃದಯದಲ್ಲಿ ಉದಯಿಸುವಂತೆ ಈ ಕಾವ್ಯವನ್ನು ರಚಿಸಿರುವನು. ಆತನ ಕವಿತ್ವದ ಕೌಶಲವನ್ನು ಸುನಂದೆ ಮತ್ತು ಚಂಡಶಾಸನ ಇವರ ಉಪಾಖ್ಯಾನವನ್ನು ಓದಿ ತಿಳಿಯಬೇಕು. ಕಾವ್ಯಜ್ಞರ ಮನಸ್ಸನ್ನು ಆಕರ್ಷಿಸುವ ಶೃಂಗಾರ, ವೀರ, ಕರುಣ, ಹಾಸ್ಯ, ರೌದ್ರ ಇವೇ ಮೊದಲಾದ ರಸತರಂಗಗಳು ಹುಟ್ಟುವಂತೆ ಮಾಡಿದ್ದಾನೆ. ಇಲ್ಲಿ ಶೃಂಗಾರವೇ ಪ್ರಧಾನವಾಗಿದ್ದರೂ ಇತರ ರಸಗಳೂ ತಲೆದೋರಿವೆ

ದುರುಳನಾದ ಚಂಡಶಾಸನನು ಪತಿವ್ರತೆಯಾದ ಸುನಂದೆಯನ್ನು ಸೆರೆಯಲ್ಲಿರಿಸಿ, ತನ್ನನ್ನು ಒಲಿಯುವಂತೆ ಹಿಂಸಿಸುವಾಗ ಯಾರು ತಾನೆ ಆಕೆಯ ಅವಸ್ಥೆಯನ್ನು ನೋಡಿ ಕನಿಕರ ಪಡರು ? ಯಾರು ಚಂಡಶಾಸನನನ್ನು ನಿಂದಿಸರು ? ಆಕೆಯ ಪ್ರಾಣಪ್ರಿಯನಾದ ವಸುಷೇಣನ ತಲೆಯನ್ನು ತಂದು ಕಣ್ಣೆದುರಿನಲ್ಲಿ ಇಡಲು ಆಕೆಯು ನೊಂದು ಪ್ರಾಣವನ್ನು ಬಿಡುವಾಗ ಯಾರು ಕಣ್ಣೀರನ್ನು ಸುರಿಸರು ? ರಸೋತ್ಪಾದಕಗಳಾದ ಇಂತಹ ಸನ್ನಿವೇಶಗಳು ಈ ಉಪಾಖ್ಯಾನ ಒಂದರಲ್ಲಿ ಎಷ್ಟೋ ಇವೆ. ಇದೊಂದನ್ನು ಓದಿದರೆ ಕವಿಯ ಸಂವಿಧಾನ ಕೌಶಲವೂ ಸನ್ನಿವೇಶದ ಕಲ್ಪನೆಯ ಚಾತುರ್ಯವೂ ವ್ಯಕ್ತವಾಗುತ್ತದೆ. ಗೊಡ್ಡಾಗಿ ನಿಂತಿರುವ ಗಿಡವನ್ನು ಕತ್ತರಿಸಿ ಕಸಿಮಾಡಿ, ಮೈತುಂಬ ಹೂ ಕಾಯಿಗಳನ್ನು ಬಿಡಿಸುವ ಸಮರ್ಥನಾದ ತೋಟಗಾರನಂತೆ ಜನ್ನನು ನೀರಸವಾದ ಕಥೆಯನ್ನು ನೂತನ ಸನ್ನಿವೇಶಕ್ಕೆ ತಕ್ಕಂತೆ ಸೃಷ್ಟಿಸಿ ಪುಷ್ಟೀಕರಿಸಿ ಅನೇಕ ರಸಸ್ಥಾನಗಳನ್ನು ಕಲ್ಪಿಸಿ, ಆನಂದಗೊಳಿಸಿದ್ದಾನೆ. ಇಷ್ಟೇ ಅಲ್ಲ. ಇವನ ಶೈಲಿ, ಪದಲಾಲಿತ್ಯ, ಮೃದುಬಂಧ, ಶಬ್ದಸೌಷ್ಠವ, ಅರ್ಥಗಾಂಭೀರ್ಯ, ವರ್ಣನಾವೈಖರಿ, ಅಲಂಕಾರ ವೈಚಿತ್ರ್ಯ-ಇವೆಲ್ಲವೂ ಸಹೃದಯರ ಹೃದಯವನ್ನು ಆಕರ್ಷಿಸತಕ್ಕವಾಗಿರುವುವು.

## ಕವಿ ಪ್ರಶಸ್ತಿ

ಇಂತಹ ರಸಭರಿತವಾದ ರಸಿಕ ರಂಜಕವಾದ ಕಾವ್ಯಗಳನ್ನು ಬರೆದ ಜನ್ನ ಮಹಾಕವಿಯು ತನ್ನ ಕವಿತ್ವದ ಮೇಲ್ಮೆಗೆ ಹೆಮ್ಮೆಪಡುವುದೇನಾಶ್ಚರ್ಯ ? ತಮ್ಮದೆಂದರೆ ಎಲ್ಲರಿಗೂ ಅದರಲ್ಲಿ ಒಂದು ವಿಧವಾದ ಪ್ರೇಮ ವಿಶೇಷ ಗೌರವವಿರುತ್ತದೆ. ಆದಕಾರಣ ಕವಿಯು ಕಾವ್ಯದಲ್ಲಿ ತನ್ನ ಕವಿತ್ವದ ಮಹಿಮೆಯನ್ನು ಹೊಗಳಿಕೊಳ್ಳುವುದು ದೋಷವೆಂದು ಭಾವಿಸಬಾರದು. ಈತನು ಪಂಪ, ಪೊನ್ನ, ರನ್ನ ಇವರಂತೆ ಪುರಾಣ ಕಾವ್ಯವನ್ನು "ಭಾವುಕರಂತರಂಗ"ವನ್ನು ಆಕರ್ಷಿಸುವಂತೆ ಬರೆದಿದ್ದರೂ ತನಗೂ ಅವರಿಗೂ ಇರುವ ವೈಲಕ್ಷಣ್ಯವನ್ನು ಹೀಗೆಂದು ಹೇಳಿದ್ದಾನೆ.

ರನ್ನಂ ವೈಯಾಕರಣಂ
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ
ಹೊನ್ನನಸಹಾಯ ಕವಿ ಮೇಣ್
ಜನ್ನಿಗನಸಹಾಯ ಸುಕವಿ ಕವಿಚಕ್ರಿಗಳೊಳ್

ಜಿನಪುರಾಣ ಕರ್ತೃಗಳಾದ ಪೂರ್ವಕವಿಗಳನ್ನು ಸ್ಮರಿಸಿದ್ದಾನೆ.

ಎನಗನುಕೂಲಮುಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ
ಣನ ಮೃದುಬಂಧವಿಾ ಕವಿಗಳಲ್ತೆ ಜಿನೇಂದ್ರಪುರಾಣ ಕರ್ತೃಗಳ್

ಜನ್ನನು ತಾನು ಮಾಡಿದ ಕಾರ್ಯವನ್ನು ತಾನೊಬ್ಬನೆ ಹೊಗಳಿಕೊಂಡಿದ್ದರೆ ಆತ್ಮಸ್ತುತಿಯಾಗಿ ನಿಂದ್ಯವಾಗುತ್ತಿತ್ತು. ಆತನು ತನ್ನ ಕವಿತಾಸಂಪತ್ತಿಯನ್ನು ತಾನು ಮಾತ್ರವೆ ಸ್ತುತಿಸಿಕೊಂಡಿಲ್ಲ. ಅವನಾದ ಮೇಲೆ ಬಂದ ಗುಣವರ್ಮನೇ ಮೊದಲಾದ ಕವಿವರ್ಯರು ಅವನ ಕವಿತೆಯ ಮೇಲ್ಮೆಯನ್ನು ಕೊಂಡಾಡಿರುವರು. ಮತ್ತು ಕಾವ್ಯಸಾರವನ್ನು ಬರೆದ ಅಭಿನವವಾದಿ ವಿದ್ಯಾನಂದನೂ ಕರ್ಣಾಟಕ ಶಬ್ದಾನುಶಾಸನವನ್ನು ಬರೆದ ಭಟ್ಟಾಕಲಂಕನೂ ಅವನ ಗ್ರಂಥಗಳಿಂದ ಅನೇಕ ಪದ್ಯಗಳನ್ನು ಉದ್ಧರಿಸಿರುವರು.

## ಜನ್ನನನ್ನು ಸ್ತುತಿಸಿರುವವರು

1. ಗುಣವರ್ಮನು (1235) ತನ್ನ ಪುಷ್ಪದಂತ ಪುರಾಣದಲ್ಲಿ

ಅನುಗುಣಮಾಗಿ ಕೂಡೆ ಗುಣವರ್ಮನ ವೈಸಿರಿ....................
.................... ನಾಗವ
ರ್ಮನ ಬಹುರೀತಿ ನೇಮಿಯ ಚಮತ್ಕೃತಿ **ಜನ್ನ**ಗನಿಂಪು....................
ರಂಜಿಸುಗೆ ನಿರ್ಣಯಮೆನ್ನಯ ನವ್ಯಕಾವ್ಯದೊಳ್ (1–36)

2. ಕಮಲಭವನು (1235) ಶಾಂತೀಶ್ವರ ಪುರಾಣದಲ್ಲಿ

ಜಿನಸಮಯಪ್ರಕಾಶಕೃತ ಸತ್ಕವಿ ಪಂಪನ....................
..........................................................................................
.................... ಬುಧ ನೇಮಿಚಂದ್ರನ **ಜಗನ್ನು**ತ **ಜನ್ನ**ನ ರಂಜಿಪಗ್ಗಳ
ಯ್ಯನ ಕೃತಿ ಸೌಂದರೀಸುಭಗಮಾವಗಮಿರ್ಕೆ ಮದೀಯ ಕಾವ್ಯದೊಳ್(1–62)

3. ಆಂಡಯ್ಯನು (1235) ಕಬ್ಬಿಗರ ಕಾವದಲ್ಲಿ

ಎನ್ನೀ ಕಬ್ಬದೊಳೆಂದುಂ ಸನ್ನಿದಮಾಗಿರ್ಕೆ............**ಜನ್ನಿಗನ ಜಸಂ** (1–4)

4. ಮಲ್ಲಿಕಾರ್ಜುನನು (1245) ಸೂಕ್ತಿಸುಧಾರ್ಣವದಲ್ಲಿ

**ಜನ್ನನ ದೇಸೆ** ಪಂಪನ ಗುಣಂ............ನೆಲಸಿರ್ಪುವೀ ಸುಕವಿ ಮಲ್ಲನ ಕಾವ್ಯ
ವಿಳಾಸಗೇಹದೊಳ್ (1–26)

5. ಕುಮುದೇಂದುವು (1275) ತನ್ನ ರಾಮಾಯಣದಲ್ಲಿ

ಅನುನಯದಿಂ ....................
....................ಸುಮನೋಬಾಣನ **ಜನ್ನ**ಯಂನ
ಜಿನಗುಣಮಣಿ ಮಯಕಾವ್ಯ ಕಥಾ ವ
ರ್ಣನ ಸೌವರ್ಣಪದಕವೆಮ್ಮಯ ಮತಿ
ವನಿತೆಗೆ ಕಂಠಾಭರಣತೆಯಂ ತಳೆದಿರ್ಕೆ ಕವೀಂದ್ರ ಪರಂಪರೆಯ (ಪೀ. ಸಂಧಿ. ೩೩)

6. ನಾಗರಾಜನು (1331) ಪುಣ್ಯಾಸ್ರವ ಚಂಪುವಿನಲ್ಲಿ
ಪೊನ್ನನೋಜೆ........ಜನ್ನನೊಳೊಪ್ಪುವೆತ್ತ ಪೊಸಮಾತು............ನೆಲಸಿಕ್ಕೆ
ಮದೀಯ ಕಥಾಪ್ರಬಂಧದೊಳ್ (1-18)

7. ಮಧುರನು (1389) ಧರ್ಮನಾಥ ಪುರಾಣದಲ್ಲಿ
ಸರ್ವರ ಸಮ್ಮತಮೆನಗಿದು
ಗರ್ವರ ಮಾತಲ್ಲ ಶಾಸ್ತ್ರ ಲೌಕಿಕಕಲೆಯೊಳ್
ಬೀರ್ವರಿದ ನೇಮಿ ಜನ್ನಿಗ
ರಿರ್ವರೆ ಕರ್ನಾಟಕೃತಿಗೆ ಸೀಮಾಪುರುಷರ್ (೧-೪೧)

ಇದಲ್ಲದೆ ಮಂಗರಸ (1508), ನಂಜುಂಡ (1525), ಬಾಹುಬಲಿ (1560) ಇವರೇ ಮೊದಲಾದ ಕವಿಗಳಿಂದ ಸ್ತುತಿಸಲ್ಪಟ್ಟಿದ್ದಾನೆ. ಜನ್ನನು ಉತ್ತಮ ಗುರು ಪರಂಪರೆಯಲ್ಲಿ ಸಮಸ್ತ ವಿದ್ಯಾ, ಕಲೆ, ಪ್ರತಿಭೆಯನ್ನು ಸಂಪಾದಿಸಿ ಜೀವನದಲ್ಲಿ ಉತ್ತಮ ವಾದ ಎರಡು ಕೃತಿಗಳನ್ನು ರಸಿಕ ಜನರಿಗೆ ಬಿಟ್ಟುಹೋಗಿದ್ದಾನೆ. ಇಂತಹ ಕಾವ್ಯ ಗಳನ್ನು ಓದುವುದರಿಂದ ಜೀವನದಲ್ಲಿ ವಿಶೇಷ ಬದಲಾವಣೆಯಾಗಿ ಧಾರ್ಮಿಕವಂತನಾಗಿ ಬಾಳಬಹುದೆಂದು ಊಹಿಸಬಹುದಾಗಿದೆ.

## ಉಪಸಂಹಾರ

ಅನಂತನಾಥ ಪುರಾಣವು ಹಿಂದೆ ಓರಿಯಂಟಲ್ ಲೈಬ್ರರಿಯ ಕನ್ನಡ ಮಾಲೆಯ ೧೮ ನೆಯ ಪುಷ್ಪವಾಗಿ ಪ್ರಕಟವಾಗಿತ್ತು. ಪ್ರೊ॥ ಡಿ. ಶ್ರೀನಿವಾಸಾಚಾರ್ ಮತ್ತು ಶ್ರೀ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರವರು ಈ ಹಿಂದೆ ನಾಲ್ಕು ಕೃತಿಗಳ ಸಹಾಯದಿಂದ ಸಂಶೋಧಿಸಿದ್ದರು.

ಈಚೆಗೆ ಕಾರ್ಕಳ ತಾಲ್ಲೋಕ ಬಿಜಗೋಳಿ ಆದಿನಾಥ ತೀರ್ಥಂಕರರ ಬಸದಿಯಲ್ಲಿ ಅರ್ಚಕರಾದ ಶ್ರೀ ಧರ್ಮಪಾಲ ಇಂದ್ರರು ತಮ್ಮಲ್ಲಿದ್ದ ಪ್ರಾಚೀನ ಓಲೆ ಪ್ರತಿಯನ್ನು ಕೊಟ್ಟಿದ್ದರು. ದಿವಂಗತ ಹೆಚ್. ಶೇಷಯ್ಯಂಗಾರ್ ಅವರು ಕೈಬರಹದ ಒಂದು ಪ್ರತಿಯನ್ನು ಕೊಟ್ಟಿದ್ದರು. ಕನ್ನಡ ಅಧ್ಯಯನ ಸಂಸ್ಥೆಯ ಕೆ. ಬಿ. ೬೪ ನಂಬರಿನ ಕೈಬರಹದ ಪ್ರತಿ, ಮತ್ತು ಹಿಂದಿನ ಕ. ಜ. ಪ್ರತಿಗಳ ಪಾಠಾಂತರಗಳನ್ನು ಇಲ್ಲಿ ಉಪಯೋಗಿಸಿಕೊಳ್ಳ ಲಾಗಿದೆ.

೧ ಬಿಜಗೋಳಿ ಧರ್ಮಪಾಲ ಇಂದ್ರರ ಪ್ರತಿಗೆ 'ಎ' ಎಂಬುದಾಗಿಯೂ
೨ ದಿವಂಗತ ಶೇಷಯ್ಯಂಗಾರರ ಪ್ರತಿಗೆ 'ಉ' ಎಂಬುದಾಗಿಯೂ
೩ ಕನ್ನಡ ಅಧ್ಯಯನ ಸಂಸ್ಥೆಯ ಕೆ. ಬಿ. ೬೪ ನಂಬರಿನ ಪ್ರತಿಗೆ 'ಕ' ಎಂಬು ದಾಗಿಯೂ ಸಂಕೇತಗಳನ್ನು ಕೊಡಲಾಗಿದೆ.

ಬಿಜಗೋಳಿಯಿಂದ ತಂದ ಪ್ರತಿ ಬಹಳ ಶಿಥಿಲವಾಗಿದೆ; ಆದರೆ ಶುದ್ಧವಾಗಿದೆ. ಶೇಷಯ್ಯಂಗಾರರ ಪ್ರತಿಯು ಸಹ ಶುದ್ಧವಾಗಿದೆ. ಇದಕ್ಕಾಗಿ ಓಲೆ ಗ್ರಂಥಗಳನ್ನು ಒದಗಿಸಿ ಕೊಟ್ಟ ಶ್ರೀ ಧರ್ಮಪಾಲ ಇಂದ್ರರು ಮತ್ತು ಶ್ರೀ ಹೆಚ್. ಶೇಷಯ್ಯಂಗಾರ್ ಅವರಿಗೂ ಸಕಾಲದಲ್ಲಿ ಅಚ್ಚುಮಾಡಿಕೊಟ್ಟ ಉಷಾಪ್ರೆಸ್ ಮಾಲೀಕರಿಗೂ ವಂದನೆಗಳು.

ಮೈಸೂರು
೧೦—೩—೧೯೭೧
ಮಹಾವೀರಶಕ
೨೪೯೭

ಎಂ. ಸಿ. ಪದ್ಮನಾಭಶರ್ಮ

ಜನ್ನಕವಿ ವಿರಚಿತ

# ಅನಂತನಾಥ ಪುರಾಣಂ

ವೀತರಾಗಾಯನಮಃ

# ಅನಂತನಾಥ ಪುರಾಣಂ

## ಪ್ರಥಮಾಶ್ವಾಸಂ

ಶ್ರೀಮದನಂತಬೋಧದಿನನಂತವಿಲೋಕನದಿಂದನಂತ ಸೌ
ಖ್ಯಾಮೃತದಿಂದನಂತಬಲದಿಂ ತನಗಾದುದನಂತನಾಮಮು
ದ್ದಾಮದನಂತಕರ್ಮಜಯದಿಂ ದೊರೆವೆತ್ತುದು ಮತ್ತನಂತಜಿ
ನ್ನಾಮನೆನಿಪ್ಪನೀಗೆಮಗನಂತಜಿನೇಂದ್ರನನಂತಸೌಖ್ಯಮಂ ೧

ಸಿದ್ಧರ್ ನಿಷ್ಪನ್ನಸೌಖ್ಯೋದಯರುದಮಹಿಮೆಯಿಂ ಸಂದ ನಿತ್ಯತ್ವದಿಂದಂ
ಸಿದ್ಧರ್ ಲೋಕಾಗ್ರದೊಳ್ ನಿಶ್ಚಳನಿವಸನರಾಗಿರ್ದ ವಿಖ್ಯಾತಿಯಿಂದಂ
ಸಿದ್ಧರ್ ತಾವಾದಮೂರ್ತರ್ ಚರಮತನುಸಮರ್ ನಿರ್ಗುಣರ್ ಸದ್ಗುಣರ್ ಸಂ
ಶುದ್ಧರ್ ಸಿದ್ಧರ್ ನಿತಾಂ[1]ತಂ ನಿ[1]ಲಿಸುಗೆ ನಿಜನಿಶ್ಶ್ರೇಯಸಶ್ರೀಯೊಳೆಮ್ಮಂ ೨

ರೋಚಿರ್ಮಾಳೆಗಳಂತೆ ತಳ್ತೆಸೆಯೆ ಷಟ್ತ್ರಿಂಶದ್ಗುಣಂ ಕೂ[2]ಡೆ[2] ಪಂ
ಚಾಚಾ[3]ರಾ[3]ಚರಣಂ ದಿಗಂಬರವಿಳಾಸೋದ್ಭಾಸಮಂ ಘೋಷದ ಲ
ಕ್ಷ್ಮೀ ಚಾತುರ್ಮುಖಬಿಂಬದಿಂ ಪರಮಧರ್ಮಾಂಭೋಜಿನೀ ಸೂರ್ಯರಾ
ದಾಚಾರ್ಯರ್ ದಯೆಯಿಂ ಕೞಲ್ಚುಗೆ ಮದೀಯ ಸ್ವಾಂತದಿಂ ಧ್ವಾಂತಮಂ ೩

ನ್ಯಾಯಜ್ಯೋತಿ[4]ಯಿ[4]ನಿಕ್ಕಿ ಮೆಟ್ಟಿ ಕುಮತಧ್ವಾಂತಂಗಳಂ ಮುಕ್ತಿಪಾ
ಥೇಯಂ ನಿರ್ಮಳಧರ್ಮಮೆಂಬ ಮಣಿ ಭವ್ಯರ್ಗಿಪ್ಪಿನಂ ತೋರ್ಪುಪಾ
ಧ್ಯಾಯರ್ಗಾನತನಪ್ಪೆನೀಗೆನಗುಪಾದೇಯಂ [5]ಪರ ಬ್ರಹ್ಮ[6]ಮಿಂ[6]
ಹೇಯಂ ಕಾಯಸಮೇತವಸ್ತುವೆನಿಪೀ ನಿಶ್ಶ್ರೇಯಸೋಪಾಯಮಂ ೪

ಪರಮದಯಾಗುಣಂ ನಯನದೊಳ್ ದೊರೆವೆತ್ತನುಕಂಪೆ ಕಾಯದೊಳ್
ಗುರುವಿನಯಂ ಗುಣಾಧಿಕ[7]ರೊಳುದ್ಧತಭಾವನೆ ತತ್ತ್ವವೃತ್ತಿಯೊಳ್
ಚರಿತಮುದಾತ್ತಷಟ್ಕ್ರಿಯೆಗಳೊಳ್ ಧೃತಮೌನತೆ ಲೋಕವಾರ್ತೆಯೊಳ್
ದೊರೆವಡೆದೊಪ್ಪೆ ಸಂದರೆಮಗೀಗಜವಂ ನಲೆ ಸರ್ವಸಾಧುಗಳ್ ೫

---

1 ತನೆ (ಇಉ). 2 ಡಿ (ಇಉ). 3 ರ (ಇ) ರಂ (ಉ). 4 ಯು (ಅಇಉ). 5 ಬರೆ (ಕ). 6 ಮರ್ (ಇಉವ). 7 ದೊ (ಇಉವ).

ಆ ಪರಮಶ್ರೀದೃಷ್ಟಿಕ
ಳಾಪಮನೆಱಗಿಸುವ ಸಂಪದಕ್ಕೆಮಗದೆ ದಲ್
ರೂಪರ್ಹತ್ಸಿದ್ಧಾಚಾ
ರ್ಯೋಪಾಧ್ಯಾಯಾಖ್ಯಸರ್ವಸಾಧುಸ್ತವನಂ ೬

ವಿತ್ರಸ್ತಾರಿ ಜಿನೇಶ್ವರಂ ಪರಮದೈವಂ ತನ್ಮತಂ ಜೀವರಾ
ಶಿತ್ರಾಣಾಗಮಮೆಂದು ನಂಬುವಱಿವಿಂ[1] ಂದಾಚರಿಪ್ಪಂತಿವಂ[1]
[2]ತಃ[2]ತ್ರೈಲೋಕ್ಯಪತಿತ್ವಮುಂ ಕುಡುಗೆ ಸಮ್ಯಗ್ದರ್ಶನ ಜ್ಞಾನ ಚಾ
ರಿತ್ರಂಗಳ್ ಪರಮಾಮೃತ [3]ಪ್ರಣಯಿ[3] ಭವ್ಯಶ್ರೇಣಿಗವ್ಯಾಕುಳಂ ೭

ಪದವಿನ್ಯಾಸವಿಶೇಷದೊಳ್ ಪದವಿಲಾಸಂ [4]ಪೆ[4]ಂಪುವೆತ್ತಿರ್ದ ಕಾ
ವ್ಯದ ಮೆಯ್ಯೊಳ್ ಸಮುದಾಯಶೋಭೆ ವಿನುತಸ್ಯಾದರ್ಥದೊಳ್ ಮಧ್ಯಭಾ
ಗದ [5]ಕಾರ್ಶ್ಯಂ[5] ನಯಯುಗ್ಮದೊಳ್ ನಯನಭಾವಂ ಭಂಗಿಯಂ ತಾಳ್ದಿ ಸ
ನ್ನಿಧಿಯಾಗಿರ್ದ ಜಿನೇಂದ್ರವಾಗ್ವನಿತೆ ನಿಲ್ಕಸ್ಮನ್ಮುಖಾಂಭೋಜದೊಳ್ ೮

ವರದಕರಾಂಬುಜಂ ಮೆಱೆವ ಕೆಯ್ಯ [6]ಪಳಂ[6] ಕಡುರಯ್ಯಮಾದ ತೋ
ಳೆರಡಱ ಬಿಲ್ಲ ಕೋಲ ಪೊಸದೇಸೆ ವಿಳಾಸಮನಾಂತ ಯಕ್ಷಿ ಪಿಂ
ಜರರುಚಿ ಹಂಸವಾಹನೆ ಚತುರ್ಭುಜೆ ಶಾಸನದೇವಿ ಮದ್ವಚಃ
ಪರಿಣತಿಗೊಲ್ದನಂತಮತಿ ಮಾಡುಗನಂತಮತಿಪ್ರಕಾಶಮಂ ೯

ಪಳ ಪದ್ಮಂ ಹಳ ಶೂಲಮಂಕುಶ ಕಶಾಯುಗ್ಮಂ ಭುಜಾದಂಡಮಂ
ಡಳದೊಳ್ ತಳ್ತಿರೆ ಮೂಱುವಕ್ತ್ರವಳಯಂ ಶ್ವೇತಾಂಗವರ್ಣಕ್ಕೆ ಪಾ
ಲ್ಗೊಳದೊಳ್ ಪಂಕಜಪುಂಜದಂತೆಸೆದು ತೋರ್ಪಂ ಮತ್ಕೃತಿಶ್ರೀಗೆ ಮಂ
ಗಳಮಂ ಮಾಳ್ಕಧಿರೂಢಹಸ್ತಿಮಕರಂ ಪಾತಾಳಯಕ್ಷೇಶ್ವರಂ ೧೦

ಎನಗಾಲಂಬನಮಕ್ಕೆ ಮುಕ್ತಿಪದಪರ್ಯಂತಂಬರಂ ಜೈನಶಾ
ಸನಮಾನಂದಿತ ಪಾಕಶಾಸನಮುದಂಚತ್ಪುಣ್ಯ[7]ಬಂಧಾ[7]ದಿವಾ
ಸನಮೇನಃ ಪ್ರಕರ ಪ್ರಶಾಸನಮನಂತೈಶ್ವರ್ಯಲಕ್ಷ್ಮೀಸಮಾ
ಸನಮುಜ್ಜೃಂಭಿತ ನಿರ್ವೃತಿಪ್ರಿಯತಮಾನೇತ್ರಾಂಬುಜೋಲ್ಲಾಸನಂ ೧೧

---

1 ದಾಚಂಪಿಂತವಂ (ಇಉ), ದಾಚಾರ್ಯರಪ್ಪಂತನಂ (ಅ). 2 ತಾಂ (ಎ). 3 ಪ್ರಣಯ (ಇಉ). 4 ಸೊ (ಅಇಉ). 5 ಷ್ಣ್ಯಂ (ಅಇಉ). 6 ಫಳ (ಎ). 7 ಬೃಂದಾ (ಅಇಉ).

ಅ[1]ನು[1]ಯೋಗಪ್ರತಿಭಂಗುರಂ ನಯಲತಾಶ್ಲಿಷ್ಟಂ ದಯಾ[2]ರ್ಣ[2]ಪ್ರಪೂ
ರ್ಣನಿಜಾವಾಳಮುಪಾತ್ತಭವ್ಯಸುಖದಚ್ಛಾಯಂ ಶ್ರುತಸ್ಕಂಧ ನೂ
ತನ ಚೂತಂ ಸುಖಲೀಲೆ[3]ಯಂ[3] ನಮಗೆ ಮಾಟ್ಕೊಲ್ದೊದಿಸುತ್ತಿರ್ಕೆ ಮ
ತ್ತನುಬದ್ಧ ಶ್ರುತಕೇವಳಿ ಪ್ರಕರಕೀ[4]ರ[4] ಪ್ರೌ[5]ಢ[5]ವಾಕ್ಪ್ರೌಢಿಯಂ ೧೨

ಆಚಾರೋಚಿತ ಸಂಯಮೋಪಕರಣವ್ಯುತ್ಪಾದಕರ್ ಗೃಧ್ರಪಿಂ
ಛಾಚಾರ್ಯರ್ ಚತುರಂಗುಲೋದ್ಗಮನ [6]ಋದ್ಧಿಪ್ರಾಭರ್[6] ಕೊಂಡಕುಂ
ದಾಚಾರ್ಯರ್ ನೃಪಭೃತ್ಯವರ್ಧಿತ[7]ಸ[7]ಧರ್ಮರ್ ಶ್ರೀಜಟಾಸಿಂಹಣಾ
ದ್ಯಾಚಾರ್ಯರ್ ದಯೆಗೆಯ್ಸುರಕ್ಕೆಮಗೆ ಶುದ್ಧಾಚಾರ ಸಂಪತ್ತಿಯಂ ೧೩

ಸದಮಳಧರ್ಮದ ಕಣ್ಣುಂ
ಪದಯುಗಳದಿನೆಸೆವ ಗತಿಯು [8]ಮೆನೆ[8]ತೊಣೆವೆಸಗೊ
ಪ್ಪಿದರಲ್ತೆ ಭೂತಬಲಿ ಪು
ಷ್ಪದಂತ ಜಿನಸೇನ ವೀರಸೇನಾಚಾರ್ಯರ್ ೧೪

ಗಣಧರರೋ ಸ್ವಾಮಿಗಳೋ
ಗುಣದಿಂದಾವಜಿ[9]ಯೊ[9]ವೆಜಿ[9]ಗಿ[9] ಶುದ್ಧರೆಮೆಮ್ಮಂ
ತಣಿಪುಗೆ ಸಮಂತಭದ್ರರ
ಗುಣಭದ್ರರ ಪೂಜ್ಯಪಾದರಾಖ್ಯಾನಂಗಳ್ ೧೫

ವಿಕಳ ಸ್ವಪಕ್ಷಮೆನಿಸಿದು
ದಕಳಂಕನ ವಾಕ್ಯವಜ್ರಹತಿಯಿಂ ನೈಯಾ
ಯಿಕ ಪಾರಮರ್ಷ ಮೀಮಾಂ
ಸಕ ಬಾರ್ಹಸ್ಪತ್ಯ ಬೌದ್ಧಕುಳ ಕುಧರಕುಳಂ ೧೬

ವ[10]ಂದ್ಯ[10] ಜಟಾಸಿಂಹಣಂದ್ಯಾಚಾರ್ಯಾದೀಂದ್ರ
ಣಂದ್ಯಾಚಾರ್ಯಾದಿ ಮುನಿಪರಾ ಕಾಣೂರ್ಗ
[11]ಣಂ ದ್ಯಾವಾ ಪೃ[11]ಥಿವಿಯೊಳಗೆಲ್ಲಂ ೧೭

---

1 ನಿ (ಇ ಉ). 2 ರ್ಣ (ಇ ಉ.) 3 ಯಿಂ (ಅ ಇ ಉ). 4 ತಿರ್ಣ (ಅ.).
5 ಢಿ (ಅಇಉ). 6 ರೂಹರ್ ಧೀಪ್ರಭರ್ (ಅ). 7 ಸು (ಅ ಇ ಉ ಎ).
8 ಮೊಪ್ಪೆ (ಇ, ಉ). 9 ಮೆಱೆಗೆ (ಅ ಇ). 10 ದ್ಯಂ (ಉ).
11 ಣಂದ್ಯಪೃರ್ಥಿವಿ (ಅ ಇ).

ಗುಣಚಂದ್ರಂ ತ್ರೈವಿದ್ಯಾ
ಗ್ರಣಿ ಘೋರತಪಃ ಕೃಶಾನು[1]ತನು ಘೃಣಿಯಾವ
ದ್ಗ[1]ಣಿತನಭೋಮಣಿ ಜಿನಮುನಿ
ಗಣಚೂಡಾಮಣಿ ಸುಶೀಲಗುಣಗಣಿ ನೆಗಳ್ದಂ ೧೮

ಆ ಮುನಿಪತಿಗಂ ಶೀಲವು
ಹಾಮಹಿಮೋನ್ನತಿಗಮೊಗೆದರಮುಳಿನಿಪಮುಳ
ರ್ತಾಮ[2]ಲ್ತೆ[2] ಕನಕಚಂದ್ರ ಮ
ಹಾಮುನಿಯುಂ ಮಾಧವೇಂದುಯತಿಪುಂಗವನುಂ ೧೯

ಯತಿರೂಪ ಚಂದ್ರಸೂರ್ಯ
ದ್ವಿತಯಮಿದೆನೆ ಕನಕಚಂದ್ರ ಮಾಧವಚಂದ್ರ
ವ್ರತಿಗಳ್ ಸಧರ್ಮರುದ್ಯೋ
ತಿತ ಸಿದ್ಧಾಂತೋತ್ಪಳಾಂಬುಜಾಕರರೆಸೆದರ್ ೨೦

ಜಯಕೇಶಿ ಕ್ಷಿತಿಪಾಲನಾನೆ ವಿಸಟಂಬಾಯ್ವಂದು [3]ಬೆಳ್ಗಾವೆ[3]ಯೊಳ್
ಲಯಕಾಲಾಂತಕನಂತೆ ಬಂದೊಡಚಳರ್ನಿಂದಿರ್ಪುದುಂ ಮೊಟ್ಟೆಗ್ಗೆ ಪಾ
ದಯುಗಂಗಳ್ಗುಪಶಾಂತಿಯಿಂದೆ ಬಲವಂದಾಚಾರಮುಂ ತಾಳ್ದಿ ಶಾ
ಲೆಯೊಳಿರ್ದತ್ತಿದು ಮಾಧವೇಂದ್ರಮುನಿ[4]ಸಾಮರ್ಥ್ಯಂ[4] ಜಗದ್ವಂದಿತಂ ೨೧

ಶ್ರೀಮದ್ಗಂಡವಿಮುಕ್ತಿಶಿ
ಖಾಮಣಿಗಳ್ ರಾಮಚಂದ್ರದೇವಮುನೀಂದ್ರರ್
ಪ್ರೇಮದ ಶಿಷ್ಯಾಗ್ರೇಸರ
ರಾಮಾಧವಚಂದ್ರದೇವಸೈದ್ಧಾಂತಿಕರಾ ೨೨

ನೆನೆಯಲ್ಬಾರದು ಸುಟ್ಟ ತೋಱಲರಿದಾರ್ಗಂ ರಾಮಚಂದ್ರವ್ರತೀಂ
ದ್ರನ ದುರ್ವಾರ ನಿಘೋರ ವೀರ ತಪಮೇನಂ ಪೇೞ್ದಪೆಂ ದೂರದ
ರ್ಶನ ದೂರಶ್ರವಣ ಪ್ರಸಿ[5]ದ್ಧ[5] ಮಲಧಾರಿ ಪ್ರಾಭವಂ ಕುಕ್ಕುಟಾ
ಸನ[6]ಮಾ[6] ಗಂಡವಿಮುಕ್ತವರ್ತನೆ ಪುರದ್ವಾರಂ ಸದೈಕಾಂತರಂ ೨೩

---

1 ತನುಗುಣಿಯಾದಂಗ (ಅಇಉ). 2 ಲ್ಲೆ (ಅಇ), ಲ್ಲಿ (ಉ) 3 ವೇಳಾವೆ (ಅಇಉ). 4 ಪಾಮರ್ಥ್ಯಂ (ಇ). 5 ಧ್ಧಿ (ಇ ಉ). 6. ವಾ (ಅ ಇ ಉ).

ಮದನನ ಕೆಯ್ದು ಕೆಯ್ದು ಕರಶಾಖೆ ಮುರುಂಟಿದುದೆಯ್ದೆ ಗೊಟ್ಟುಗ
ಟ್ಟಿದುದು ಸರಲ್ಗೆ ಬೀಗಿ ನನೆದೋಱುವ ಪೂಗುಡಿ ಬಿಲ್ಲ ಕರ್ವು ನಾಂ
ಟಿದೆ ನಸಿದತ್ತು ನಾರಿಯೆಳದುಂಬಿಯ ಮಾಲೆಯು ಕೋಡೆಱಂಕೆ ಸೀ
ದುದಿರ್ದುದು ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ ೨೪

*ಶ್ರೀಮತ್ಕಾಣೂರ್ಗಣ ಚಿಂ
ತಾಮಣಿಗಳ್ ರಾಮಚಂದ್ರದೇವಮುನೀಂದ್ರರ್
ತಾಮೆ ಗಡ ಗುರುಗಳೆನಿಪ ಮ
ಹಾ ಮಹಿಮೆಗೆ ಜನ್ನನಂತೆ ನೋಂತವನಾವಂ ೨೫

ಲಕುಮಾದೇವಿ ಸುಶೀಲೆ ಸುವ್ರತನಿಧಾನಂ ರಾಯ,ದಂಡಾಧಿನಾ
ಥ ಕೃತಾಂತಂ ಪೆಸರ್ವೆತ್ತ ಚಾಕಣನಪತ್ಯಂ [1]ರೇಚಯಂ[1] ಪೆತ್ತ ಪು
ತ್ರಿ ಕುಲಸ್ತ್ರೀ ಗಡ ಭಾಳಲೋಚನನ ಭವ್ಯಾಚಾರಗಾರ್ಹಸ್ಥ್ಯಮೇಂ
ಸಕಲೈಶ್ವರ್ಯಗಭೀರಮೇಂ ಸತತ ದಾನಾಧಾರಮೇಂ ಸಾರಮೋ ೨೬

ಆ ಸಮ್ಯಕ್ತ್ವ ಚೂಡಾಮಣಿ ಭೂಷಣೆಯ ಗುರುಕುಳ ಪ್ರಸಿದ್ಧಾಚಾರ್ಯರೊಳಗೆ

ಜಾವಳಿಗೆಯ ಮುನಿಚಂದ್ರ
ತ್ರೈವಿದ್ಯರ ವಿಶ್ರುತಶ್ರುತಪ್ರತಿಬೋಧಂ
ದೇವರ ದೇವನ ಜಿನಪನ
ಕೇವಳಲೋಚ[2]ನನ[2] ನುಡಿದ ನಾಲಗೆಯೆಂಬಂ ೨೭

ಕುಲಭೂಷಣರ್ದಿಗಂಬರ
ಕುಲಭೂಷಣರವರ್ಗಳಗ್ರಸಂತತವಿದ್ಯಾ
ಕುಲಭೂಷಣರಾದಗ್ರುರು
ಕುಲ ಭೂಷಣರಾದರಾ ಮುನೀಂದ್ರರ್ ಶಿಷ್ಯರ್ ೨೮

ಬೋಧನಿಧಿ ಸಕಲಚಂದ್ರತ
ಪೋಧನರಧಿಗತ ವಿನೂತ ವಿದ್ಯಾತ್ರಿತಯರ್
ಮಾಧವಚಂದ್ರ ತ್ರೈವಿ
ದ್ಯಾಧಿಪನಾ ಸಕಲಚಂದ್ರದೇವಕುಮಾರಂ ೨೯

---

1 ಕೆಬ್ಬೆಯಂ (ಉ), ತೇಜೆಯಂ (ಎ). 2 ನದ (ಅ ಇ ಉ.)

* ಯಶೋಧರಕಾವ್ಯ ೧-೨೨.

ಕಂತುವ ಮೀನಕೇತು ಚಮರಂ ಚಮರೀಜಮುಳಲ್ದೆಳಲ್ದ ತ
ತ್ಕಾಂತೆಯ ಕುಂತಳಾವಳಿಯೆ ಸೀಗುರಿ ಪೂವಿನ ಬಿಲ್ಲ ಬಾಗು ಶು
ಭ್ರಂತಪನತ್ರಮಾಗಿ ಮೆಱೆಯುತ್ತಿರೆ ಮಾಧವಚಂದ್ರದೇವ ಸೈ
ದ್ಧಾಂತಿಕಚಕ್ರಿ ಕಾಮಜಯದಿಂ ತಳೆದಂ ಮುನಿರಾಜಲೀಲೆಯಂ ೩೦

ಭೂವಿನುತನೆನಿಸಿದಂ ಪಾ
ರಾವಾರದ ಮಣಿಗಳೊಳಗೆ ಕೌಸ್ತುಭಮೆಂತಂ
ತೀ ವಿಭು ಮಾಧವಚಂದ್ರ
ತ್ರೈವಿದ್ಯರ ಶಿಷ್ಯರೊಳಗೆ ಗುರುಕುಲತಿಲಕಂ ೩೧

ಜಿನಶಾಸನಗುರುಕುಳವ
ರ್ಣನ ಭೂಮಿಗೆ ಸೀಮೆಯಾದನೂರ್ಜಿತ ಕವಿ ವ
ರ್ಣನನಟನೆಗೆ [1]ನಾಂದಿ ನಿ[1]ಬಂ
ಧನವಾದಂ ಬಾಳಚಂದ್ರಕವಿಕಂದರ್ಪಂ ೩೨

ಕವಿಕಂದರ್ಪನ ಬಾಳಚಂದ್ರನ ಲಸದ್ಬಾಣೋತ್ಕರಂ ಕೂರ್ತು ವಂ
ದವರ್ಗಂ ನೆಟ್ಟನೆ ಕೂರ್ತು ಕೂ[2]ಡ[2]ದವರ್ಗಂ ರಾಗಾ[3]ಬ್ಧಿ[3]ಕಲ್ಲೋಲಮಂ
ಕಿವಿಯಂ ತಾಗಲೊಡಂ ತೆರಳ್ಚುವು[4]ದೆರ್ದೆ[4]ಗೇಟ್ದಿಪ್ಪೆ ಸಮ್ಮೋಹನಾ
ಸ್ತ್ರಮೆನಲ್ಬಾರದು ಸಾಂದ್ರಚಂದ್ರಿಕೆಯೆನಲ್ಮೇಣ್ಬಾರದೇನೆಂದ[5]ಪೆಂ[5] ೩೩

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾನಾಗವ
ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ
ದು ನೃಸಿಂಹಕ್ಷಿತಿ[6]ನಾಥ[6]ನಲ್ಲಿ ಕಟಕೋಪಾಧ್ಯಾಯನಾರೆಂ[7]ಬ[7] ಸೂ
ಕ್ತಿ ನವೀನೋಜ್ವಳಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್ ೩೪

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ಣುಡಿ ಪಂಪನಿಂಪು ಪೊ
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ
ಣನ ಮೃದುಬಂಧಮೀ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ೩೫

---

1 ನಾಂದೀ (ಉ) 2 ಡಿ (ಉ) 3 ದಿ (ಅ ಇ ಉ).
4 ದೆರ್ದೆ (ಅ) ದದೇಗೆ (ಇಉ), ದನೇಗೆ (ಎ). 5 ಪೊ (ಎ) 6 ಫಾಲ (ಅ).
7 ಬೊ (ಇ).

ಅರಿದಿದು ಬಾೞಬಟ್ಟೆ ಪರಮಾಗಮಮಲ್ಲದೆ ಜಾರಚೋರ ವೀ
ರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱಕೆಯ್ವ ಚರ್ಚೆಯ
ಲ್ಲರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆಯಲ್ಕೆ ಪೇೞ್ದಪೆಂ
ಚರಿತಪುರಾಣಮಂ ಬಱಿದೆ ಪೇೞ್ದಪನೆಂ[1]ದೊ[1]ಡೆ ತಿರ್ದುವಪ್ಪುದೇ ೩೬

ಸಮುದಾಯಂ ಮೆಱೆಯಲ್ಕೆವೇೞ್ಪುದು ಕಥಾವಿಸ್ತಾರದೊಳ್ವರ್ಣನ
ಕ್ರಮಮೋಯಾರಮನಾ[2]ಳ್ದು ದಳ್ಳಿಸಿಸ[2]ವೇೞ್ಕುಂ ವೃತ್ತವೃತ್ತಕ್ಕೆ ಭಾ
ವಮೊಡಂಬಟ್ಟಿರವೇೞ್ಕುಮೊಂದೆ ತೆಱನಾಯಾಸಕ್ರಮಂ ಕಾವ್ಯಮಂ
ಸಮೆವಂಗಂ ಸಮೆವಂಗಮುಜ್ಜಳಿಪ ಸೂಚೀಯಾನಮಂ [3]ಚೀ[3]ನಮಂ ೩೭

ಸಹಜಂವೇೞ್ಪುದು ಮುನ್ನವೇೞ್ಪುದು ಪದವ್ಯುತ್ಪತ್ತಿವೇೞ್ಕುಂ ಬಲಂ
ಬಹುಕಾವ್ಯಾನುಭವಂ ಕಳಾಪ್ರತಿಭೆ ಲೋಕಜ್ಞತ್ವವಾಪ್ತಾಗಮ
ಸ್ಪೃಹೆಯೆಂದಿ[4]ವುಮಿ[4]ಲ್ಲದಿರ್ದ ಕವಿಗಳ್ ಕಾವ್ಯಂಗಳಂ ಮಾಡುವಾ
ಗ್ರಹಮಂ ಮಾಡಿದೊಡಾ ಗ್ರಹಂ ಪೊಡೆದವೋಲ್ ಬೆಂಡಾಗಿ ಬೀಳಾಗರೇ ೩೮

ಕವಿ[5]ಸರಸಂ[5] ವ್ಯುತ್ಪನ್ನಂ
ವಿವಿಧಕಳಾಭಿಜ್ಞನಾಗಮಜ್ಞಂ ಬರೆದೋ
ದುವ ಜಾಣನಾಗೆ ನಿರ್ವಹಿ
ಸುವುದಾ ಕವಿ ಪೇೞ್ದ ಕಾವ್ಯಮಖಿಳಶ್ರಾವ್ಯಂ ೩೯

ಪೞಿದೊಡೆ ಬಾೞ್ವನಲ್ಲದೊಡೆ ಸಾಯನೆ ಸತ್ಕೃತಿಗೇೞ್ದು ದುರ್ಜನಂ
ಪೞಿ[6]ದ್[6] ವೃಥೋಕ್ತಿ [7]ಸಲ್ಲದೊ[7]ಡೆ ಸಾಯದೆ ಕಾವ್ಯನಿಬಂಧನಕ್ಕಮಾ
ಪೞಿಯೆ ಪೊಗೞ್ತೆಯಲ್ತೆ ರಸವತ್ಕೃತಿಯಂ ಕವಿ ಪೇೞ್ಗೆ ದುರ್ಜನಂ
ಪೞಿಯುತುಮಿರ್ಕೆ ಬಾೞ್ವ ಮನೆಗೊಂದು ಬಗುೞ್ಪುದು ಬೇೞ್ಕುಮೆನ್ನಿರೇ ೪೦

ಕೃತಿನಿರ್ಮಾಣದೊಳೇಕೆ ದುರ್ಜನಭಯಾರೇಕಂ ಪ್ರವೇಕಂಗೆ ಪಂ
ಡಿತಸಂದೋಹಶಿರಶ್ಶಿಖಂಡಿನಟನಾಂದೋಳಪ್ರದಂ ರೋಮಹ
ರ್ಷತೃಣೋತ್ಪಾದಮುದಶ್ರುಪೂರಜನಕಂ ತಾನೆಂಬಿನಂ ಪೇೞ್ದೊಡಾ
ಕೃತಿವರ್ಷಾಗಮಲಕ್ಷ್ಮಿಗೆ ಧೂರ್ತದವಜಿಹ್ವಾಕರ್ತನಂ ಮಾಡಳೇ ೪೧

---

1 ದ (ಅಇ). 2 ಳ್ದುಷಿಸ (ಇ). 3 ಜೀ (ಅಇ). 4 ದುವಿ (ಅಇ), ವುಮಿ (ಉ). ನಿತಿ (ಎ). 5 ರಸಸಂ (ಅಇ). 6 ದು (ಅಇಉ). 7 ಸಲ್ಲದೆ (ಅ), ಸಾಲದೆ (ಉ).

ಅಱಿಯದೆ ಪದವಿನ್ಯಾಸಮ
ನಱಿಯದೆ ಸಾರಸ್ಯಮಂ ಪರಪ್ರತಿಭೆಯ ಗು
ಣ್ಪಱಿಯದೆ ತಾಮುಂ ಕೆಮ್ಮಗೆ
ಡುಱುಕೆಂಬುವು ಕುಕವಿಕೂಪಮಂಡೂಕಂಗಳ್ ೪೨

ಪದಮಂ ಪ್ರಾಸಮುಮಂ ತ
ಪ್ಪದೆ ಬಲ್ಲಂ ಬೇಱ[3] ಹೋದ ಹೊಲನಂ ರಸಭಾ
ವದೊಳಱಿಯನವನನೆಱ[3]ತ್ತ
ನ್ನದೆ ಮತ್ತೇನೆಂದು ಕರೆದೊ[1]ಡೊ[1]ೞಯೆಂದಪ್ಪಂ ೪೩

ತತ್ವವಿದರಾದೊಡಂ ಸರ
ಸತ್ವಕ್ಕೆಡೆಗುಡದ ಜಡರದೆಂತಱಿದಪರೋ
[2]ಸ್ವತ್ವಾಲೋಕರೊಳೇಕೆ[2] ಕ
ವಿತ್ವದ ಮಾತೇಕೆ ಕೇಳಿಸಲ್ವೇಡವರಂ ೪೪

ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚಬ
ಲ್ಲನನಱಸಲ್ಕೆವೇೞ್ಪುದವನಂ ಜಗದೊಳ್ಪಡೆಯಲ್ಕೆ ಬಾರದಾ
ತನ ಮುಖದಿಂದಮಲ್ಲದದು ಸಲ್ಲದು ಕಟ್ಟೆಯುಮೇನೊ ಮಾಲೆಗಾ
ಱನ ಪೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ೪೫

ಅವನ ಬೆಡಂಗು ಬೇಱವನ ವಕ್ತೃತೆ ಬೇಱವನೊಂದು ದೇಸೆ ಬೇ
ಱವನ ರಸಜ್ಞತಾವಿಷಯಸಂಗತಿ ಬೇಱ[3]ನೆ ಪೇೞ್ದು [4]ಸಂದವಂ[4]
ಕವಿ [5]ಪೞ[5]ಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ
ಕವಿಗಳ ವೇಷದಿಂದೆ ಕುಣಿದೇಡಿಪ [6]ಕೋ[6]ಡಗನೆಂದು ನಕ್ಕಪೆಂ ೪೬

ಕಳಕಂಠಸ್ವನಮಂ ಪಳಿಂಚಲಿವ ಶಬ್ದಂ ಬಂದ ಮಾಕಂದದೊ
ಳ್ಮೆಳೆಯಂ ಪಾಳಿಸುವರ್ಥ[7]ಮು[7]ಗ್ಗದ ಬಸಂತಕ್ಕಚ್ಚವೆಳ್ದಿಂಗಳು
ಜ್ಜ್ವಳಿಪಂ ತಾಳ್ದು ಗುಣಂ ರಸಕ್ಕೆಸೆಯೆ ಪೇಳ್ದಂ ರಾಜವಿದ್ವತ್ಸಭಾ
ಕಳಹಂಸಂ ಕವಿಭಾಳಲೋಚನನಿಳಾಸಂಸೇವ್ಯಮಂ ಕಾವ್ಯಮಂ ೪೭

---

1 ಡೇ (ಅ). 2 ಸ್ವಾತ್ಮಾಲಕರೊಳದೇಕೆ (ಇ), ಸ್ವಾತ್ವಾಲಕರೇಕೆ ಕ (ಉ) 3 ಮೆ (ಅ ಇ ಉ). 4 ಸಂಪದಂ (ಉ). 5 ಪಳೆ (ಉ), ಯಱ (ಎ). 6 ಱೋ (ಅ ಇ ಉ). 7 ವ (ಅ ಇ).

ಉಭಯಕವಿಚಕ್ರವರ್ತಿಯ
ಸಭೆಯಂ ಪುಗಲಣ್ಮವಲ್ತೆ ಪದ ವಾಕ್ಯಾರ್ಥ
ಪ್ರಭವಕಲಂಕಮಲಂಕಾ
ರ ಭಾವ ರಸ ರೀತಿ ದೂಷಣಾಭಾಸಂಗಳ್ ೪೮

ಚಂದನಪಂಕದೊಳ್ ಪರಿಮಳಂ ಮೆಱೆವಂತಿರೆ ಬಂಧದೊಳ್ ರಸ
ಸ್ಯಂದಿಗಳಾದ ಮಾತು ಮನಮಂ ಸಲೆ ಸಲ್ಲಿ[1]ಸೆ[1] ಪೇ[2]ಟ್ಬು[2] ಲೋಕದೊಳ್
ಸಂದ ಜನಾರ್ದನಂ ಸುಕವಿವಲ್ಲಭನಾತನ ಮುಂದೆ ಗಣ್ಯರೇ
ಚಂದದ ಬಳ್ಳಿಸಂಕಲೆಯೊಳಕ್ಕರಮಂ ಸೆಱೆಗೆಯ್ವ [3]ರಕ್ಕಸರ್[3] ೪೯

ಪಳಿಕಿನ ಕರ್ಪುರವಳುಕಿನ
ಮಳಯಜದಿಂಗಡಲ ಪೊಳೆವ ಮುತ್ತಿನ ಬೆಳ್ದಿಂ
ಗಳ ಸಿರಿಗೆ ಸರಿಗೆವರ್ಪುವು
ಪಳಚನೆ ಕವಿಭಾಳನೇತ್ರನಿಡುವ ಪದಂಗಳ್ ೫೦

ಚತುರಂ ನೀಱನುದಾರನುಜ್ಜ್ವಲಯಶಂ ಸೌಭಾಗ್ಯಸಂಪನ್ನನೂ
ರ್ಜಿತ ಪುಣ್ಯೋದಯನೀ ಜನಾರ್ದನನ ವಕ್ತ್ರಾಂಭೋಜಮಂ ಸಾರ್ದು ಸು
ಸ್ಥಿತೆಯಾಗಿರ್ದುದಱಿಂದೆ ತಾಂ ಸೊಬಗೆಯಾದಳ್ ಜಾಣೆಯಾದಳ್ ಸರ
ಸ್ವತಿ ಸಂಮ್ಮೋಹಿ[4]ತೆ[4]ಯಾದಳಗ್ಗ[5]ಳಮೆ[5]ಯಾದಳ್ ವಿಶ್ವಭೂಚಕ್ರದೊಳ್ ೫೧

ಪರಮಶ್ರೀಜಿನಪಾದಪಲ್ಲವ[6]ಲತಾಂತಂ[6] ನಿರ್ಮಳಂ ಜೈನಮಂ
ದಿರನಿರ್ಮಾಣಧನಂ ವಿನೇಯನಿಧಿ ಗಂಗಾನಂದನಂ ಶೌಚಿ ಶಂ
ಕರಪುತ್ರಂ ಕವಿ ಕಮ್ಮೆವಂಶನಧಿಕಜ್ಞಂ ಕಾಶ್ಯಪಂ ಮಾನವೋ
ತ್ತರನೆಂದೇವೊಗಟ್ವೆಂ [7]ಕವೀಂದ್ರಪರಿಷದ್ಭಾಳಾಕ್ಷನಂ[7] ಜನ್ನನಂ ೫೨

ಕವಿತಾಕೌತುಕದಿಂ ಮಹಾಪ್ರ[8]ಭೂ[8]ತೆಯಿಂದೌದಾರ್ಯದಿಂ ಭೋಗರೂ
ಪವಿಳಾಸೋದಯದಿಂದೆ ಜನ್ನನುರಸಂ ಸಂದಿರ್ದು ಚೆಲ್ವಾಯ್ತುಯಾ
ದವಸಿಂಹಂ ನರಸಿಂಹರಾಯನ ಸಭಾ[9]ವಾಚೋತ್ಸವಂ[9] ಚಂದ್ರನಿ
ರ್ದ ವಸಂತಂ ಮಳಯಾನಿಳಂ ಸೊಗಯಿಸಿರ್ದುದ್ಯಾನಮೆಂತಂತೆವೊಲ್ ೫೩

---

1 ಸಿ (ಆಇ), ಸೆ (ಉ). 2 ಳ್ದು (ಅಇ) ಳ್ದ (ಉ). 3 ಕರ್ಕಶರ್ (ಇಉ), ಕಕ್ಕಸರ್ (ಅ). 4 ನಿ (ಎ). 5 ಳಯೆ (ಇ), ಳಿಕೆ (ಎ). 6 ನಿತಾಂತಂ (ಕ). 7 ಕವೀಂದ್ರಪರಿಷದ್ಭಾಳೇಕ್ಷಣಂ (ಅಇ) ಕವೀಶ್ವರಸಭಾಭಾಳಾಕ್ಷನಂ (ಎ). 8 ಭೃ (ಅಇ). 9 ರಾಜೋತ್ಸವಂ (ಇ).

ಬರೆಯಲ್ಮೇಣ್ಮೃಚ್ಚರದಿಂ
[1]ದರಿಯಲ್ ಮೇಣ್ಕಯ್ಗೆ[1] ಪಲಗೆ ಬರೆ ಕಾವ್ಯಕಲಾ
ಪರಿಣತೆಯೊಳ್ ಖಟ್ಟಿಗಕಳಾ
ಪರಿಣತೆಯೊಳ್ ಭಾಳನೇತ್ರನೆನಿಪಂ ಜನ್ನಂ ೫೪

ತನ್ನ ನುಡಿ ತನ್ನ ತೇಜಂ
ತನ್ನ [2]ಚಲಂ[2] ತನ್ನ ವಿದ್ಯೆ ತನ್ನ ವಿಳಾಸಂ
ತನ್ನಮಯುವೆನಿ[3]ಸಿ[3] ನೆಗಟ್ದಂ
ಜನ್ನಂ ನರಸಿಂಹರಾಯನಾಸ್ಥಾಯಿಕೆಯೊಳ್ ೫೫

ನರಸಿಂಹನ ಚೋಳಕುಳೋ
ದ್ಧರಣನ ಸರ್ವಜ್ಞಭೂಪನೋಲಗದೊಳ್ನಿಂ
ದಿರೆ ದಂಡಾಧೀಶಂ ಕು
ಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ ೫೬

ತರುಣಿಯರೆ ಕುರುಳನಿಱಪಲ್
ಬೆರಲಂ ಕೊಳಲುರದ ಮೇಲೆ ಪೆಸರಕ್ಕರಮಂ
ಬರೆಯಲ್ಕಲ್ಲದೆ ಸಮಯಂ
ನೆರೆಯಲ್ಕಿಲ್ಲೆನಿಪ ಸೊಬಗಿನಭಿನವಮದನಂ ೫೭

[4]ಉಡೆ[4] ಬಾಳಕಿಯರ [5]ಪಱಕ್ಕೈ[5]
ದುಡು[6]ಕಿಂ[6]ದಂ ಪಱದ ಮುಂಜಿ ಬಾಕುಳೆಯರ ಬಾ
ಯ್ಕುಡಿವಡೆದ ಸೆಳೆದು ಬದ್ದೆಯ
ರುಡಿಸಿದೊಡುಡಕಲ್ತ ಕೊವರನಭಿನವಮದನಂ ೫೮

ನುಂಗಿಯುಗುಟ್ವಬಲೆಯರ ದಶ
ನಂಗಳ ನಲಿಗರೆಗಳಲ್ಲದೆಳ್ಳಿಕ್ಕಲ್ಕಿ
ಲ್ಲಂಗವೆನೆ ಸಂದ ಸೊಬಗಿನ
ಜಂಗಮಶಾಸನ[7]ಮೆ[7] ನಿಪ್ಪ ಸುರತವಿಳಾಸಂ ೫೯

---

1 ಕರೆಯಲ್ಮೇಣ್ಕಯ್ಗೆ (ಅ ಇ). ದರಿಯಲ್ಗೆಣ್ಕೆಯ್ಗೆ (ಉ), ಕರೆಯಲ್ಕೆಣ್ಕಯೆ (ಎ).
2 ಬಲಂ (ಅಇ), ಚಲಂ (ಉ). 3 ಸೆ (ಅ) 4 ಉಡೆಮಣಿ (ಎ)
5 ಕೈ (ಅ ಇ ಉ). 6 ಗಿ (ಎ). 7 ವೆ (ಉ).

ಕವಿತಾಶಕ್ತಿಸುರೇಂದ್ರಧೇನುವದು ಪುಣ್ಯಾಯತ್ತಮಾ ಕಾಮಧೇ
ನುವೆ ಕೈಸಾರ್ದೊಡಮಾವಚಸ್ಸುಧೆಯನನ್ಯರ್ಗಿತ್ತು ಕಾಲ್ಚಿಕ್ಕಿಗೂ
ಡುವವೊಲ್ತುಂಯ್ಯಲನಿಂದ್ರವಂದಿತನನರ್ಹದ್ದೇವನಂ ಭರ್ತೃಮಾ
ಡುವುದಾತಂ ಕಱಿದಾತನಲ್ತೆ ತ[1]ಳೆ[1]ಯೊಳ್ಪಾಲಂ ಭವದ್ವಂಧ್ವದಾ ೬೦

ದೇವಾಧೀಶನನೊರ್ಮೆ ವರ್ಣಿಸೆ ಮನೋವಾಕ್ಕಾಯಸಂಶುದ್ಧಿಯಿಂ
ದೇವೇಂದ್ರತ್ವಮೆ ಸಾರ್ವುದೆಂದೊಡೆ ತದೀಯಾಶ್ಚರ್ಯಚಾರಿತ್ರದೊಳ್
ಭಾವಂ ನಿಂದು ಪುರಾಣಮಂ ಸಮೆದನಾರ್ಹಂತ್ಯಕ್ಕೆ ಹಂಗೇಕೆ " **ಯೋ**
**ಭಾವಸ್ಸೋಽಭವ** "ಮೆಂಬ ವಾಕ್ಯಮೆ ವಲಂ ಮೂಢಪ್ರಬೋಧಾವಹಂ ೬೧

ಕವಿಬಾಳೇಕ್ಷಣ ಜನ್ನ ನಿನ್ನ ಕವಿತಾಪ್ರೋತ್ತುಂಗಸಂಪತ್ತಿ ಮೇ
ರುವಿನಂತಿರ್ದಪುದಿಂದ್ರನಂ ಮಱೆಯಿಸಲ್ ಸಾಲ್ದಪ್ಪುದೀ ನಿನ್ನಭ
ವ್ಯವಿಳಾಸಂ ಕೃತಿಮಾರ್ಗಪಾಂಡುಕಶಿಲಾಪಟ್ಟಾಗ್ರದೊಳ್ ವಾಕ್ಸುಧಾ
ಸವನಂ ಶ್ರೀಮದನಂತನಾಥಚರಿತಕ್ಕಿಂಬಾಗೆ ಸಂಭಾವಿಸಾ ೬೨

ಎಂದೆನ್ನಂ ಭರದಿಂ ವಿನೇಯಜನಮೆಲ್ಲಂ ಪೇೞೆ ಪೇೞಲ್ಕನಂ
ದಂದೆಂ ಭಕ್ತಿನಿತಂಬಿನೀಪ್ರಣಯದಿಂದಂ ಕಾಮಿ ಕಣ್ಗಾಣನುಂ
ತುಂ ದಲ್ ಪೂರ್ವಕವಿಪ್ರಬಂಧಪರಿಪಾಕಕ್ಕಿಂತಿದಲ್ತೆಂದೊಡಂ
ಕುಂದೇಂ ತುಂಬಿಗರಲ್ಗಳೊಳ್ ಬಿರಿಮುಗುಳ್ ಸಂಪ್ರೀತಿಯಂ ಮಾಡದೇ ೬೩

ರಸತೋಯಂ ಭಾವಗಂಧಂ ಪದಸದಕಚಯಂ ಕಾವ್ಯಪುಷ್ಪಂ ಗುಣಾನ್ನ
ಪ್ರಸರಂ ವೃತ್ತಪ್ರದೀಪಂ ವಚನ ರುಚಿರಧೂಪಂ ಜಿನಶ್ರೀಫಲಂ ನಿ
ಪ್ಪೊಸತಾಯ್ತಷ್ಟಪ್ರಕಾರಾರ್ಚನೆಯೆನಿಸಿದಪೆಂ ಸಲ್ಗನಂತಂಗೆ ಮತ್ಕಾ
ವ್ಯಸಪರ್ಯಾಶ್ಚರ್ಯದೊಳ್ ಸತ್ಕವಿಸಮಯಿಗಳಿಂ ಶಾಂತಿಧಾರಾವಿಶೇಷಂ ೬೪

ಬೆಸಗೊಂಡಂ ಭರತೇಶ್ವರಂ ವೃಷಭಸೇನಸ್ವಾಮಿ ಕೈಲಾಸದೊಳ್
ಬೆಸಸಿಟ್ಟಂ ಪುರುನಾಥನೋಲಗದೊಳಾಸದ್ವೃತ್ತಮಂ ಶ್ರೇಣಿಕಂ
ಬೆಸಗೊಂಡಂ ವಿಪುಳಾದ್ರಿಯೊಳ್ ತಿಳಿಯೆ ಪೇೞ್ದರ್ ಗೌತಮರ್ ವರ್ಧಮಾ
ನಸಭಾಮಧ್ಯದೊಳಾಪುರಾಣಕೃತಿಯಂ ಬಲ್ಲಂದದಿಂ ಪೇೞ್ದಪೆಂ ೬೫

ಮುನಿಮಾರ್ಗೋಕ್ತಿಪುರಾಣಪದ್ಧತಿಗೆ ಲೋಕಾಕಾರಮುಂ ತೀರ್ಥವ
ರ್ತನಮುಂ [2]ವ್ಯಾಪ್ತಚತುರ್ಗತಿಸ್ಥಿತಿಗಳುಂ ಭಾಸ್ವತ್ತಪೋದಾನಕೀ

1 ಲೆ (ಎ). 2 ವ್ಯಾಪ್ತಚು (ಅ ಇ), ವ್ಯಾಪ್ತಚ (ಉ).

ರ್ತನಮುಂ ತತ್ಫಲಸಿದ್ಧಿಯುಂ ನೆಗಟ್ದ[1]ವೈ[1]ದಂಗಂ ಕವಿಪ್ರೋಕ್ತಕಾ
ವ್ಯನಿಬಂಧೋಚಿತ[2]ಮೆಂಟು[2] ದೇಶನಗರೀರಾಜ್ಯೋತ್ಸವಾಖ್ಯಾನದಿಂ ೬೬

ಅದಱೊಳರ್ಹತ್ಪರಮೇಶ್ವರನ ದೇವರದೇವನ ಕೇವಲಾಗಮಲೋಚನಕೆ ಗೋಚರವಾದ ಲೋಕಪ್ರಕಾರಮೆಂತೆಂದೊಡೆ

ಅದಕರ್ತೃಕಮದಭರ್ತೃಕ
[3]ಮದಹರ್ತೃಕ[3]ಮಂತದೂರ್ಧ್ವಮಧ್ಯಾಧೋಭೇ
ದದಿ[4]ನಿರ್ಪುದು[4] ಷಡ್ದ್ರವ್ಯಾ
ಸ್ಪದಮಾಗಮಸಿದ್ಧಮಂ[5]ಬರ[5]ಪ್ರತಿಬದ್ಧಂ । ೬೭

ಡಮರುಗದ ಮೇಲೆ ಡಮರುಗ
ಸಮುಖಂಡಮನಿಱಿಪಿದಂತೆ ಜಗಮಿರ್ಪುದ[6]ಧಃ[6]
ಸಮಚತುರಶ್ರಂ ಕೃಶಮ
ಧ್ಯಮುಮಂತರ್ವ್ಯಾಸಮಗ್ರಭಾಗಸಮಾನಂ ೬೮

ತಳವೇೞಂತರವೊಂದು ರಜ್ಜುಮಗುೞ್ದೈ[7]ದ[7]ತ್ತೊಂದುಪೂರ್ವಾಪರ
ಗಳೊ[8]ಳೇಳೀರ್ವ್ವಡಗಲ್[8] ನಿಮಿರ್ಕೆ ಪದಿನಾಲ್ಕುದ್ದಂ ತ್ರಿವಾತಂಗಳಿಂ
ಬಳಸಿತ್ತಿಂತುಟು ಲೋಕಮೀ ತ್ರಿಜಗಮುಂ ಕೋದಿಟ್ಟದಾರಂಬೊಲ
ಗ್ಗಳಿಸಿರ್ಕುಂ ತ್ರಸನಾಳವೊಂದಗಲದಿಂದಾಮೂಳಚೂಳಂಬರಂ ೬೯

ತ್ರಸನಾಳದೊಳಲ್ಲದೆ ಜನಿ
ಯಿಸವಖಿಳಪ್ರಾಣಿರೂಪಕತ್ರಸ[9]ಮ[9]ದಱಿಂ
ತ್ರಸನಾಳಂ ಪೆಸರಿಂದಾ
ತ್ರಸನಾಳಬಹಿಷ್ಠಮಾದ ವಿಷ್ಟಪದೆಡೆಯೊಳ್ ೭೦

ಮರುತಾವೃತಿವರೆಗಂ ಸ್ಥಾ
ವರಮಲ್ಲದೆ ಪುಟ್ಟವಿತ್ತ ಮೇಗಣ ಲೋಕಂ
ಸುರಲೋಕಂ ನಡುವಣದಿದು
ನರಲೋಕಂ ಕೆಳಗೆ ಭವನಮುತ್ತ[10]ಲ್[10] ನರಕಂ ೭೧

---

1 ದೈದ (ಇ). 2 ಮೆಂಟುದು(ಕ), ಮೆಂದು (ಇ). 3 ಮದಹಂಕೃತ (ಅ ಇ), ಮದಂಕೃತಕ(ಉ). 4 ಸಿಪ್ಪುದು (ಇ) ನಿರ್ಪುದು (ಅ ಉ). 5 ಬರಂ (ಕ). 6 ಶ್ರ (ಅ ಇ), ಧಃ (ಉ). 7 ಮ (ಅ ಇ). 8 ಳಿರ್ವಗರ್ಡಮಲ್ಲಿ (ಅ ಇ ಉ) 9 ವ (ಅ ಇ). 10 ಲು (ಅ ಇ ಎ).

ಮೇರುವೆ ಮಧ್ಯದೊಳ್ನೆಲಸೆ ಸುತ್ತಿಱಿದಿರ್ಪುದು ಜಂಬೂ[1]ದೀಪಮಂ[1]
ಕ್ಷಾರಪಯೋಧಿ ಸುತ್ತಿದುದನುಕ್ರಮದಿಂ ಪಲವಬ್ಧಿಗಳ್ ಸ್ವಯಂ
ಭೂರಮಣಾಬ್ಧಿ ಮುಟ್ಟನಿತು ದೀಪದ ಮುಂಧರ[2]ದಿಂ[2]ಬುವೆತ್ತ ವಿ
ಸ್ತಾರದೊಳೇಕರಜ್ಜು ಪರಿಮಾಣವೆನಿಪ್ಪುದು ಮಧ್ಯವಿಷ್ಟಪಂ ೭೨

ಆ ಮಧ್ಯವಿಷ್ಟಪದ ನಟ್ಟನಡುವೆ

ದಿವಿಜೋರ್ವೀಧರೆ ಕರ್ಣಿಕಾವಿಳಸಿತಂ ಗೋತ್ರಾ[3]ಳಿ ಪತ್ರಪ್ರಪಂ
ಚ[3]ವಿನದ್ಧಂ ಗಜದಂತಶೈಲಚಯಚಂಚತ್ಕೇಸರಂ ದ್ವಿಃಪ್ರದೇ
ಶವಿದೇಹಾನ್ವಿತಪ[4]ರ್ವನು[4]ಭ್ರಮು[5]ಧು[5]ಲಿಡ್ವಿಭ್ರಾಜಿ ರಾರಾಜಿಕುಂ
ಲವಣಾಂಬೋಧಿ ಸರೋವರ ಪ್ರಥಿತಜಂಬೂದ್ವೀಪ ನೀರೇರುಹಂ ೭೩

ಆ ಜಂಬೂದ್ವೀಪಮಹಾ
ರಾಜಮರಾಳನ ಪತತ್ರಯುಗಮೆನಿಪುವು ವಿ
ಭ್ರಾಜಿತ ಭರತೈರಾವತ
ದೋಜೆಗಳವಱೊಳಗೆ ತೆಂಕ ಭರತಕ್ಷೇತ್ರಂ ೭೪

ಆ ಭರತದೊಳತಿಶಯಸುಖ
ಲಾಭರತರ ನಚ್ಚಿನಚ್ಚು ತಾನೆನೆ ನಾನಾ
ಶೋಭಾವಿಳಸಿತಮುಂಟು ಯ
ಶೋಭಾವಿಷಯಂ ವಿನೂತಕೌಶಲವಿಷಯಂ ೭೫

ಅಲ್ಲಿ

[6]ಬೆಳೆನೆ[6]ಲನೊಂದು ಮೆಟ್ಟನೆಡೆಯುಂ ಬಿಡಲಿಲ್ಲದನೇಕ[7]ಧಾನ್ಯ[7]ಸಂ
ಕುಳಬಹುವರ್ಣಪೂರ್ಣಕಣಿಶಾವಳಿಯಂ ನವರತ್ನರಾಶಿಯಂ
ಬೆಳೆದವೊಲಿರ್ಪುದಾ ಬೆಳಸಿನೊಳ್ ಪಡೆದೂರ್ಜಿತಪುಣ್ಯಪುಂಜಿಕಾ
ವಳಿಯವೊಲಿಪ್ಪವೂರ್ಗಳನಿತುಂ ನವಸೌಧನಿಕೇತನಂಗಳಿಂ ೭೬

ಗಿಳಿಗಿಳಿವಿಂಡಿನೊಳ್ ಸೆಣಸಿ ಬಯ್ವುವು ಕೋಗಿಲೆ ಕೋಕಿಳಕ್ಕೆ ಕೆ
ಕ್ಕಳಿಸಿ ಕುಕಿಲ್ವವುದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ [8]ಚಾ[8]
ವಳಿಸಿ ಜಡಾಳದೊಳ್ಮೊರೆವುವಾದೊಡೆಯೂರ ಬನಂ ಬನಂಗಳೊಳ್
ಕೆಳೆಗಿಡದಂತೆವೊಲ್ಗಡಣೆಸಿರ್ಪುವು ತದ್ವಿಷಯಾಂತರಾಳದೊಳ್ ೭೭

---

1 ಪಮಂ (ಅಇ), ವ (ಉ). 2 ವಿಂ (ಅ ಇ), ಮಿ (ಉ). 3 ದ್ರಿಪತ್ರ ಪ್ರಸನ್ನ (ಎ). 4 ರ್ವವ (ಆ ಇ ಎ), ವಮು (ಉ). 5 ದು (ಅ ಇ), ಧು (ಉ). 6 ಬೆಳವೊ (ಎ). 7 ರಾಜ್ಯ (ಎ). 8 ಜಾ (ಅ), ಬಾ (ಇ), ಚಾ (ಉ).

ತೂಱಲ ಸೆಳ್ಳೆಗೊಂಬುವರೆಗಂ ನನೆ[1]ವೇ[1]ಱಿದ ಮಾವು ಮೊಗ್ಗೆಯಿಂ
ಪೇಱಿದ ಮಲ್ಲಿಕಾಲತೆ ಮಡಲ್ತಲರ್ವೇಱಿದ ಚಂಪಕಾಳಿ ಕಾ
ಯ್ವೇಱಿದ ತೆಂಗು ತೋರಗೊನೆವೇಱಿದ ಕಂಚಳವಾಟಿ[3] ತೋರಪ
ಪ್ಪೇಱಿದ ಬಕ್ಕೆ [2]ಕುಂ[2]ದದನುಸಂಧಿಸೆ ನಂದನನಂದನಂಗಳೊಳ್ ೭೮

ಕರೆವಂತಧ್ವಗರಂ ತೃಷಾರ್ತಮುಖರಂ ಪೀಯೂಷಮೇಕೆಂದು ಮಾಂ
ಕರಿಪಂತಗ್ಗದ ಸಗ್ಗದೇೞ್ಗೆಗೆ ರಸಾಸ್ವಾದಕ್ಷಿಣೋನ್ಮಾದದಿಂ
ಕರೆವಂತಿರ್ಪುವು ನಂದನಾಂಚಳಮಿಳತ್ಪ್ರಾಳೇಯ ಪಾಳೀನಿರಂ
ತರಿತ ಜೀರ್ಗರೆವಿಕ್ಷುಯಂತ್ರನಿಕರಂ ಪುಂಡ್ರೇಕ್ಷುಷಂಡಂಗಳೊಳ್ ೭೯

ಅಲ್ಲದೆಯುಮಲ್ಲಿ ಬಿತ್ತಿದ ಹೊನ್ನ ಬೀಜವೊತ್ತರಿಸಿ ಬೆಳೆದಂತೆ ರಂಜಿಸುವ ಮಂಜೀರ ಪಿಂಜರವರ್ಣದಿಂದೆಸೆವ ವಿಳಾಸಿನಿಗೆ ಕೇಸರದಂಗರಾಗಮಂ ಸಂಗಳಿಸಲ್ನೆಱ[3]ದ[3] ಪಣ್ಬೆಳಸಿಂ ಕಣ್ಬಸರವಾದ ಕೇದಾರವನಂಗಳೊಳಗೆ

ಕದಿರೊಡೆದ ಬೆಳೆದ ಕೞವೆಯ
ಕದಿರ್ಗಂಪಿಂಗೆಱಗಿ ಪಱಮೆಗಳ್ಮೃಱೆಯಿಸುಗುಂ
ಮದನಂ [4]ಮಡವಿಱಿ[4]ದಿೞಿಪಿದ
ಹೊದೆಯಂಬಿನ ಸರಲ ಗಱಿಯ ಹಿಳ್ಕಿನ ತೆಱನಂ ೮೦

ಮಡಿಯೊಳ್ ಪಾಲೆಱಗಿರ್ದ ಶಾಳಿವನದೊಳ್ ಕೀರಾಳಿಯುಂ ಸೋವಲೊ
ಳ್ಮೃಡಿಯಿಂದಂ ಮಿಡಿವಿಲ್ಲೊಳಿಚ್ಚೊಡೆಡೆಯೊಳ್ ಪುಂಡ್ರೇಕ್ಷುವಂ ತಾಗೆ ಗಂ
ಟೊಡೆದೆತ್ತಂ ರಸಮೆಚ್ಚು ಪಾಯೆ ಪಥಿಕರ್ ಪೊಕ್ಕೀಂಟುತುಂ ಕೈಯಬಾ
ಯೆಡೆಯೊ[5]ಳ್ಪೊಱಗೆ[5] ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ ೮೧

ಅವಿರಳಮಾದ ತುಂಗಕುಚಭಾರದೆ ತೋಳ್ಸೆ[6]ಳೆ[6]ದಿಟ್ಟ ತಕ್ಕಿನೊಳ್
ಕವಣೆಯ ಗುಂಡು ಪಾಯವು ಮೃಗಾವಳಿ ಪಾಯವು ಕೆಯ್ಗೆ ಪಾಮರೀ
ಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಿಂಚರಮೆಂದು ಬೆರ್ಚಿಪಾ
ಱವು ಗಿಳಿವಿಂಡು ಪಾಂಥರೆರ್ದೆ ಪವ್ವನೆ ಪಾಱುವುವಾಪ್ರದೇಶದೊಳ್ ೮೨

---

1 ಪೇ (ಅ). 2 ಗು (ಅ ಇ). 3 ದೆ (ಅ). 4 ಮಡದಿಱಿ (ಅ ಇ), ಬಿಡದಿೞ್ (ಉ ಎ). 5 ಳ್ಪಾಯ್ದು (ಅ ಉ), ಳ್ಪಾರು (ಇ), ಳ್ಸಾಱು (ಎ). 6 ಱೆ (ಅ ಇ).

ಮತ್ತಮಾ ಜನಪದಂ ಭೂಲಕ್ಷ್ಮಿಯುಪಹಾರವಿಸರದಂತೆ ಸುರಸವಾಗಿ ನಾನಾಖ್ಯಾನ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳ್ಗೆ ಮಾಣದೆ ನಡೆವ ನಾ[1]ಲ್ಬ[1]ಟ್ಟೆವೆಣ್ಣ ಕಣ್ಣಪೂರವನಲಂಕರಿಸಿದ ಪಾನೀಯಕಾಯಮಾನನಿಕಾಯಾಭ್ಯಂತರಾಳದಲ್ಲಿ

ಪಱಿಪಡೆ ಸೇದೆ ಪಿಂಗೆ ತೃಷೆ ತಣ್ಗಳಸಂಗಳನೆತ್ತಿ ನಿಂದು ನೀ
ರೆಱೆವ ಚಳಲ್ಲತಾಂಗಿಯರ ಕೊಂಕಿದ ತೋಳ ನೊದಲ್ಗೆ ತೀವಿ ಕಿ
ಕ್ಕಿಱಿದ ಕುಚಕ್ಕೆ ಕಣ್ಬರಿದು ಧಾರೆಗಳೋರಗೆ ಸೂಸೆ[2]ಮುಟ್ಟೆ[2] ಕೆ
ಯ್ಮಱೆದು ಬಯಲ್ಗೆ ಬಾಯ್ವಿಡುವರಧ್ವಗರಧ್ವತಟಪ್ರಪಾಳಿಯೊಳ್ ೮೩

ಕುಡಿನೀರೆತ್ತುವವೋಲ್ ಪ್ರಪಾಪ್ರಮದೆಯರ್ ಸತ್ರಂಗಳೊಳ್ ಸಂಮನಂ
ಬಡೆವೇಕಾಕಿನಿಯರ್ ಮನೋಜಸುಖದಾನಾಗಾರದೊಳ್ ಚಿತ್ತವಂ
ಪಿಡಿವೊಳ್ವೆಂಡಿರೊಡರ್ಚೆ ಮೆಚ್ಚನೊಲವಿಂದೊರ್ಗಾವುದಕ್ಕೊಯ್ಯನೆಂ
ಟಿಡೆಗೆಯ್ದಪ್ಪವು ಕಾರ್ಯಹಾನಿಪಥಿಕರ್ಗೂರೂರ ನಾ[3]ಲ್ಬ[3]ಟ್ಟೆಯೊಳ್ ೮೪

ಅಂತುಮಲ್ಲದೆಯುಂ

ನಿಗಡಂ ಸೊರ್ಕಾನೆಯೊಳ್ [4]ನಿ[4]ಗ್ರಹವೊದವಿದ ವಾದಂಗಳೊಳ್ದಂಡಮುತ್ಕೇ
ತುಗಳೊಳ್ ಕಾರ್ಶ್ಯಂ ವಧೂಮಧ್ಯದೊಳತಿಕಠಿಣತ್ವಂ ಕುಚದ್ವಂದ್ವದೊಳ್ ವ
ಕ್ರಗಮಂ ನಕ್ಷತ್ರದೊಳ್ ಭಂಗದ ಪರಿ ತೆರೆಯೊಳ್ ಕಂಟಕಂ ಹರ್ಷದೊಳ್ ಬ
[5]ಲ್ಬ[5]ಗೆ ಕಾವ್ಯಪ್ರೌಢರೊಳ್ ತಳ್ತಿಱಿವುದೆ[6]ವೆ[6]ಯೊಳುಂಟಲ್ಲಿ ಬೇಱೆಲ್ಲನಾಡೊಳ್ ೮೫

ಜನಪನ ಕಾದು ರಕ್ಷಿಸುವ ನೀತಿ ಜನಂಗಳ ಮೇಲ್ಮರಲ್ವ ವ
ರ್ಧನಸುಖಲೀಲೆಯೇಂ ಪಿರಿದೊ ಕುಂದದ ಕಾಲ್ಸಲೆ ಸಂದ ಸುಗ್ಗಿ ಬಂ
ದನುದಿನವಿರ್ಪ ದೀವಳಿಗೆ ನಾಟಿಕ್ಕೆ ಬಸಂತನ ಕಾಪು ಕಾಮದೇ
ವನ ರತಿಯಾಜ್ಞೆ ಚಂದ್ರನ ತಳಾರಿಕೆ ತೆಂಬಲರೊಂದು ಬೆಂಬಲಂ ೮೬

---

1 ೞ್ಬ (ಅ ಇ). ಟ್ಬ (ಉ). 2 ಮುಟ್ವೆ (ಅ), ಮಟ್ಟೆ (ಇ), ಮುಟ್ವೆ (ಉ). 3 ೞ್ಬ (ಅಇ), ಟ್ಬ (ಉ). 4 ವಿ (ಅಇ). 5 ಲ್ಬ (ಅಇ). 6 ಮೆ (ಅಇ).

ಕರಮೊಪ್ಪಂಬಡೆದಿರ್ಪುದಾ ವಿಷಯಲಕ್ಷ್ಮೀವಕ್ತ್ರಮೋ ವಕ್ತ್ರಪಂ
ಕರುಹಕ್ಕುನ್ನತನಾಸಿಕಾಮುಕುಳಮೋ ನಾಸಾವಿಳಾಸಕ್ಕೆ ಭಾ
ಸುರಲಲಾಟಮೋ ತಲ್ಲಲಾಟತಿಲಕಶ್ರೀಗಿಂಬುಗೊಟ್ಟಿರ್ದ ಶೇ
ಖರಮೋ ಶೇಖರಚೂಳಿಕಾಮಣಿಯೋ ಪೇೞಂಬಂತಯೋಧ್ಯಾಪುರಂ ೮೭

ಧವಳಾಗಾರತರತ್ತರಂಗಬ[1]ಹು[1]ಳಂ ಮತ್ತದ್ವಿಪಗ್ರಾಹಕೋ
ಟಿವಿಟಂಕಂ ವರಕಾಮಿನೀಪುರುಷರತ್ನಭ್ರಾಜಿತಂ ಭೂಮಿಭೃ
ದ್ಭುವನೋಪಾತ್ತಸು[2]ನಾಕವಾ[2]ಕಳಿತಕೋಟಾಚಕ್ರವೇದೀವಿಲಂ
ಘ್ಯವಿಳಾಮಧ್ಯದೊಳಿಟ್ಟ ಪಾಲ್ಗಡಲೆನಲ್ ಸಾಕೇತಮೇಂ ಸಾಲ್ವುದೋ ೮೮

ಆ ಪುರವರದ ಪರಿಸರಾಭಾಗಕ್ಕಾಪರಮಾಗಿ,

ಗರುಡಿಯೊಳಂಕದೋಜೆಗಳ ತೋಳ ಲಯಂಗಳ ಸೂಱೆ ವಾಹಳೀ
ತುರಗಖುರಪ್ರಹಾರಗತಿಯೊಳ್ ಜಗಜಟ್ಟಿಗಳಖ್ಖಡಂಗಳೊಳ್
ಮುರಳದೆ [3]ಪೋರ್ವ[3] ಶಕ್ತಿ ತ[4]ಲೆ[4]ಯೊಳ್ ನಡೆಪೋರ್ವ ಮದದ್ವಿಪಂಗಳೊಳ್
ಪುರುಡಿಸೆ ಸುತ್ತಲುಂ ಪೊಜವೊಟಿಲ್ ಮೆಱೆಗುಂ ವಿಜಯೋತ್ಸವಂಗಳಂ ೮೯

ಪರಪುಷ್ಟಧ್ವಾನದಿಂ ಪೆರ್ವಡಿಯಱುಲಿ ಭೃಂಗಾಂಗನಾಪುಂಜದಿಂ ಸೀ
ಗುರಿಗಳ್ ಮಂದಾನಿಳಂ ಸಂದಿಸಿ ಕೆದಱುವ ಪೊಂಬಾಳೆಯಿಂ ಚಾಮರ ಶ್ರೀ
ಣಿ ರಸಾಳೋದ್ಯತ್ಪ್ರಸೂನಸ್ತಬಕದೆ ಧವಳಚ್ಛತ್ರಮಾಗ[5]ಲ್ಪಿನೀತಾ[5]
ಪುರಬಾಹ್ಯೋದ್ಯಾನಮಂಗೋದ್ಭವನ ಸಕಲಸಾಮ್ರಾಜ್ಯದಂತಾಯ್ತುಪೂಜ್ಯಂ
೯೦

ಮತ್ತಂ ಚಿತ್ತಭವನ ಮೆಯ್ವ[6]ಣ್ಣ[6]ನುಣ್ಣಿಸಿ ತೋರ್ಪಂತೆ ಕರ್ಪುರ ಕಾಳಸೆಗೊಂಡ ತಮಾಳಮಾಳೆಗಳ ರತಿಯ ಮುಗುಳ್ನಗೆಯನಗೆವೊಯ್ದಂತೆ ನಗೆಗಳೊಳಗೆ ನನೆಕೊನೆವೋ[7]ದ[7] ಸಹಕಾರದಾರ[8]ವೆ[8]ಗಳ ವಸಂತವಲ್ಲಭನ ತೇಜದೋಜೆಯಂತೆ ಕೆಂದಳಿರಳಂಕಿದ ಕಂಕೆಲ್ಲಿಯ ಕುಸುಂಕುಱುಗಳ ಸಂಜೆಯ ಸೂೞ್ಗವಂದಚಂದ್ರಮನ ಸೊಂಪಿನಂತೆ ಚಂಪಕಮಾಗೆ ಪೂತ ಸಂಪಗೆಯ ಸಾಲ್ಗಳ ಶೃಂಗಾರ[9]ಸರಿ[9]ತ್ತರಂಗಾವಳಿಯಂತೆ ಪಸುರ್ಪುವಡೆದ ಪೂಗವನದಾಗಾರದ ಬಣ್ಣವಣ್ಣಿಗೆ ತಿಣ್ಣಮಾಗೆ ಪಂಚಶರಸಾರ್ವಭೌಮನ ಪಂಚರತ್ನದ ಸಂಚಯಕ್ಕೆ ಪಚ್ಚೆಸಾರದ ಕೇರಂ ಕಟ್ಟಿದಂತೆ ನಂದನಕ್ಕೆ ಬಾೞ್ವೇಲಿಯಾದ ಕೇದಗೆಯ ಬನದ ಬಳಸಿನೊಳಗೆ

---

1 ಹ (ಅ ಇ). 2 ನಾಕಪಾ (ಅ ಇ). 3 ಪಾರ್ವ (ಅ ಇ). 4 ಳೆ (ಅ), ಳಿ (ಇ). 5 ಲ್ಕಿನಿತ್ತಾ (ಅ). 6 ಣ್ಣಮಂ ನು (ಉ). 7 ಪ (ಅ ಇ). 8 ಮೆ (ಅ ಇ). 9 ರಸ (ಉ).

ಶಿವನರಿವೆಣ್ತ್ರನಂ ಹರಿಯ [1]ಪಾ[1]ದರವಬ್ಜಜನೊಲ್ದ ಲಜ್ಜೆ ಹೇ
ಟಿವೆ ನನೆವಿಲ್ಲ ಬಲ್ಲಹನ ಶೌರ್ಯಮನೆಂದನುರಾಗದಿಂದ[2]ಮೋ[2]
ದುವುದಲ್[3]ರಾ[3]ದ ಕೇದಗೆಯ ಕುತ್ತಿಸಳೋಲೆಯನೆತ್ತಿ ನಿಟ್ಟಿಸ
[4]ಳ್ಕ[4]ವಳಿಕೆಯಾಗೆ ಭೃಂಗವಿಟರಾಜಿ ಮನೋಜನ ವೀರವೃತ್ತಿಯಂ ೯೧

ಎಳಲತೆಯೆಂಬ ನಚ್ಚಣಿಯನಾಡಿಸಿ ತುಂಬಿಗಳೆಂಬ ಗಾಯಕಾ
ವಳಿಯನಲಂಪಿನಿಂ ತಗುಳೆ ಪಾಡಿಸಿ ಕೂಡೆ ಬಟಿಲ್ದು ನೋಟ್ಪ ಪೆ
ಣ್ಗಳ ಮು[5]ಗು[5]ಳ್ಗಣ್ಗಳಂ ಬಯಸಿ [6]ಬೇ[6]ಡಿಸಿ ರಾಜಕುಮಾರಲೀಲೆಯಂ
ತಳೆವುದು ತತ್ಪುರೋಪವನವೀಥಿಯೊಳಾಡುವ ಮಂದಮಾರುತಂ ೯೨

ಬಗೆಯಂ ಬಲ್ಸೆಱ[3]ಗೆಯ್ದು ಕಾದಲರ್ಗಲಂಪಂ ಬೀಱುಗುಂ ನಾಗವ
ಲ್ಲಿಗೆ ಕೈಕೊಟ್ಟೆಳಗೌಂಗು ಮಾಧವಿಯ ಸೋಂಕಿಂ ತಳ್ತ ಕಂಕೆಲ್ಲಿ ಮ
ಲ್ಲಿಗೆ ಬಂದಪ್ಪಿದ ಮಾವು ಮಾಳತಿಯ ಮೇಳಾಪಕ್ಕೆ ಪಕ್ಕಾದ ಸಂ
ಪಗೆ ಹೊಂಬಾಟೆ[3] ತುಱುಂಬಿದೀ[7]ಟಿ[3,7] ಬನದೊಳ್ ಪೆಣ್ದುಂಬಿ ನಿಂದಂಬುಜಂ ೯೩

ಅಳಿಮಾಲಾರುಚಿಯಂ ಪಳಂಚಲೆವ ರನ್ನೆಯ್ದಿಲ್ಗೊಳಂ ಹಂಸಮಂ
ಡಳಿ ತಾಱುಂಬಱಿಗೊಳ್ವ ತಾವರೆಗೊಳಂ ಕಾಮಂಗೆ ಪುಷ್ಪಾಸ್ತ್ರಮಂ
ಬಳಿವಾವಲ್ಗೊಳನಚ್ಚಗೆಂಪೆಸೆವ ಚೆನ್ನೆಯ್ದಿಲ್ಗೊಳಂ ಚಂದ್ರಮಂ
ಡಳಮಂ ಸೋಲಿಸುವಾಲಿನೀರ್ದಿಳಿಗೊಳಂ ರಮ್ಯಂ ಪುರೋದ್ಯಾನದೊಳ್ ೯೪

ಮಲೆ[8]ಯ[8]ಲರ್ಗಳ್ಕಿ ಬಳ್ಕಿ ಮಱಿದುಂಬಿಯ ಮಾಳೆಗೆ ಕಾಯ್ದು ಬಯ್ದು ಕೋ
ಗಿಲೆಗೆ ಕನಲ್ದೊನಲ್ದು ಗಿಳಿವಿಂಡಿನ ತೊಂ[9]ಡಿ[9]ಗಟಿಲ್ದೆಟಿಲ್ದು ತ
ಳ್ತಲರ್ದೆಳಮಾವು ಮಲ್ಲಿಗೆಗೆ ಕೋಳ್ಗು[10]ದಿಕೋ[10]ಳ್ಕುದಿಗೊಂಡು ಜೋಲ್ವರು
ತ್ಕಳಿಕೆಯಿನಾಮ್ರವಲ್ಲರಿಯೊಳೋಪವರಾ ಪುರನಂದನಂಗಳೊಳ್ ೯೫

ಪರಪುಷ್ಟಧ್ವಾನದೊಳ್ ಬಗ್ಗಳೆ ಪುರುಳಿಗಳೊಳ್ ಲಲ್ಲೆ ಭೃಂಗಾಂಗನಾಝುಂ
ಕರಣಪ್ರೇಂಕಾರದೊಳ್ಕಂಕಣಕಳರವಮಾಂದೋಳ ಚೀತ್ಕಾರದೊಳ್ ಸಿ‍
ತ್ಕರಣ ಪ್ರೊಯ್ಕೆಯ್ಗೆವಂದೋಪರರತದ ಪಿಸುಣ್ಪೇಟ್ದುವಾಕೀರ್ಣ[11]ಪರ್ಣಾ[11]
ಸ್ತರಣೀತಾಂಬೂಲ ಮಾಳಾಮೃಗಮದಲತಿಕಾನಂದನಂಗಳ್ ಬನಂಗಳ್ ೯೬

---

1 ಹಾ (ಅಇ) 2 ವೋ (ಅಇ) 3 ರೋ (ಇಉ)
4 ಳ್ಗ (ಅ) 5 ಗ (ಅ) 6 ವೇ (ಅಇ) 7 ಳೆ (ಅಇ)
8 ವೆ (ಉ) 9 ಡು (ಅಇ) 10 ರೋ (ಅಇ) 11 ಕರ್ಣಾ (ಉ)

ಅಣಿಯರಮಲರ್ದೆಸೆವಂತ
ರ್ವಣದ ಬಹಿರ್ವಣದ ಕಂಪು ಪೊಂಪುಟ[1]ವಿ[1]ಡೆ ಪ
ಟ್ಟಣಮಿರ್ಪುದು ಮದಿಲೊಳ್ತಿಂ
ತಿಣಿಯೆನೆ ಪರಿಮಳದ ಬಳೆತಮಂ ಕಟ್ಟಿದವೊಲ್ ೯೭

ಇದು ರತ್ನಾಕರಮಿಲ್ಲಿ ನೀರ್ವೊಗೆವ ಮೇಘವ್ಯೂಹಮಿಾತೋರ್ಪುದಿಂ
ತಿದೆ ಪಾಥೋನಿಧಿಯಿಲ್ಲಿ ವಜ್ರಮಯವೇದೀಚಕ್ರ[2]ಮ[2]ಂತಿರ್ಕೆ ಮ
ತ್ತಿದೆ ದುಗ್ಧಾಬ್ಧಿ ಕಲಂಕದಿಲ್ಲಿ ನೆಲಸಿತ್ತಿಂದ್ರಾದ್ರಿಯೆಂದಂದು ನೋ
ಡದರಾರ್ಮೆಚ್ಚದರಾಪುರಪ್ರಥಿತಖಾತೀವಪ್ರವಿಸ್ತಾರಮಂ ೯೮

ತೀರದಲಂಪಿಂ ಪರಿಖೆಯ
ತೀರದ ಕಣ್ದೆಱವಿಯೆನಿಪ ತಾವರೆಗಳಿಗಳ್
ಕೈರವದಿಂ ಪಾಯ್ವುವು ಪೋ
ಕೈರವದಿಂ ಮಱಸೆ ಮದನಕಾರ್ಮುಕರವ[3]ಮಂ[3] ೯೯

ಮುಗಿಲ ಮಣಿಮಂಟಪಂಗಳ್
ಗಗನದೊಳಿರೆ ನೆರೆಯಲೆಳ[4]ಸೆ[4] ಗಾಳಿಯ ಕೋ[5]ಲ್ಗಾ[5]
ಮುಗಿಲ ಪ[6]ರಿಪಜ[6]ಯೆ ನೆ[7]ಗೆ[7]ವುದು
ಮುಗಿಲಟ್ಟಣೆಯೊಳಗೆ ಖಚರದಂಪತಿನಿಚಯಂ ೧೦೦

ತೆತ್ತಿಸಿದಂತಿರೆ ಕೋಟೆಯ
ಕೊತ್ತಲದೊ[8]ಳ್[8] ಪರಿವ ತೇ[9]ರ್ಕೊ[9]ಡಂಗೆಡೆದೊಡೆ ಕ
ಯ್ಗುತ್ತಿ ಮರಲ್ದು ರಥಾಂಗಮೆ
ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ ೧೦೧

ಪ್ರಾಕಾರದ ಮಣಿಮಯ ವ
ಪ್ರಾಕಾರದ ಪಸುಳೆವಿಸಿಲ ಮುಸುಕದಿನಿರುಳಂ
ಕೋಕನದ ಮುಡುಗಳುಡುಗವು
ಕೋಕನದು[10]ಚ್ಚ[10]ರತಮ[11]ದರ[11]ಗೃಹಸರಸಿಗಳೊಳ್ ೧೦೨

---

1 ವ (ಅ) ಯೆ (ಇ) 2 ಮಿ (ಅಇ) 3 ಮುಂ (ಅಇಉ)
4 ಸಿ (ಅಇಉ) 5 ಳ್ಗಾ (ಅಇ) 6 ರಿಪರೆ (ಉ)
7 ಶೆ (ಅಇ) 8 ಳೆ (ಅಇ) 9 ರ್ಕ (ಉ) 10 ತ್ಪ (ಎ)
11 ವಱ (ಅಇ)

ಪುರವರದೊಳಗಣ ಮಂಡಳಿ
ಕರ ದಂಡಾಧಿಪರ ನೆಗಟ್ದಿ ಪರದರ ಸಾಮಂ
ತರ ಪಡೆದ ಪುಣ್ಯಪುಂಜದ
ಸಿರಿಗಳಿವೆನಿಸುವುವು ನೆಗೆದ ಜಿನಭವನಂಗಳ್ ೧೦೩

ಹಿಮರೋಚಿಃ ಕುಂದಚಂದ್ರಾತಪವಿಪುಳವಿಳಾಸೋಪಹಾಸಿಪ್ರಭಾಸೌ
ಧಮಯಂ ಶ್ರೀಮಜ್ಜಿನೇಂದ್ರಾವಸಥಮೆಸೆವುವಲ್ಲಲ್ಲಿ ತದ್ಧೂಮವೇಳಾ
ಕ್ರಮದೊಳ್ ಮಂದಾಕಿನೀಮತ್ಸರ ಮದವತಿಕಾಳಿಂದಿ ಮಂದೈಸಿ ಬಿದ್ದಂ
ಹಿಮವತ್ಕೂಟಾಗ್ರದಿಂ ಪಾಯ್ದಪುದೆನಿಪ[1]ಗರೂದ್ಧಾ[1]ಮಧೂಮಂಗಳಿಂದಂ ೧೦೪

ಪರಿಧೂತಕೇತುಭೀತಂ
ಕುರಂಗನಪಹರಿಸೆ ಮುದಮನೆಯ್ದುವನರ್ಹ
ತ್ಪರಮೇಶ್ವರಮಣಿಭವನೋ
ಪರಿಲಂಘನಪಾಪಲೋಪದಿಂದಂ ಚಂದ್ರಂ ೧೦೫

ವ॥ ಅದಲ್ಲದೆಯುಮಲ್ಲಿ ತೊಂತಿಟ್ಟಂತೆ ನಿರಂತರಂ ಸುೞಿವ ನಾನಾದೇಶಪ್ರಸಿದ್ಧ ರಾಜಪುತ್ರ ವಣಿಗ್ವಲ್ಲಭ ವಾರನಾರೀ ಭಾರತಿಕನಿಕರದ ಮಣಿಭೂಷಣಮಂಜರೀ[2]ಶಿ[2]ಂಜಾನರಂಜಿತ ನಿಘರ್ಷಣಪ್ರವರ್ಷಿತ ಪರಾಗರಾಗಭೂತ ಮಂದಮಂದಮಾರುತದೋಳಿಯಿಂ ಪರಿವ ಕುರುಳ ಕತ್ತುರಿಯ ಕೆಯ್ಯ ಕಪ್ಪುರದ ಮೆಯ್ಯ ಕುಂಕುಮದ ಮುಡಿದ ಕೇದಗೆಯ ಧೂಳಿಜಾಳದ ಸುಟ್ಟುರೆಯೊಳ್ ಸುೞಿದು ನೆಗೆವ ಪರಿಮಳಪ್ರವಾಹಸಮೂಹದಿಂ ರಾಜವೀಧಿ ವಿಪಣಿ ಮಾರ್ಗಗಣಿಕಾವಾಟಸರಣಿಸಂತಾನಂ ವಸಂತವಲ್ಲಭನ [3]ಹರವರಿ[3]ಯಂತಿರ್ಪುದು ಮತ್ತಮುಚ್ಚಂಡಮಾದ ಭಂಡಣಂಗಳೊಳ್ ಗಂಡಗರ್ವಮನುೞಿದುದಂ[4]ಡೋ[4]ಪನತರಾದ ಮಂಡಳಿಕರೊಳ್ ದಂಡುೞಿಗೊಂಡ ಮದವೇತಂಡಗಂಡಭಿತ್ತಿಗಳ ಪುಷ್ಕರಷಂಡದ ದಾನಧಾರಾನೀಕ[5]ಶೀ[5]ಕರಾಸಾರದೊಳಂ ನೆಲೆಯ ಮಾಡಂಗಳೊಳ್ ಮಲೆದು ಮೆಟ್ಟಿಮೆಲ್ಲನೆಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಗಳ ಕಾಂತಿಕೌಮುದಿಗಳಿಂ ಇಂದುಕಾಂತದ[6]ಮತ್ತವಾರಣದ ಮರಕತತೋರಣದ ಕುಸುರಿವೆಸದೊಳೊಸರ್ತು ಸುರಿದು[7]ಪಂ[7]ಜರಿಸೆ ನೆಗೆವ ಮಂಜಿನ ಮುಸುಕದೊಳಸಮಶರಧಾರಣೀ[8]ಶ[8]ನ ಧಾರಾಯಂತ್ರಧಾರೆಯಂತಿರ್ಪುದು. ಮತ್ತಮತ್ತಲರಮನೆಯ ಪಿರಿಯ ಸಿರಿಯ ಕರುಮಾಡದ ಬಳ್ಳಿಮಾಡದ ಗಾಡಿಮೆಱೆಯೆ ಸೋಮಸೂರ್ಯವೀಥೀಸನಾಥಮಾಗಿ ಮೇಗೆಮೇಗೆಸೆವ ಸಪ್ತ[8]ಭೂಮಿಕಾ[8]

1 ಗರುದಾ (ಅಇ) 2 ಸಿ (ಅಇ) 3 ಹರಿಹರಿ (ಇ)
4 ಡಾ (ಅಇ) 5 ಸೀ (ಅಇ) 6 ಪಿಂ (ಉ) 7 ಪ (ಅಇ)
8 ಭೂಮಿ (ಅಇ)

ಸಾಮಾನ್ಯಸೌಧಸಾರಾಧಾರದ ಕೇರಿಗಳ ಮಾಣಿಕದ ಕಳಸದ ಮುತ್ತಿನ ಲಂಬಣದ ಪಚ್ಚೆಯ ತೋರಣದ ಪವಳದ ಕಂಬದ ಇಂಬಿನೊಳ್ ನಿಗುಂಬಿಸಿ ನಿಂದು ಪಾಡುವ ನೋಡುವ ಕೂಡುವ ಭಾವಸಮುಚ್ಚಯದ ಸಜೀವವಾದ ವಿಚಿತ್ರಪುತ್ರಿಕೆಗಳ ಬಿತ್ತರಂಗಳಿಂ ಕಣ್ಗಳ ಮನಂಗಳ ಮಂಗಳಾಚರಣಮಿರ್ಪಂತಿರ್ಪುದಂತುಮಲ್ಲದೆಯುಂ

ಪುರದೊಳ್ ಗಂಧವಣಂಗಳೊಳ್ ಶಶವಿಷಾಣದ್ವೀಪಿನೀಸ್ತ್ರನ್ಯವ
ಸ್ತುರಸಾದ್ಯಂಗಳೊಳಾವುದಿಲ್ಲ ವಲಮುಂಬಾ ಕೇರಿಯೊಳ್ ಲೋಹಸಿ
ದ್ಧರಸಂ ದೇಹರಸಾಯನಂ ಮೃತಪುನಸ್ಸಂಜೀವನಂ ವಿಕ್ರಿಯಾ
ಪರದಿವ್ಯೌಷಧಿ ದೇವಲೋಕದಮೃತಂ ಪಾತಾಳಭೇದ್ಯಂ ಜನಂ ೧೦೬

ವ॥ ಮತ್ತಂ ಸುರಭಿಶರನ ಕುಸುಮಶರಶರಾಸನಕ್ಕಂ ಸುರಭಿಸಮಯಕ್ಕಂ ಚಂದನ ಸುಗಂಧಿ ಗಂಧವಹಂಗಳ ಸೌರಭ್ಯಮೊಱಂಗಟ್ಟೆ ಗೆಲ್ವ ರಾಜವಿಟವಿಲಾಸಿನೀಜನ ಮನೋನಂದನಂಗಳಂ [1]ಪ[1]ರಿಮಳದ ಪಱಪೊನಲ್ಗಳಿನಂಕುರಿತ ಪಲ್ಲವಿತಂಗಳಂ ಮಾಳ್ಪ ಗಂಧಾಪಣಂಗಳೊಳಗೆ

ಪುರುಡಿಪುವೆಮ್ಮ ಲೋಲನಯನಾಳಿಗೆ ಕರ್ಪಿನೊಳೆಮ್ಮ ವಕ್ತ್ರಪಂ
ಕರುಹದರಲ್ಗೆ ಕಂಪಿನೊಳಿದೆಮ್ಮಲಕಾವಳಿಗಳ್ಗೆ ನಾಯಕ
ಸ್ಫುರಿತದಿನೆಂದು ತಂದು ಶಶಿಕಾಂತದ ಸಣ್ಣಿಗೆಯೊಳ್ಪೊರಳ್ಚಿ ಪೊ
ಯ್ದರೆವಳರಂತೆ ಕತ್ತುರಿಯ ಘಟ್ಟೆಯನಲ್ಲಿಯ ಘಟ್ಟವಳ್ತಿಯರ್ ೧೦೭

ವ॥ ಅದಲ್ಲದೆಯುಂ

ಪರಿಮಳವಿಭ್ರಮದ್ಭ್ರಮರಮಾಲೆಗೆ ತಮ್ಮ ಕಟಾಕ್ಷಮಾಲೆಗಳ್
ಪುರುಡಿಸೆ ಮಾಲೆಗೊಳ್ವ ನೆವದಿಂ ವಿಟಮಾ[2]ಳಿಕೆ[2] ಮಾಲೆಯೆತ್ತುವೀ
[3]ಶಿ[3]ರಿಸದ ಮಾಲೆಗಳ್ಗೆ ಬೆಲೆಯೇನೆನೆ ಕುಟ್ಮಲಕುಂದಹಾಸದಿಂ
ಪರಪುವರಚ್ಚಮಲ್ಲಿಗೆಯ ಮಾಲೆಯನಲ್ಲಿಯ ಮಾಲೆಗಾರ್ತಿಯರ್ ೧೦೮

ಮನಸಿಜಮಂತ್ರದೇವತೆಯರಿರ್ಪ ವಿಮಾನಮನಂಗರಾಗಮೋ
ಹನಶರಜಾಲಮಿರ್ಪ ಜಯನಾ[4]ಲಯಮಂಗಜ[4]ರಾಜರಾಜ್ಯಗೋ
ಮಿನಿ ನಲವಿಂದಲಿರ್ಪ ಕರುಮಾಡಮಿದೆಂಬಿ[5]ವಾರ[5]ಕಣ್ಣುಮಂ
ಮನಮುಮನೇಂ ಕವರ್ತೆಗೊಳಲಾರ್ತೆಸೆದಿರ್ಪುವೊ ಸೂಳೆಗೇರಿಗಳ್ ೧೦೯

---

1 ಬ (ಅಇ) 2 ಲಿಗೆ (ಉ) 3 ಸ (ಅಇ)
4 ಳಮನಂಗಜ (ಅಇಎ) 5 ಮಾರ (ಉ)

ಶರದದ ಗೊಟ್ಟಿಗಾಯಳರ ಕೇಳದ ಕೇರಿಯೊಳಿಂದುಕಾಂತ ಮಂ
ದಿರದೊಳಗಿರ್ದು ತಮ್ಮ ತರಳೇಕ್ಷಣಚಂದ್ರಿಕೆಯಿಂ ತೆರಳ್ವ ಸೀ
ಕರಧ್ವನಿಕರಂಗಳೊಳ್ ಪಸದನಂ ಮುಸುಳುತ್ತಿರೆ ಕಾಯ್ದು ತದ್ಗೃಹಾಂ
ತರಮುನಗಲ್ಬ ನೀಲಮಣಿಮಂಡನಮಂ ಪುಗುವರ್ ಲತಾಂಗಿಯರ್ ೧೧೦

ಮಾಡದ ಮೇಲ್ನೆಲೆಯೊಳಗೆಡೆ
ಯಾಡುವ ಲಾವಣ್ಯವತಿಯರಂಗಪ್ರಭೆ ಕೈ
ನೀಡಿ ನೆ[1]ಗ[1]ವುವುದು ತಮ್ಮಂ
ನೋಡಿ ಬಟಲ್ವಾಸೆಕಾಱರಾಲೋಕನಮಂ ೧೧೧

ಸುರರಾಜಂ ಕಣ್ಣಮೆಯ್ಯಿಂ ನನೆಗಣೆಗೊಡಲಾದಂ ಜಸಂ ಛಾಯೆಯೊಳ್ಮೆ
ಯ್ಗರೆದಂ ರತ್ನಾಕರೇಂದ್ರಂ ಕಡಲೊಳಗುಱಿದಂ ಭಿಕ್ಷುವಂ ಪೊರ್ದಿ ಯಕ್ಷಂ
ಮರುಳಾದಂ ಮಿಕ್ಕವರ್ಗೊಂಟಿನೊಳೆ ಮುದಿಡಿದರ್ ಚಿತ್ರಮಂ ವಿತ್ರಮಂ [2]ಕ
ವ್ವರೆ[2]ಗೊಂಡಚ್ಚೈಸಿದಾಸೂಳೆಯರುಱಿದೊಡೆ ಸಂತಾಪದಿಂ [3]ದೈನ್ಯ[3]ದಿಂದಂ ೧೧೨

ಮಕರಾಂಕವಾಸ ಭೋಗಪ್ರಹತಪಣವ ಸಂವಾದಿ ಸೌಭಾಗ್ಯಘಂಟಾ
ನಿಕುರುಂಬಾಂದೋಳ ಲೀಲಾಯುವತಿ ಕಬರಿಕಸ್ತೂರಿಕಾರೇಣು ಸಂವಾ
ಹಕಚಂಚತ್ಕೀರಸಾರೀ ಪರಿತಗಳಿತಗಾಳಿಪ್ರದಂ ಮಾಟಕೂಟಾಂ
ತಿಕಹೇಳೋದ್ಯಾನಪಾಳಂ ಸುಳಿವುದು ಕಣಿಕಾವೇಶ್ಮಚಾರಂ ಸಮೀರಂ ೧೧೩

ವ|| ಮತ್ತಮಾನಗರಮೃಗಲೋಚನೆಯ ಮಧ್ಯೋಪಾಂತಮನಲಂಕರಿಸಿದ ಕಾಂಚೀಕಲಾಪದಂತೆ ರೂಪುವಡೆದ ರಣಮಂಡಲದ ರಾಜರಾಜಪ್ರಾಸಾದಶಿಖರಮೇ ಶಿಖರಮೆನಿಸಿದುದಯಶಿಲೋಚ್ಚಯಂ ಪ್ರ[4]ಸ್ಥ[4]ಪ್ರಘಣಪ್ರಾಂತಪ್ರದೇಶ ಲಕ್ಷ್ಮೀದ್ವಾರ ಮಾಟಕೂಟಚ್ಛಲದಿನುದಯಂಗೆಯ್ವ ಹರಿಣಾಂಕಬಿಂಬದ ಕೆಲಂಬಿಡಿದು ನಿಮಿರ್ವ ಚಂದ್ರಿಕಾಡಂಬರದಂತೆ ವಿಲಂಬಿಸಿ ನಿಂದ ರಾಜತಪ್ರಾಕಾರ ವಿಸ್ತಾರದೊಳಗೆ

ಬರೆಯಲ್ಬಾರದು ಬಚ್ಚಿಸಲ್ಕರಿದು ಮಾಡಲ್ಕೂಡದೊಡ್ಡೈಸದ
ಚ್ಚರಿ ಭೂಮಂಡಳಮಧ್ಯದಿಂದೊಡೆದು ಮೂಡಿತ್ತೆಂಬಿನಂ ಚೆಲ್ವನಾ
ಕರುಮಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಿ ಬಂ
ಧುರಸಂಧಿಪ್ರವಿಭಾಸಿ ನಾಟಕದ ಪಾಂಗಿಂ ಚೂಳಿಕಾಲಾಲಿತಂ ೧೧೪

---

1 ಗೆ (ಉ) 2 ಪಬಬರಿ (ಅಇಉ) 3 ಧೈರ್ಯ (ಇ)
4 ಸ್ತ (ಆಇಉ)

ಪ್ರಮುಖದ್ವಾರಪಿನದ್ಧತೋರಣಹರಿದ್ರತ್ನಪ್ರಭಾಲಕ್ಷ್ಮಿ ಸೌ
ಧಮುಯೋದಂಚಿತವಾದ ಚುಂಚುಲೊವೆಯೊಳ್ ಬಾಲಾತಪಾಸಕ್ತಸು
ಪ್ತಮುರಾಳಂಗಳನಿಂದ್ರಚಾಪರುಚಿಯಿಂ ತಳ್ಪೊಯ್ದು ತತ್ಕೇಕಿ ನೀ
ಭ್ರಮೆಯಂ ಮಾಡಿ ಶಿಖಂಡಿಮಂಡಳಿಗೆ ತರ್ಕೈಂ ತಾಂಡವೋತ್ಸಾಹಮಂ ೧೧೫

ಬಳಸಿದ ನೀಲದ ಮುತ್ತಿನ
ತೊಳಗುವ ಮಾಣಿಕದ ಬೆರಕೆವೆಳಗಿನ ಬೆಳ್[1]ಗಿಂ[1]
ತಳತಳಿಸಿ ಬಿಸಿಲ ಬೆಳ್ದಿಂ
ಗಳ ಕಾಳದ ಕಣಿವೊಲಿರ್ಪುದಾ ಕರುಮಾಡಂ ೧೧೬

ಕರುಮಾಡಕ್ಕೆ ಸರೋಜರಾಗರುಚಿಯಿಂ ಕಾಶ್ಮೀರಮಂ ನೀಡುವಂ
ತಿರೆ ಮುಕ್ತಾಫಲಲಂಬ[2]ಣ[2]ಪ್ರಚುರಸಾಂದ್ರಜ್ಯೋತ್ಸ್ನೆಯಿಂ ನೋಡುವಂ
ತಿರೆ ಸುತ್ತಿರ್ದ ವಿಳಾಸದಿಂದಮೆಸೆದತ್ತಾಲಿಂಗನಂ ಮಾಡುವಂ
ತಿರೆ ಶುದ್ಧಾಂತನಿತಂಬಿನೀಮಣಿಮಯಪ್ರಾಸಾದವಾಸೋತ್ಕರಂ ೧೧೭

ವ|| ಆ ರಾಜಗೇಹಾಜಿರದ ಸೀಯದರದ ಕಂಟಿಯ ಬಾರದಂತರಾಳದಲ್ಲಿ

ಗಿರಿಗಳ ರೂಪದಿಂ ಕೆಲವು ಕರ್ಪುಗಳಿರ್ದಪುವೆಂದು ಕಾಯ್ದಿಳೀ
ಶ್ವರನ ವಿಶಾಲನಿರ್ಮಲಯಶಃ ಪ್ರಸರಂ ಪಿಡಿತಂದು ನೀಳಭೂ
ಧರನಿಕುರುಂಬಮಂ ಸೆಱೆಯೊಳಿಟ್ಟುದು ತಾನೆನೆ ದಾನಪೂರನಿ
[3]ರ್ಝ[3]ರಕಟಸಾನುಗಳ್ [4]ಸೆಱೆಯ[4] ಸಾಲೆಯೊಳಿರ್ಪುವು ಪಟ್ಟದಾನೆಗಳ್ ೧೧೮

ಸಿಂಗದ ಜಂಗುಳಿ ಸರಬದ
ಸಂಗಡಮಾನೃಪನ ತೇಜಮಂ ಮಱೆವೊಕ್ಕಂ
ತೇಂ ಗಡಣಿಸಿ [5]ಮೆಱೆವುವೋ[5] ಚೆಂ
ಬೊಂಗಳ ಮುಂ[6]ದು[6]ರದ ತೇಜವಾಜಿ[7]ಸಮಾಜಂ[7] ೧೧೯

ವ|| ಅಂತನಂತವಿಸ್ತಾರಸಾಮರ್ಥ್ಯಮಂ ತೆಳೆದುದಂತುಮಲ್ಲದೆ

---

1 ಗಂ (ಅಇ) 2 ನ (ಅಇಉ) 3 ರ್ಜ (ಅಇ)
4 ಸೊದೆಯ (ಅ ಇ) ಸೊತೆಯ (ಎ) 5 ಮೆರೆವುವಾ (ಇ) 6 ದಿ (ಅಇ)
7 ಸಮೂಹಂ (ಉ)

ಪುರುತೀರ್ಥೇಶ್ವರನಾದಿದೇವನುದಯಂ ಗೆಯ್ವಂದು ಮುನ್ನಂ ಪುರಂ
ದರನತ್ಯುತ್ಸವದಿಂದೆ ನಿರ್ಮಿಸಿದ ಸಾಕೇತಂ ಜಗತ್ಖ್ಯಾತಮು
ಚ್ಚರಿಯೆಂದೊಚ್ಚತಮಾಡಿ ಮಾಣ್ಬೆನಜಃಯೆಂ ಮತ್ತಾಪುರಂ ಚೆಲ್ವ[1]ದಾ[1]
ಪುರಮಿಂಬಾಪುರಮೊಳ್ಳಿತಾಪುರಮುದಂತಿಂತೆಂಬ ಬೇಳಂಬಮಂ ೧೨೦

ಆದನಾಳ್ವಂ ನಿಜಬಾಹುರಾಹುಕಬಳೀಭೂತಾರಿಸಂತಾನನಂ
ಘ್ರಿದಳತ್ಪಂಕಜರೇಣುಶೋಣಿತಶಿರೋಭೂಭೃತ್ಸಮಾದಾನನಾ
ಸ್ಪದಸಂಭಾವಿತಸತ್ಯಶೌಚಗುಣರತ್ನಾಂಭೋನಿದಾನಂ ಧರಾ
ಸುದತೀಹೃತ್ಪತಿ ಸಿಂಹಸೇನನನಘಂ ಸಾಹಿತ್ಯರತ್ನಾಕರಂ ೧೨೧

## ಗದ್ಯ

ಇದು ಪರಮಜಿನಸಮಯವನವಸಂತಸಂತಾನಾರಾಮ ರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸ
ನ್ನಾಂತಃಕರಣ ಕವಿಚಕ್ರವರ್ತಿಬಿರುದ ಕವಿಭಾಳ
ಲೋಚನ ಜನಾರ್ದನದೇವ ವಿರಚಿತಮಪ್ಪ
ಅನಂತನಾಥಪುರಾಣದೊಳ್
ಪೀಠಿಕಾಪ್ರಕರಣವರ್ಣನಂ
ಪ್ರಥಮಾಶ್ವಾಸಂ

---

1 ನಾ (ಅಇಎ)

# ದ್ವಿತೀಯಾಶ್ವಾಸಂ

ಶ್ರೀವರಸನಿಕ್ವಾಕುಕುಳೇಂ
ದೀವರಪೀಯೂಷಭಾನು ಸಾಹಿತ್ಯನಟೀ
ಭಾವಕಶೈಲೂಷಂ ಜಗ
ತೀವಿದಿತಯಶಂ ವಿನೇಯಜನಮುಖತಿಲಕಂ ೧

ಸಿರಿಯ ಘನಸ್ತನಂ ತುಱುದಗಲ್ದುರಮುರ್ವರೆ ಪರ್ವಿ ಮೆಟ್ಟಿ ನಿಂ
ದಿರೆ ನಿಡಿದಾದ ಬಾಹುಬಳಮುನ್ಮದಸಿಂಧುರಕಂಧರಕ್ಕೆ ಬ
ಜ್ಜರದವುಳ್ಗಂಬಮಾದ ತೊಡೆ ನೀಳ್ದು ಬೆಳಂತಿಗೆ ಬೆಳ್ಪನಾಳ್ದ ಪಂ
ಕುರುಹಮನಾಳಿಗೊಳ್ವ ನಗೆಗಣ್ ಜಗದೊಳ್ಮೆಱೆಗುಂ ನೃಪೇಂದ್ರನಾ ೨

ಮನಸಿಜಕಲ್ಪಲತಾನಂ
ದನವೆನೆ ಬಿಂಕಕ್ಕೆ ಕೊಂಕಿದಬಳಾಜನಮಂ
ನನೆಕೊನೆವೋಗಿಸುತಿರ್ಪುದು
ಮನುಜಮನೋಭವದ್ವಿಲಾಸವಸಂತಂ ೩

ಚೆದಱೆ ಮನಂ [1]ಕಲಂಕೆ[1] ತನು ಬಾಡೆ ಮೊಗಂ ಸುಱುದೋಡೆ ಕಣ್ಣನೀರ್
[2]ಬೆದೆಬೆ[2]ದೆ ಬೆಂದು ತಾವೆ ತನುಗೇನೆರವಪ್ಪರೊ ಚಿತ್ತ್ರಜಂಗೆ ಜಾ
ಱ್ಮೊದಲೆನಿಪಟ್ಟಿತ್ರಕಾರ್ತಿಯಟಿಲ್ದು ನೃಪಾಲಮನೋಜನಿಂತು ನೋ
ಡಿದ ಕಡೆಗಣ್ಣ ಕಾಂತಿಲತಿಕಾಸುಮನಶ್ವರಮೋಹಪಾಶದೊಳ್ ೪

ಸ್ಮರಪಾಶಪ್ರೇರಿತಂ ಗೋರಿಯ ಹರಿಣಿಯವೊಲ್ ಸ್ಥಾನಮಂ ಪೊಕ್ಕು ತತ್ಕೇ
ಕರರೋಚಿರ್ವಾರಿಯಿಂ ತದ್ದರಹಸಿತವಚಶ್ಚಂದನಾಸೇಕದಿಂ ತ
ತ್ಪರಿಹಾಸಸ್ಪರ್ಶಸೌಖ್ಯಾಮೃತದಿನೊದವೆ ಶೀತೋಪಚಾರಂ ಪ್ರವಾಲಾ
ಧರೆಯರ್ ಕಣ್ಬೇಟದೊಳ್ ಕೋಟಲೆಗೊಳೆ ಮೆಱೆಗುಂ [3]ಭೂಪ[3]ನಾಶ್ಚರ್ಯರೂಪಂ ೫

ನೆರೆ[4]ವ[4]ಲ್ಲೀವಿಱುವಲ್ಲಿಗೆ [5]ಹೊಱಗದೇಕೆಂದಾ[5] ತ್ರಿಲೋಕೀಧುರಂ
ಧರನಾಗೋತ್ರಮಹೀಧರದ್ರಢಿಮನಾಕೂರ್ಮೋನ್ನತಾಂಸಂ ದಿಶಾ
ಕರಿಹಸ್ತಾಯತಮಾಂಸಲಂ ಭುಜಗರಾಜದ್ರಾಘಿಮಂ ವಿಶ್ವಭೂ
ಭರಮಂ ತಾಳ್ದಿದುದೊಂದೆ ದಕ್ಷಿಣಭುಜಾದಂಡಂ ಧರಾಧೀಶನಾ ೬

---

1 ಕಲಂಕಿ (ಇ) 2 ವೆದೆವೆ (ಎ) 3 ರೂಪ (ಇಉ)
4 ವಿ (ಅ) ಮಿ (ಇ) 5 ಹೆಱಗದೇಂ ಕೇಳಾ (ಅಇ)

ಚಪಳವಿಶಾಳಲೋಚನೆ ಜಯಾಂಗನೆ ಧಾರೆಯೊಳಿರ್ದು ನೋಡಿ ಮು
ನ್ನಿಪಳೆನೆ ತೀಕ್ಷ್ಣಖಡ್ಗಭಿದುರಾಭದುರೀಕ್ಷಣದತ್ತಚಿತ್ತನಾ
ನೃಪನ ಕೃಪಾಣಪಟ್ಟಿಕೆಯನೋಲಗಿಪಂ ವಿಕರಾಳಿಕಾಳಿಕಾ
ಲಪನೆ ವಿಚಂಡಿ ಚಂಡಿವೆರಸಂತಕನುಜ್ಜ್ವಲಕಾಂತಿದಂತಕಂ ೭

ಯಮುದಂ[1]ತಾ[1]ಶನಿಪಾತದೊಂದು ಸವಿಯಂ ಶ್ರೀಸಿಂಹಸೇನಪ್ರತಾ
ಪಮನುಗ್ರಾಜಿಯೊಳುಂಡು ಕಂಡು ಬಱಿಯಂ ಪ್ರಾಣೈಕಮಾತ್ರಪ್ರಸಾ
ದಮಹಾಲಾಭದಿನಾತನಾಜ್ಞೆ ತಿಲಕಂ ತತ್ಕೀರ್ತಿ ಪೂಮಾಲೆ ತೇ
ಜಮೆ ಚೂಡಾಮಣಿಯಾಗೆ ಬಾಬ್ವಿರಿಳೆಯೊಳ್ ವೀರಾರಿಭೂಪಾಲಕರ್ ೮

ಮದಗಜ ಪೊರಜೆ ಪೊಯ್ದೇ
ಟ್ವಿ ದಡ್ಡಮಾರ್ಗದ ಕಣಂಗಳಂತಿ[2]ಗ್ಗ[2]ಣ್ಣೊಳ್
ಪದನತನೃಪರೀಕ್ಷಿಸೆ ನೃಪ
ನೊದೆದೇಟಿಂದೆತ್ತಿ ತಲೆಯ[3]ನಂಟಿಸದೇಟ್ವರ್[3] ೯

ತನಗೆ ಶುಭಮೆಂದ ವಂದಿಯ
ಮನೆಯಂಗಣದೊಳಗೆ ಪಣ್ತು ಪರ್ವಿದ ಮಂದಾ
ರನಮೇರುಪಾರಿಜಾತದ
ಬನದೊಳ್ಸಿರಿ ಮೆಱೆವಳಲ್ತೆ ವನಕೇಳಿಗಳಂ ೧೦

ಬಿದಿ ಕೊಟ್ಟ ಶಾಸನಂ ಸುಕೃ
ತದ ರಾಶಿಗೆ ಬರೆದ ಲಚ್ಚಣಂ ಸಂಸೃತಿ ಮೋ
ಹದ ಸಿದ್ಧಾಂತಂ ತಾನೆಂ
ಬುದು ಭೂಪನಮೋಘವಾಕ್ಯಮಂ ಭುವನಜನಂ ೧೧

ವ|| ಆ ನೃಪಾಲಮೌಲಿಮಾಣಿಕ್ಯಂ ಪದವಾಕ್ಯಪ್ರಮೇಯನ್ಯಾಯ ರಾಜನೀತಿ ಭರತ ಸುರತಾದಿ ಸಮಸ್ತಶಾಸ್ತ್ರಪಾರಾವಾರಪಾರದೃಶ್ವನುಂ ನಿಸರ್ಗಸಮಗ್ರ ರಿಪುಷಡ್ವರ್ಗ ಜಲಧರಪಟಲಿಕಾಮಾತರಿಶ್ವನುಂ ಚತುಃಪ್ರಕಾರ ಶಸ್ತ್ರವಿದ್ಯಾಧಿದೇವತಾಯೌವತನಿತ್ಯನಿಷೇವ್ಯಮಾಣ ವೀರವಿಜಯಲಕ್ಷ್ಮೀಲಕ್ಷಿತಕೇಯೂರ ಮಂಡಿತ ಭೂರಿಭುಜದಂಡನುಂ ವೈರಿವೀರಧಾರಿಣೀಧವಜೀವಗ್ರಾಹಂ ಗ್ರಹಣಸಮಾಗೃಹೀತ ಸಪ್ತಾಂಗಷಂಡನುಂ ಸಿಂಹಪೀಠಪರಿಸರ ಧರಾಲಿಂಗಿತ ಸರ್ವಾಂಗೀಣಪ್ರಣತ ಪ್ರಾಣದಾನ ಪ್ರಾರ್ಥನಾ ಪಾರ್ಥಿವ ಚೂಡಾಪೀಡ

---

1 ಡಾ (ಉ) 2 ಳ್ಗ (ಎ) 3 ನಂಟಂ ಪೆರಳ್ವರ್ (ಇಉಎ)

ಮಣಿಗಣಮರೀಚಿಪರಿಧಿಪರೀತಚರಣನಖಚಂದ್ರಮಂಡಲನುಂ [1]ಸಾ[1]ಮ್ರಾಜ್ಯ ಪ್ರಾಜ್ಯ ರಾಜ್ಯಾನುಭೋಗ ವಿಭವವಿಲಾಸೋಪಹಾಸಿತಾಖಂಡಲನುಂ ಅಖಿಲದಿಶಾನಿತಂಬಿನೀ ಕದಂಬಕುಚಕಲಶಮಲಯರುಹಕಂಠಕದಳಹಾರಶಬರಿಕಾಭಾರಮಲ್ಲೀಫುಲ್ಲ ವಿಲಾಸ ಭಾಸುರವಿಜಯಯಶಃ ಪ್ರಸರಕೌಮುದೀವಿಭ್ರಮ ಶಾರದಾಂಬರನುಂ ರಾಷ್ಟ್ರಕಂಟಕನಿಷ್ಟ ಪ್ತಮಸ್ತಕ ಹ[2]ಸ್ತ[2]ವರ್ತಿಕಾದೀಪ್ತೀಭೂತತೇಜಃ ಪ್ರತಾಪಾಡಂಬರನುಂ ಸತ್ಯತ್ಯಾಗಪರಾ ಕ್ರಮ ಪರಾರ್ಧ್ಯಮಣಿರಾಜಿತ ರಾಜರತ್ನಾಕರನುಂ ಇಕ್ಷ್ವಾಕುವಂಶ ಕುಶೇಶಯಾಕರ ಭೂಲೋಕದಿವಾಕರನುಮೆಂಬ ನೆಗೞ್ತೆಗಂ ಪೊಗೞ್ತೆಗತ್ತಳಗಮಾದಂ

ಆ ನೃಪಮಕರಧ್ವಜನ ಮ
ನೋನಯನಮರಾಳ ಮಧುಪಕೇಳಿಗೆ ಸರಸೀ
ಜಾನನೆ ಕೈರವಲೋಚನೆ
ತಾನೆ ಜಯಶ್ಯಾಮೆ ಸರಸಿಜಾಕರಮಾದಳ್ ೧೨

ರಮಣೀಯೋಜ್ಜ್ವಲಸಾರವಸ್ತುಚಯದೊಳ್ ಸೌಂದರ್ಯ ಸೌಭಾಗ್ಯ ಭಾ
ಗ್ಯಮನುತ್ಪಾದಿಸಿ ಮುಟ್ಟೆ ಮಾಡೆ ಸುಕುಮಾರತ್ವಂ ತೆಮಳ್ದಪ್ಪುದೆಂ
ದು ಮನೋಜಾತನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣವಿ
ದ್ಧಮನೆಂಬಂತುಟು ಗಾಡಿ ರೂಢಿಯ ಜಯಶ್ಯಾಮಾ ಮಹಾದೇವಿಯಾ ೧೩

ಅಲರಂಬಂ ಶಶಿಬಿಂಬದೊಳ್ ಮಸೆದವೊಲ್ ಕೂರ್ಪಿಂಗಡರ್ಪಾದ ಕ
ಣ್ಮಲರ್ಗಳ್ ದರ್ಪಣರತ್ನಮಂ ತಿರುಳಮಿಂಚಿಂ ದೊಪ್ಪವಿಟ್ಟಂತಿರು
ಜ್ಜ್ವಲಿಪಾಸ್ಯಂ ಪೊಸಮುತ್ತನಾಯ್ದುಮರ್ದಿನೊಳ್ತೊಯ್ಯಂತೆ ನೇ[3]ರ್ವ[3]ಟ್ಟ ನಿ
ರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವಾ ಕಾಂತೆಯಾ ೧೪

ಸುಮನೋಬಾಣಮನಿಕ್ಷುಚಾಪಲತೆಯಂ ಭೃಂಗಾವಳೀಜೀವೆಯಂ
ಚಮರೀಜಾಯತಕೇತುವಂ ನಯನದಿಂ ಭ್ರೂಲೇಖೆಯಿಂ ಬಾಸೆಯಿಂ
ಸುಮ[4]ಹೃದ್ವೇ[4]ಣಿಯಿನಪ್ಪುಕೆಯ್ವ ಜಗಮಂ ಗೆಲ್ವೆನ್ನ ಶಸ್ತ್ರಾಧಿದೈ
ವಮಿದೆಂದಾಗಳುಮಾಮಹಾಸತಿಯ ರೂಪಂ ಕಾಮನಾರಾಧಿಪಂ ೧೫

ತಳಿರ್ಗಳ್ [5]ಬೀಟುಡೆ[5] ಹಸ್ತಪಾದತಳರಾಗಶ್ರೀಗೆ ಕಣ್ಗೊಳ್ವ ಕ
ಣ್ಗಳ ನಿರ್ಮಾಲ್ಯದ ಮಾಲೆ ಕೈರವವನಂ ಸ್ಮೇರಾಸ್ಯಬಿಂಬಕ್ಕೆ ಮಂ
ಗಳನೀರಾಜನಭಾಜನಂ ವಿಧು ಮರಾಳಂ ಮಂದಯಾನಕ್ರಮಂ
ಗಳ ಕಾಲ್ಗಾಪೆನೆ ಬಣ್ಣಿಸಲ್ಬವಣೆ ರೂಪಂ ಭೂಪನರ್ಧಾಂಗಿಯಾ ೧೬

---

1 ಸ (ಅ) 2 ಸ್ತಿ (ಆಇ) 3 ರ್ಪ (ಆಇ) 4 ವೃದ್ವೇ (ಅಇ) ಲಿದ್ವೇ (ಉ) 5 ಪೀಳುಡೆ (ಅಇ) ಬೀಳುಡೆ (ಉ)

ದಳಿತಾಂಭೋಜಾತವಕ್ತ್ರಶ್ವಸಿತಪರಿಮಳಂ ಕೋರಕಾಕ್ಷೇಪಲೀಲಾ
ದಳಿತಾಪಾಂಗಾನುರಾಗಂ ಮಧುರಫಲರಸಾಸ್ವಾದ್ಯಹೃದ್ಯಾಧರಂ ಕೋ
ಮಳೆಯೊಳ್ ಸಂಭೋಗದಿಂ ಸಂಧಿಸೆ ನೃಪನ ಮನೋರಾ[1]ಜ[1]ಕೀರಂ ವಚಃಕೋ
ಕಿಳಮಾಲೋಕದ್ವಿರೇಫಂ ತಣಿವುವೆಳ[2]ಸೆ[2] ತತ್ಪ್ರೇಮಕಾಂತಂ ವಸಂತಂ ೧೭

ತರಲಾಪಾಂಗದಿನಾನೃಪಾಲತಿಲಕಂ ಮುಯ್ವಾಂತರಲ್ದುತ್ಪಯೋ
ಧರ[3]ಸಂಘಟ್ಟದೆ ಕಾಮುಕೋತ್ಕುರವಕಂ ಸೊಂಪೇಱೆ ವಾಮೇತರೇ[3]
ತರಪಾದಾಹತಿಯಿಂದಶೋಕನೊಲವಿಂದಂ ತಳ್ತು ಸಂತಂ ಸಿರಂ
ತರಮುದ್ಯಾನವಿನೋದಮಂ ಸಲಿಸುವಂ ಭೂಕಾಂತನಾ ಕಾಂತೆ[4]ಯಾ[4] ೧೮

ಘುಸೃಣರಸಾವಗಾಹಭರಮಂ ರದನಚ್ಛದರಾಗಭೋಗಮಾ
ಗಿಸೆ ಘನಸಾರಚಂದನಜಳಪ್ಲವಮಂ ದರಹಾಸಕಾಂತಿಗಳ್
ಪಸರಿಸೆ ಮನ್ಮಥಸ್ವನರಸಾಮೃತದೊಳ್ಮುಳುಗಾಡಿ ಮೂಡಿ ಸಂ
ದಿಸೆ ಪುಲಕಂ ನೃಪಂ ಪಡೆವನಂಗನೆಯೊಳ್ ಜಳಕೇಳಿಲೀಲೆಯಂ ೧೯

ವ॥ ಆ ಧರಾಧಿನಾಥಂ ಭೀಮನಕುಲಶಿಲೋ[5]ಚ್ಚಯ[5]ಶಿಖರಿಸಿಂಹಾಸನಂ ಸಿಂಹಸೇನ ಮಹಾರಾಜನೊಂದು ದಿವಸಂ ಸರ್ವಾವಸರ ಸಭಾಲಕ್ಷ್ಮೀ[6]ಪ್ರಾಸಾದ[6]ಭವನಮುಖಭದ್ರದೊಳ್ ಕಂಠಕಾಂಡಮಂಡನೀಭೂತನಿರ್ಮುಕ್ತಮುಕ್ತಾಫ[7]ಳಾ[7]ಯಿತಪ್ರತಿಫಳಿತನಕ್ಷತ್ರಮಾಳಿಕಾ ವಿಭೂಷ್ಯಮಾಣಚೂಳಿಕಾಮಾಣಿಕ್ಯಕಲಶವಿಳಸನದೊಳ್ ಗೋಪಾನಸಿಕಪ್ರಾಂತಸೂತ್ರಿತ ಮರಕತಮುಕುಳಮಾಣಿಕ್ಯಲಂಬ[8]ಣ[8]ಮುಕ್ತಾಲಂಬೂಷನೀಲವಂದನಮಾಲಿಕಾ ಜಾಲಸಂಭೇದಪ್ರಗ್ರಹಪ್ರವಾಹತರಿತಾರ್ಯಮಾಣದಿಕ್ಕೋಣಕುಹರದೊಳ್ ಕುಳಿಶದಳಘಳಕ ಪ್ರವಾಳಿಕಾದಂಡಿಕಾ ವೈಡೂರ್ಯಪರ್ಯಂಕನಿರ್ವ್ಯೂಹಮಯೂಖಲೇಖಾವರ್ಣಸಾಕಲ್ಯ[9]ವರ್ಣ[9]ರ್ತಿತರಾಜಾಂಗಣಭೂಮಿಭಾಗದೊಳ್ ಪ್ರಣಯಪ್ರವರ್ತಿತಕಾರ್ತಸ್ವರ[10]ಸ್ತಂಭ ಸಂಭೃತ[10]ರಂಗರಮಣೀಯಕದೊಳ್ ನಿಷ್ಟಪ್ತತಪನೀಯನಿಷ್ಕುರಾರೂಢಮಾನರಾಜನ್ಯ ಕೋಟೀರಕೋಟಿಪರಾರ್ಘ್ಯರತ್ನರೋಚಿರ್ವೀಚಿಕಾನೂತ್ನ ರತ್ನಾಕರ ನಿರ್ಧೂತಪೋತ ಬಿಂಬಾಡಂಬರಸ್ತಂಬೇರಮವೈರಿಪೀಠಿಕಾಧಿಷ್ಠಿತಂ ನಿಜಾರ್ಧಾಸನಸನಾಥೀಭೂತ ಜಯಶ್ಯಾಮಾ ಶ್ಯಾಮಳಾಪಾಂಗ ಹರಿನೀಲಮಾಲಾಪರಿ[11]ರ[11]ಬ್ಧವಕ್ಷಸ್ಥಲತಾರಹಾರಂ

---

1 ಗ(ಅಇಉ) 2 ಸಿ (ಅಇ) 3 ಸಮ್ಮರ್ದನದಿಂ ಪೊದಳ್ದರತಿರಾಗಾನುರಕ್ತಕಂ ದಕ್ಷಿಣೇ (ಎ) 4 ಯಂ (ಅಇ)ಯೊಳ್ (ಎ) 5 ಚ್ಚಯೇಯ (ಇಕ) 6 ಪ್ರಸಾದ (ಕ) 7 ಳ (ಅಇ) 8 ನ (ಅಇ) 9 ವರ್ನ (ಅಇಉ) 10 ಸ್ತಂಭಿ (ಉಎ) 11 ಲ (ಅಇ)

ಕುಂತಲಕಲಾಪಲತಾಂತಭಾರಮ್ಮೃಗಮದಾಮೋದ ಪರಿಹಾಸದಭ್ರಮದ್ಭ್ರಮರಮಂಜರೀ ಪುಂಜಚಂದ್ರಕಸ್ತಬಕವಾರನಿವಾರಣರಣಿತ ಚಮರೀಜವೀಜನ ಮಂದಮಾರುತಾಂದೋಳ ತರತ್ತರಂಗಿತೋತ್ತರಂಗಗಭೀರಮನಶ್ಚೈೀಳಾಂಚಳವಿಳಸನನೊಡ್ಡೋಲಗಂಗೊಟ್ಟು ಕುಳ್ಳಿ ರ್ಪಾಗಳ್

ಪೊಳೆವೆಳ[1]ತುಂತುಱಂ[1] ತುಱುಗೆ ಸೂಸುವ ದುಗ್ಧತರಂಗಮಾಲೆ ಕೆಂ
ದಳಿರ್ಗಳೊಳಂಚಿ ಸಂಚಳಪನಂಗನ ಜಂಗಮಕಲ್ಪವಲ್ಲಿ ಮಂ
ಜುಳಕರಪುಂಜಮಂ ಕೆದಱುವೈಂದವಕೋರಕಜಾಲಮೆಂಬಿನಂ
ಬಳಸಿದುದಾ ಮಹೀಪತಿಗೆ ಚಾಮರವಿಕ್ಕುವ ಕಾಮಿನೀಜನಂ ೨೦

ವ|| ಮತ್ತಂ ಮೃಗಮದದ ಕಂಪಿಂಗಂ ಮೃಗಧರನ ಸೊಂಪಿಂಗಂ ಪುಟ್ಟಿ ಕಳೆಗಳೊಡ[2]ನೊಡವಳೆದು[2] ಜಾಣೊಡನೆ ಜವ್ವನಂ ಮೆಱೆದು ನಾಣೊಳ್ ನನೆಕೊನೆವೋಗಿ ಬೇಟದೊಳ್ ಬಿರಿದು ಕೂಟದೊಳರಲ್ದು ಲೇಸಿನೊಳ್ ವಾಸನೆವಡೆದು ಜಗಮಂ ಜಕ್ಕುಲಿಸುವಿಂಗೋಲ್ವಿಲ್ಲನ ಬಲ್ಲಾಳ್ತನ್ರಕ್ಕೆಯ್ದು[3] ಸರಲ್ಗಳೆಯ್ದುವೆಂದು ಕಾಂತಾವೇಷಲತಾಂತಕಾಂಡಮಂ ವಸಂತನನಂತಮಂ ನಿರವಿಸಿದನೆಂಬಂತೆ ಗಾಡಿ ರೂಢಿಯಂ ತಳೆಯೆ ತುಡುಗೆಯ ಕೆಂಬರಲ ಪಸುಳೆವಿಸಿಲೊಳಂ ಕಡೆಗಣ್ಣಕಾಂತಿಯ ಕಡುವೆಳದಿಂಗಳೊಳಂ ಮುಡಿಯ [4]ಕರ್ಪಿಟ್ಟಳುರ್ಕೆ[4]ಗತ್ತಲೆಯೊಳಂ ಮನಸಿಜಮಹೇಂದ್ರಜಾಲಮೆಂಬ ಲೀಲೆಗಾಲಂಬಮಾಗಿ

ಅಳವಡೆ ಕೊಂಡ ನುಣ್ಪಸದನಂ ಪೊಸಜಾಣ್ನುಡಿ ಜಾಣರಂ ಮರು
ಳ್ಗೊಳಿಸೆ ಪೊದಟ್ದಿ ಮುದ್ದುನುಡಿ ಭಾವಕರೊಳ್ ಮದನಾನುರಾಗಮಂ
ಬಳಯಿಸೆ ರೂಪು ನೋಟಕರ ಕಣ್ಗಮೃತಾಂಜನಪುಂಜಮಂ ಪುದುಂ
ಗೊಳಿಸೆ ನೃಪೇಂದ್ರನೋಲಗದೊಳಿರ್ದುದು ವಾರವಿಲಾಸಿನೀಜನಂ ೨೧

ಸವಿಯಂ ಸಾಲಿಡೆ [5]ಪೊ[5]ಯ್ದು ನೋಡಿ ಶ್ರುತಿಯಂ ಮೇಲ್ಪಂತಿಯಂ ನೊಂಕಿ ಕೂ
ಡುವ ಪಾಂಗಿಂ ಪ್ರತಿದಂಡಿಕಾಪ್ರಕರಮಂ ಮೇಳೈಸಿ ಪೀನಸ್ತನಾ
ಗ್ರವನಾಲಿಂಗಿಸಿ ತುಂಬಿ ಸಾರ್ಚಿ ಕಳೆಯಂ [6]ತಿರ್ದುತ್ತುಮಿ[7]ರ್ದತ್ತು ನೋ
ಡುವಿಳಾಕಾಂತನ ಪಕ್ಕದೊಂದು ಕೆಲದೊಳ್ ವೀಣಾಧರೀಸಂಕುಲಂ ೨೨

1 ದುಂತುಱುಂ (ಅ) ತುಂತುಱು (ಇಉ) ದುಂತುಱಂ (ಎ). 2 ವರಿದು (ಇ)
3 ಕೈಪು (ಇ) 4 ಕರ್ಪಿನಿತಳುಕೆ (ಇ) 5 ಹೊ (ಅಇ)
6 ಸ್ತನಾಂಗ (ಇಕ) 7 ತೀರ್ದತ್ತುಮಿಾ (ಅಇಉ)

ಕ್ಷನುರಾಪ್ತರ್ ನಯಕೋವಿದರ್ ಸರಳಶಾಸ್ತ್ರಾರ್ಥರ್ ಸ್ವಕೀಯಾನ್ವಯ
ಕ್ರಮಸಿದ್ಧರ್ ಮತಿಬು[1]ದ್ಧಿ[1]ವೃದ್ಧರುಪಧಾಶುದ್ಧರ್ ಕುಲೀನರ್ ನೃಪೇಂ
ದ್ರಮೃಗೇಂದ್ರಾಸನಪಾದವಿಷ್ಟರದೊಳಿರ್ದರ್ ಸಂದ ಪಂಚಾಂಗಮಂ
ಕ್ರಮಮಾತ್ಯಾಕೃತಿವೇಷಮಂ ತಳೆದವೋಲ್ ಪಂಚಪ್ರಧಾನೋತ್ತಮರ್ ೨೩

ಪರಿಜನಜೀವನಂ ಸಕಲದೇಶಸಮಾಹಿತವೃತ್ತಿ ಭೂತಳೇ
ಶ್ವರಧನವೃದ್ಧಿ ರಾಜಗೃಹಕರ್ಮ [2]ಕಳಾಪಸಮು[2]ವ್ಯಯಂ ನಿರಂ
ತರಮಿವರೊಂದು ಕಂಟಮೊನೆ ಬಾಳ್ಮೊನೆಯಾಗಿರೆ ಸಲ್ವುದೆಂಬಿನಂ
ಕರಣಗಣಾಗ್ರತಸ್ಸರರ ಮಾಲೆ ಮನಕ್ಕೆಸಗಿತ್ತು ಲೀಲೆಯಂ ೨೪

ಇವು ವಿದ್ಯಾಪರ್ವತಮೆಂ
ಬ ವಿಳಾಸೌನ್ನತ್ಯದಿಂದೆ ಮಣಿಮಯಪೀಠಾ
ನಿವಹದೊಳೆಸೆದುದು ಗಡಣಂ
ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳಾ ೨೫

ಜಗತೀಶಂ ನೋಟ್ಪ ಕಣ್ಗಂ ನುಡಿವ ದನಿಗಮಿಂಬಾಗಿ ಕುಳ್ಳಿರ್ದರಂದೋ
ಳಿಗಳಿಂ ದಂಡಾಧಿಪರ್ ಮಾಂಡಳಿಕರ[3]ಧಿ[3]ಕಸಾಮಂತರಂತರ್ನಿಯುಕ್ತರ್
[4]ಬ[4]ಗೆಕಾಱರ್ ಗಾಯಕರ್ ಪಾಠಕರಡಪದವರ್ ನೆತ್ತಕರ್ ವಾಸಕಾಱರ್
ನಗೆಕಾಱರ್ ವಾದ್ಯಕರ್ ಚಿತ್ರಕರಣುಗಿನವರ್ ಸೂಳೆವಾಳರ್ ಪಯಾಳರ್ ೨೬

ವ|| ಮತ್ತಂ ಕಲಿತನದಿಂ ಕ[5]ಡೆ[5]ದಂತೆ ಗರುವಿಕೆಯಿಂ ಕರುವಿಟ್ಟಂತೆ ಗಂಡಗರ್ವದಿಂ ಕಂಡರಿಸಿದಂತೆ ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡ್ಡಂ ಗಾಡಿ ಸಭೆಯ ಕಣ್ಗಳಂ ಕವ್ವರಿಗೊಳಿಸೆ ಪೂಸಿದ ಚಂದನದ ಭೂರಿಭುಜಶಿಖರದೊಳಣ್ಕೆಗೆಯ್ದ ಕುಂಕುಮದ ಬಿಂಕಂ ಬೆಳ್ಳಿಯ ಬೆಟ್ಟದ ತೋಳ ಮೊದಲೊಳ್ ನೆರ್ಮಿಸಿದ ಕೆಮ್ಮುಗಿಲಿನ ಪೆರ್ಮೆಯಂ ಪಡೆಯೆ ಮಾಱಳವಿಗಗ್ಗಳಮಾದ ಪೇರುರದ ಪರೆಪು ಕರಿಯದಂಡೆಯು ಜಳವಟ್ಟಿಗೆಯ ಬೆರಕೆವೆಳಗಿಂ ಸುರಧನುವಿನ ಹೊರಜೆ ಹತ್ತಿದೈರಾವತಕ್ಕೆ ವೈರಮನೊಡರ್ಚೆ ಮಲ್ಲಪಡಿಯ ಪಱಿಯ ದತ್ತಿಗುಲ್ಲಾಳದಿಂ ನಡೆದು ತೋಱಿ ಹಿಂಗಾಲ್ನಿಂದ ಸೂಳಾನೆಗಳ ತಾಳವಟ್ಟಮಂ ಪಿಡಿದು ಪಿಂದಣ್ಗೆ ಜಗಿದು ತೆಱಪುಮಾಡಿ ಮೊಗಂಬಡೆದು ತರತರಂ ತ್ರಿಭಂಗಿ ಮೆಱಿವ ಜಂಗಮಗಿರಿಗಳಂತೆ ತವಂಗಮುಳ್ಳಾಡೆ ಘಟ್ಟಿಸಿ ನಿಂದು ಸಿಡಿಲ ಸಡಗರದ ತಡೆ ಬಿಟ್ಟಂತೆ ಬಾಹಾಸ್ಫಾಲನಮುಳುರ್ಕೆವಡೆವಿನಮಿತ್ತಂ ದೇವ ಚಿತ್ತೈಸೆಂದು ಜೆಟ್ಟಿಗಳಂತರ ಜೆಟ್ಟಿಗಳ[6] ಗೋವಳರ ಗೊಂದಣಂ ಜೋಳಿದೆಗೆದು ಮೇಳೈಸುವಾಗಳ್

1 ದ್ಧ (ಅಇ) 2 ಕಳಾನೃಪಸೇ (ಇಎ) 3 ಥಿ (ಅಇ)
4 ವ (ಅ ಇ) 5 ಡಿ (ಅಇ) 6 ಟ್ಟಗರ (ಇ)

ಕಡುಮುಳಿಸೇಱಿ[3] ಮಲ್ಲವೆಸರಿಂ ಗಜವಾಂತೊಡಮುರ್ಬಿ [1]ಠಾಯೆಯೊ[1]
ಳ್ಕಿಡಸಪದೊಡೇಕೆ ಮಲ್ಲತನವೊಲ್ಲದೆ ದಾನಕದೊಳ್ಪೊದಱಿ್ದಡಾಂ
ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣಿ ಹತ್ತಿ ಡೊಕ್ಕರಂ
ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟಪಟ್ಟಸಂ ೨೭

ವ|| ಎಂದು ಮಲ್ಲಮಾತಂ ಮಾಡಿ ಪೊಡೆವಟ್ಟು ಕುಳ್ಳಿರ್ದ ಜಗಜೆಟ್ಟಿಗಳ ಗೊಂದಣಂ ಮಾನಕನಕಾಚಳನ ಮಹಿಮೆಯನೋಲಗಿಸಲ್ ಬಂದ ಕುಲಶಿಖರಿಶಿಖರ ಕಳಾಪದಂತಿರ್ದುದಂತುಮಲ್ಲದೆಯುಂ

ಜಗಮನದಿರ್ಪಲಾರ್ಪ ಬಿರುದಾಂತ ಬಲಂಗಳನೆತ್ತಿ ಸುಂಗಿ ಮ
ತ್ತುಗುಬಿದ ಬೀರವರ್ತಿನಿಕರಂಗಳ ಬಾಱಿ್ಮದಲಾದ ಚಾಗದೋ
ಲಗದ ವಿಡಂಬಡಂಬರಕೆ ಕಣ್ಣೆಲೆಯಾದ ವಿಲಾಸವೊಪ್ಪೆ ಗ
[2]ದ್ದು[2]ಗೆಯೊಳಗಿರ್ದುದಗ್ಗಳಿಕೆಯಗ್ಗದ ಪಾರ್ಥಿವಪುತ್ರಸಾರ್ಥಕಂ ೨೮

ವ|| ಅದಲ್ಲದೆಯುಂ ತಿಮಿತ್ತಿಳಿಕಮೆಂಬುದು ಪಸುಗೂಸಿಂಗೆ ಮಸಿಯೆಂಬುದು ಹುರಿಯೋಡಿಂಗೆ ಪಣೆಕಟ್ಟೆಂಬುದು ಪೆಱವಲೆಱ್ಱಂಗೆ ಬೆಳ್ಪಿಯೆಂಬುದು ಪಾರ್ವಂಗೆ, ಜಡೆಯೆಂಬುದು ಗೊರವಂಗೆ, ತಟ್ಟೆಂಬುದು ಸವಣಂಗೆ, ತಳಪಟ್ಟೆಂಬುದು [3]ಪೊ[3]ಲ್ವಂಗಲ್ಲದೆ ಕೊಲ್ವಗೆಲ್ವ ಕಲಿಗಂ ಬಿರುದಂಗಮೇವುದೊಂದಲ್ಲದೆ ಸಿರಿಗಂದದಣ್ಪಿನೊಳ್ ಪರಭಾಗಂ ಬಡೆದ ಮುತ್ತಿನ ತಿಸರಂ ತಿಂಗಳ ಬೆಳಗಿನೊಳ್ ತೇಗಿನಿಂದ ತಾವರೆಯ ಮಾಲೆಯೊಳೋರಗೆಯಾಗೆ ಮದವಟ್ಟೆದೆಗೆದಿಟ್ಟ ಕತ್ತರಿಯ ಚೆಲ್ವ ಕೊರಲೊಳಿಕ್ಕಿದ ಕರಿಯದಂಡೆಯೊಳ್[4]ರಡೆ[4] ಬರೆ ಮುಡಿದ ಮಲ್ಲಿಗೆಯ ಪರಿಮಳಕ್ಕನುಡಸಿದ ಕಪ್ಪುರದ ಪಪ್ಪುಕಕ್ಕಂ ಮಱಿದುಂಬಿ ವಿಂಡು ಮುಂದೆ ಮಂಡಳಿಸಿ ಕಟ್ಟೆ ಬರೆ, ಕಟ್ಟಬಂದು ರೂಪು ರೇಖೆವಡೆಯೆ ರೇಖೆ ಕೋಮಳಿಕೆವಡೆಯೆ ಕೋಮಳಿಕೆ ಕೊಂಕುವಡೆಯೆ, ಕೊಂಕು ಬಿಂಕಂಬಡೆಯೆ, ಬಿಂಕಂ ಲುಳಿವಡೆಯೆ ಲುಳಿ ನವಣಿ ವಡೆಯ ನವಣಿ ಬಹುವಿಕೆವಡೆಯೆ ಬಹುವಿಧದ ವಹಣಿಯ ಮಾರಚಿತ್ರದ ಗತಿಗಳೊಳ್ ಮೆಱೆದು.

ಬಿರುದಂ ಮೇಳಯದೊಳ್ತೊಡರ್ಚಿ ಬಿರುದಂಕಂ [5]ಮೆಚ್ಚುತಂ[5] ಸಾರ್ಚಿ ಮ
ಚ್ಚರದಂಕಂ ಕಳದಲ್ಲಿ ನೋಡು ಬಯಲೋಳ್ಬೇಡೆಂದು ಕೈಯಾಣೆಯಿ
[6]ಟ್ಟೆರ[6] ಸಂಕಂ ಪಱಿಗುಟ್ಟೆ ಮಾಸವಳದಂಕಂ ಹಾಸೆಯಂ ಸಾಱಿ ಬಿ
ತ್ತರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಟ್ರಿವೊಲ್ ೨೯

---

1 ಥಾಯೆಯೊ (ಅಇ) 2 ದ್ದಿ (ಅಇ) 3 ಹೊ (ಅಇ)
4 ಡಡೆ (ಅ) 5 ಮೆಚ್ಚುತುಂ (ಅ) ಮೆಚ್ಚಿತಂ (ಇಎ) 6 ಟ್ಟೆರೆ (ಇ)

ವ|| ಮತ್ತಮತ್ತಕಂಟಿಯಬಾರದ ಸೀಯದರದೆಡೆಯೊಳ್ ಮೇಲೆ ಸಾಱುವ ಡೌಡೆಯದನಿಗಂ ಕೆಳಗೆಸೆಯೆ [1]ತೆಮಳ್ದು[1] ಕುಪ್ಪಳಿಸುವಂದುಗೆಯ ತೊಡರ ಬಲ್ಲಿಗೆ ಬಲ್ಲುಲಿ[2]ಗಂ[2] ಸುಟ್ಟುರಿ ಮಸಗಿ ಸುೞಿದು ನೆಗೆದು ಕನ್ನ[3]ರೆ[3] ಕವಿ[4]ದ[4] ಸೊರ್ಕಿನ ಸೊವಡಿಂಗಂ ರಾಜಾಂಗಣದೊಳ್ ಪಣ್ಣಿ ಬಂದು ನಿಂದಯಾವಃಸಾಮಜಸ್ತೋಮಮನಿತುಂ ಬಾಯ್ವಿಟ್ಟು ಬೆದಱಿ ದೆಸೆಗೆಟ್ಟೋಡೆಯುಂ ಎರಲ್ವಟ್ಟೆಗೆತ್ತಿ ಸುಟ್ಟಸಿದ ಕೆಯ್ಯಸುಯ್ಯಭರದೊಳ್ ಸುಱಿದು ಸೂಸುವ ಪುಷ್ಕರದ ತುಂತುಱಿಂ ತುಱುಗಿ ಸುತ್ತಿದ ಪಂಚಾಯುಧದ ಪುಲ್ಲಿಗೆಯ ತೊಱಂಗು ನಾಂದು ಪಿಣಿಲೇಱಿಪೆಟಿಲ್ಚಿದ ವೇಣಿಯೊಳ್ಪಿಣೆದು ಮಿಂಚಿನಂಚಿವೆರಸು ಕಾರ್ಮುಗಿಲ ಬಿೞಲು ಕಾಲೂಱಿದಂತೆ ಮೇಲೆ ಮೆಱೆಯೆಯುಂ ಗಂಡಮಂಡಲದಿಂ ಬಿರಿವಿಟ್ಟಂಬರ್ಗೊಗೆವ ಮದದ ಕದಡಿನ ತೋರಧಾರೆಗಳನಡಿಗಡಿಗಪ್ಪಳಿಸುವಗ್ರಪಲ್ಲವದ ಚಪ್ಪರಣೆಗಳಿಂ ಬೆಪ್ಪಳಿಸಿ ನೆಗೆದು ತಿಮಿರ್ದ ಕುಂಕುಮದಿಂ ಕೆಂಕಮಾದಂಗವಟ್ಟದೊಳ್ ಬಿಂದುವಿಟ್ಟು ಕಿಱುವುಲಿಯ ಜೋಡಂ ತೊಟ್ಟಂತಿರಿಟ್ಟಳಮಾಗೆಯುಂ ಭೋರೆಂದು ಸುಱಿವ ಕೀಳ್ಮದದ ಪೂರದಿಂ ಕಾರ ಕಾನನಮುಂ ಜಂಝಾನಿಳನೊತ್ತುವಂತೆ ಕುಱುಕುಱುಂ ಮೆಟ್ಟಿ ನಡೆಯಿಸುತ್ತುಂ ಗಜಱುವ ಗಳಿಕಾಱರ ಚಪ್ಪರಿಸುವೊಪ್ಪುಕಾಱರ ಕರೆವ ಪರಿಕಾಱರ [5]ಪಾರ್ಯೆ[5]ಸುವಾರೆಕಾಱರ ನೆರವಿಗಳಂ ಕೈಸನ್ನೆಯಿಂ ನಿವಾರಿಸುತ್ತುಂ ಪೊಱಮುಯ್ವಿನೊಳ್ ಮಲಂಗಿದ ಕೂರಂಕುಶದಿನೆಳವೇಱ ಮೂಡಿದ ಮೂಡವೆಟ್ಟಿನ ಕೋಡುಂಗಲ್ ನಡೆದು ಬರ್ಪಂತೆ ಬಂದು ತಪಂಗಮಂಟಪದ ಮತ್ತಾವರಣದ ಕೆಲಕ್ಕೆ ಮತ್ತಾವರಣಮಂ ಸಾರ್ಚಿ ಪೊಡೆನಡುತ್ತುಂ

ತೞಿಯೊಳ್ ಚೌದಂತನೆನ್ನಾನೆಗೆ ಮಲೆದೊಡೆ ವ್ಯೈಹಾಳಿಯೊಳ್ ದಿಗ್ಗಜಂ ಬೆಂ
ಬೞಿಯೊಳ್ ಕಾಲ್ಗೋಪೊಡೀ ಕಟ್ಟಣಕದ ಮದದೊಳ್ ಕರ್ಬೊಲಕರ್ಣವರೂಹುಂ
ಸುೞಿಪೋಡಿತ್ತಾದೊಡಾರ್ಕೆಪ ಕತನಮನೆಲೇ ಕೇಳ ನೀ ನಿನ್ನ ಕೈಗೈ
ಪೞಿಯೊಳ್ ಕಲ್ತಾತ[6]ನಲ್ತೆಂ[6] ಕುಡು ಸಮುಚಮನೆಂದಂಕಂದಾಸಾರರಿರ್ದರ್ ೩೦

ವ|| ಅದಲ್ಲದೆಯುಮಲ್ಲಿ ಪಣ್ಣಿಸಿ ಬಂದು ಮೆಲ್ಲಮೆಲ್ಲನೆ ಸುೞಿವ ಪೀಯೂಷಪೂಷಮೃಗ್ಯುಳೂಕಸಂಭವಂಗಳುಂ ದೇವಮುನಿಸತ್ವಂಗಳುಮಪ್ಪ ಪಟ್ಟತರದ ವಾರುವಂಗಳಾಂದೆಯಂತೆ ಮದಕ್ಕೆ ಮೆಱೆವ ತಪ್ಪಿದಕ್ಕರದಂತೆ ತೊಡಿಗೆ ಸುಸರಪಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಱಿವ ಜಾಲಿಜಾಯಿಲಂಗಳನುಯ್ಯಲಮಣಿಯನೊಲೆದು ಬಿಟ್ಟಂತೆ ತಿರಿಪಿ [7]ತಂದು[7] ಸಮ್ಮುಖದೊಳ್ ಕೈಕೊಳಿಸುವ ಮೆ[8]ಲ್ಲಾದಯ[8]ದಲ್ಲಿ ಪೊಲ್ಲದಿ[9]ನುಲ್ಲಾಸ[9]ಮೆಸೆವುಲ್ಲಾಳದೊಳಂ ಕೆದಱಿದ ಪೊನಲಿಯ ಕುಸು

---

1 ತೆಮಳ್ದಿ (ಕಗ) 2 ಯಂ (ಇ) 3 ರಸಿ (ಅಇಉ) 4 ವ (ಅಇಉ)
5 ಪಾಳ್ಯೆ 6 ನಲ್ಲೆಲಿ 7 ತಮ್ಮ (ಕ) 8 ಲುದಾ (ಎ)
9 ಸುಲ್ಲಾಳಸ (ಅ) ಮುಲ್ಲಾಳಸ (ಗ)

ಮದೆಸಟಿ ಪರಿಮಳಮನಂಟಂಟು ವಾಸಿಸುವಂತೆ ನಾಸಾಪುಟದಿಂ ಖುರಪುಟ[1]ಮಂ[1] ಸೂಸಿ ಬಂಬಲು [2]ತುಱುಂಗಲಾಗಿರೆ[2] ವೊಳಿಸಿ ಪೊಱಮಡುವ ಕಾಲನವಣಿಗಳೊಳಮೇಂ ನವ ವಿಧದ ಬಿನ್ನಣಮಂ ನಿನ್ನಾಳ್ದಂಗೆ ಬಿನ್ನವಿಸೆಂಬಂತಿರುದ್ಭಾವಂಬಡೆದು ಮುರಿದು ಪತ್ತಿಸಿದ ಕೊರಲ ಕೊಂಕಿನೊಳಂ ಚಳಯಮಿತ್ತ ಕತ್ತುರಿಯ ಕಡದ ಮೆಚ್ಚದಂತಿರುಚ್ಚಳಿಸಿ ಪಾಯ್ವ ಪಡೆ ಮೂತ್ರದ ಪದಪಿನೊಳಂ ಕೈಮುಣೆಗೊಂಡ ಹೆಟಿವನಂತೆ ಕುಕ್ಕುರಿಸಿ ಪೊಕ್ಕು ಸಾರ್ವ ಪಚ್ಚೆವದ ಪದಪಿನೊಳಂ ಮೆಚ್ಚಿ ನೋಟ್ಪ ರಾಜರಾಜನ ಕಣ್ಗಳಂಗಣದೊಳ್ ಬೆಡಂಗು ಭಂಗಿವಡೆವಿನಮೇಱಿ ತೋಱಿ ಪೆಸರಿಟ್ಟು ಪೊಗಟ್ವ ಕುದುರೆ [3]ಕಾಱಿರ[3] ಕೇಣದನುಮಾನಕ್ಕಮೋಜಾಯಿತರೋಜೆಯೊಲ[4]ವಸದ ಭೂಮಾ[4]ನಕ್ಕಂ ಸಕ್ಕಸಮನಾಗಿ [5]ತೂಗಿದಂ[5]ತೆ ಉಳಿ[6]ಯಿಸಿದಲು[6]ಳಿಯ ಮೇಲೆ ಹೋಯೆಂದು ನಿಲಿಸಿ

ಖುರಮಂ ನಾಸಿಕೆ ಸೂಸುವಂದದೆ ಬೆಡಂಗಂ ತ್ರಾಸಿನೊಳ್ತೂಗಿದಂ
ತಿರೆ ಲೋಹಕ್ಕೆ ನಿರಾಳಮಾಗಿ ಮೊಗಮಿತ್ತುದ್ಭಾ[7]ವಮಂ[7] ಜಾಱುಕ
ಲ್ಪರಿವಂತಾಸೆಯ ಪೈಸರಂ ಮೆಱೆವ ಚೆಲ್ವಂ ದೇವ ನೀವೇಱಿ ನೋ
ಡಿರೆ ಚಿತ್ತಂಬಡೆದಪ್ಪುವೆಂದು ಮೆಱೆದರ್ ವಾಹಂಗಳಂ ವಾಹಕರ್ ೩೧

ವ|| ಅಂತುಮಲ್ಲದೆಯುಂ

ತನಿಗಂಪುಂ ಕಡುಸೊಂಪುಮುಗ್ಗಳದ ಪೆಂಪುಂ ಕೂಡೆ ಕೈವಂದ ನಂ
ದನದಂತೋಲಗಮಿರ್ದು ದೂರಿವುರಿಮಾಗಾಬ್ಜೈಸಜಾತೂಹಳೂ
ವಿನವೀಸಾವಿಸಸಾ ವುಫೇ ವುಫೇ ವುಫೆ ಹೋ ಜಾಗು ಬೊಲ್ಲೆಂಬ ಗೋ
ಸನೆಯಂ ತಾಳ್ದಿತು ಗಂಡುಗೋಗಿಲೆಯ ತೊಂಡಂ ಪ್ರಾತಿಹಾರ್ಯಸ್ವನಂ ೩೨

ವ|| ಅಂತು ಒಡ್ಡೋಲಗನಡ್ಡ ಪರಮೆಡ್ಡಮಾಗಿರ್ದುದಾಪ್ರಸ್ತಾವದೊಳ್

ದೆಸೆವಿಸರತ್ರವಾಲಲತಿಕಾವಳಿಯಿಂ ತಳಿರ್ವೇಱಿದಪ್ಪುದಾ
ಗಸವರುಣಾಂಬುಜಾತ [8]ವನ[8]ರಾಜಿಗಳಿಂ ದಳವೇಱಿದಪ್ಪುದ
ರ್ವಿಸೆ ಮಣಿಮಾಲೆಯಿಂ ಜಲದಮಾಲೆ ಫಲಾವಲಿವೇಱಿದಪ್ಪುದಾ
ವೆಸಕಮಿದೆಂದು ನೋಡಿದುದು ಮೂಡಿದ ಕೌತುಕಮಂ ಸಭಾಜನಂ ೩೩

---

1 ದಿಂ (ಎ) 2 ತುಱುಂಗಲುಮಾಗಿ (ಎ) ತುಱುಂಗಲ್ಮಾಗಿರೆ (ಗ)
3 ಜಾಣರ (ಅಇಉಕ) 4 ಪಱಿದ ಭೂಮ (ಅ) ವಶದ ಭೂಮ (ಇ)
5 ಡಂ (ಎ) 6 ಯಸಲ್ಗ (ಅ) ಯಸಲ (ಇ) ಯಸು (ಉ) 7 ರ (ಎ)
8 ನವ (ಅಇಉ)

ವ॥ ಆಖಂಡಳದಿಶಾಮಂಡಳದಿನಂತು ಬಳ್ವಳಬಳೆದ ಕ[1]ದಂ[1]ಬವೆಳಗೆಂಬ ಧವಳಾರುಣ ನೀಲನೀರರುಹವನಕ್ಕಿದಿರೇಳ್ವಿ ಲೋಚನಮರೀಚಿಗಳ್ ವಿಕಸಿತಸರೋವರಜಳಂಗಳನ ಳಂಕೆಗೊಳಿಸಿ

ಅದು ನಾನಾರತ್ನರೋಚಿಃಪಟಳಜಟಿಳಮಂ ಪುಷ್ಪಕಾನೀಕಮಲ್ಲಿ
ರ್ದುದದೇಂ। ತೂಣೀರದೊಳ್ತೀವಿದ ಕುಸುಮಶರಶ್ರೇಣಿಯಂತಲ್ತು ಚಿತ್ರಾಂ
ಬುದಪಾಳೀಜಾಳದೊಳ್ಪೊಯ್ದೆಳವೆಱಿಯುಗೆಯಲ್ತ[2]ಲ್ತ[2]ದಭ್ರಾಬ್ಧಿಯಿಂದಂ
ಸುದತೀಸಂದೋಹಮಿಂತಿಂತೊಗೆದಪುದೆನುತಿರ್ದತ್ತು ತದ್ರಾಜಲೋಕಂ ೩೪

ವ॥ ಅನ್ನೆಗಮಿತ್ತಲೆಸಳ್ಮಸಗಿದಲರ ಗೊಂಚಲ್ಗಳಿನಿಳಿವ ಚಂಚರೀಕಸಂಚಯದಂತೆ ಪಾಱುನೀಱಿಯರ್ ಪುಷ್ಪಕವಿಮಾನಮಾಳೆಗಳಿನವನೀತಳಕ್ಕವತರಿಸಿ ಪರಿಷದ್ವಲಯಮಂ ಪುಗುತಪ್ಪಾಗಳ್

ಯುವತಿಜನಕುತಕಪಾತ್ರ
ಪ್ರವೇಶದೊಳ್ ಸಭೆಯನವರ ತನುಸುರಭಿಗದೇಂ
ಕವಿದತ್ತೊ ನೀಲಚೇಲದ
ಜವನಿಕೆವಿಡಿದಂತೆ ಮುಂತೆ ಭೃಂಗೀಪಟಲಂ ೩೫

ಆ ಸಭೆಗೆ ಪುಗುವ ಖಚರವಿ
ಲಾಸಿನಿಯರ್ ನಡೆವ ನೆವದೆ ಕುಸುಮಾಂಜಲಿಯಂ
ಸೂಸಿದರೆಂಬಿನಮೇನಥಿ
ವಾಸಿಸಿದುದೊ ಚರಣನಖಮಯೂಖಪ್ರಕರಂ ೩೬

ನೆಲನಂ ಮುಟ್ಟದ ಖೇಚರ
ಲಲನೆಯರ್ಗರುಣಾಬ್ಜದೆಸಳನೊಡ್ಡಿದಳವನೀ
ಲಲನೆಯೆನೆ, ನೀಳ್ದಕುಟ್ಟಿಮ
ತಲದೊಳ್ ಮಾರ್ಪೊಳೆದುವಂಘ್ರಿಕಿಸಲಯರುಚಿಗಳ್ ೩೭

ತರುಣಿಯರಿದೆ ಕಟಿದಪ್ಪದ
ಸುರಚಾಪತರಂಗಿಣೀಪ್ರವಾಹಾಂತರದೊಳ್
ಬರುತಿರ್ದಪರೆನೆ ರಶನಾ
ಪರಿಕರಶಬಳಾಂಶು ಮುಱುಗಿಸಿತ್ತೋಲಗಮಂ ೩೮

---

1 ದ (ಅಇ) 2 ಲ್ಲಿ (ಅಇಎ)

ನಳಿನವನಶ್ರೀನಿವಹಂ
ಕಳಹಂಸಂಬೆರಸು ಬಂದುದೆನೆ ಲತಿಕಾಕೋ
ಮಳೆಯರ ನಡುವೊರ್ವಂ ನಿ
ರ್ಮಳರೂಪಂ ದ್ವಿಜಕುಲೋತ್ತಮನುಂ ಬರುತಿರ್ದಂ ೩೯

ವದನದೊಳಿರ್ದ ತತ್ವತರುಣೀನಯನಾಂಶುಕದಂಬದಂತಿರಿ
ರ್ದುದು ಕಿವಿಯೊಳ್ ಚಲನ್ಮಕರಕುಂಡಲಶೋಭೆ ಲಲಾಮಕಂ ಲಲಾ
ಟದ ನಯನಂಬೊಲಿರ್ದುದೆಸೆದಿರ್ದುದು ತಕ್ಕುಪವೀತಮಾತನಂ
ಗದೊಳೆಡೆಗೊಂಡ ಭಾರತಿಯ ಹಾರರುಚಿ ಪ್ರತಿಬಿಂಬಮೆಂಬಿನಂ ೪೦

ಬಳಸಿ ತಲೆಸಟ್ಟ ದುರಿತಂ
ಗಳೊಳಿಕ್ಕತುಳಕ್ಕೆ ತಕ್ಕನುಷ್ಠಾನಪದಾ
ವಳಿಯಂತಿರ್ದುದು ತಿರ್ದಿದ
ಪಳಿತಾರ್ಧಶ್ಮಶ್ರುಲಂಬಕೂರ್ಚಕಳಾಪಂ ೪೧

ಕೆಂಗದಿರ ನಖದ ಕಿಸಲಯ
ದಂಗಸ್ಪರ್ಶನದೆ [1]ಶುಚಿ[1]ಗಳಾಗಳ್ ಬಂದಾ
ಲಿಂಗಿಸಿದವೊಲೆಸೆದುದು ವಸ
ನಾಂಗದ ತಳಿರ್ಗಾಸೆ ಪಾರ್ವನುರುಕಟಿತಟದೊಳ್ ೪೨

ತುಂಬಿ ಪರಿಮಳಕೆ ಬಳಸಿ ನಿ
ಲುಂಬಿರೆ ನಿರ್ದಂಡಚಂದ್ರಕಚ್ಛತ್ರಮನಾ
ಲಂಬಿಸಿದುದವನ ಸೇಸೆ ತು
ಱುಂಬಿನ ಮಂದಾರಪಾರಿಜಾತಪ್ರಸವಂ ೪೩

ಪಿಂತಣ ಶಿಷ್ಯನ ಕರಶಶಿ
ಕಾಂತಕಮಂಡುಲು ಪಳಚ್ಚನೆಸೆದಿರ್ದುದು ಶು
ದ್ಧಾಂತಃಕರಣೋಪಾಧ್ಯಾ
ಯಾಂತೇವಾಸಿಯವೊಲಾ ಧರಾಮರಪತಿಯಾ ೪೪

ಮಾಣಿಯ ಕೌಂಕುಳಿ ಚರಿತಪು
ರಾಣದ ಕವಳಿಗೆ ಸಮಾನಮಾಯ್ತುಮಳವಚೋ
ಬಾಣಂ ತೆಕ್ಕನೆ ತೀವಿದ
ತೂಣೀರತಳಾಗ್ರಭಾಗದೊಳ್ ಧಾರ್ಮಿಕನಾ ೪೫

---

1 ರುಚಿ (ಕ)

ವ॥ ಅದಲ್ಲದೆಯುಂ

ಪರಿವಾರಾಂಗನೆಯರ್ ಪರಿಗ್ರಹಮಣಿಪ್ರಕಾ[1]ಶ[1]ಚ್ಛತ್ರಚಾ
ಮರತಾಂಬೂಲಕರಂಕದರ್ಪಣನವೀನಪ್ರಾಭೃತಾಮುಪ್ರಸುಂ
ದರಹಸ್ತಾಬ್ಜೆಯರೆತ್ತಲುಂ ಬಳಸಿ ತನ್ನಂ ಬರ್ಪಿನಂ ಬಂದಳಾ
ಸ್ಮರಚಕ್ರೇಶನ ರಾಜ್ಯಲಕ್ಷ್ಮಿಯೆನಿಪನ್ನಂ ನಾಯಿಕಾಗೌರವಂ ೪೬

ವ॥ ಅಂತು ಬಂದು ನೃಪೇಂದ್ರನ್ನೃಗೇಂದ್ರವಿಷ್ಟರಕ್ಕನತಿದೂರದೊಳ್ನಿಂದು ನಿಜ ರಾಜ್ಯವಿಶಿಷ್ಟನನಿಷ್ಟಶರ್ಮನೆಂಬನನೆ ಪುರೋಹಿತನಂ ಮುಂತಿಟ್ಟು ಕಾಣಿಸಲೊಡಂ

ಕರನಖರಕುಮುದಕುಸುಮಾಂ
ಕುರಷಂಡಂ ವಿಮಲದಂತಕಾಂತಿಪ್ರಭೆಯಿಂ
ಶರದದ ಪೊಸವೆಳ್ದಿಂಗಳೊ
ಳಿರೆ ಭವತೇಸ್ವಸ್ತಿ ಯೆಂದು [2]ಸಂಯುತ[2]ಹಸ್ತಂ ೪೭

ಶ್ಲೋ॥ ಭೂತಭವತ್ತೀರ್ಥ[3]ಕೃತಸ್ಸಂತಾನ[3]ಸ್ಸಫಲಮಸ್ತು ತವ ನೃಪತೇ।
ಅವಿರತಮನನ್ತನಾಮ್ನಾ ಪ್ರೇಮರಸೋದ್ಭಾವಿತೀರ್ಥಕೃತಃ ॥

ವ॥ ಎಂದಾಶೀರ್ವಚನಪುರಸ್ಸರಂ ಸಿದ್ಧಶೇಷಾಕ್ಷತಹಸ್ತಪ್ರಶಸ್ತಪ್ರಸ್ತರಣನುಚಿತ ಪ್ರದೇಶದೊಳಿರ್ಪುದುಮಾನಿತಂಬಿನೀ ವಿಯಚ್ಚರಲೋಕದೊಳ್ ಅಚ್ಚರಿಯೆನಿಸಿದುಪಾಯನಸಹಸ್ರಮುಂ ಸಖೀಸಹಸ್ರಂ ಕೆಯ್ಗೆಯೊಳ್ ನೀಡೆ ತಾನೆ ಕಳೆದುಕೊಂಡು ಸಿಂಹಸೇನ ಮಹಾರಾಜಂಗಂ ಜಯಶ್ಯಾಮಾಮಹಾದೇವಿಗನುಪಟಯಿಸುವಾಗಳ್ ಕೆಲದೊಳಿರ್ದ ಮಂತ್ರಿ ಮಹತ್ತರರಾಧರಾಮರಮುಖ್ಯನಸೀ ಮಹಾನುಭಾವೆ[4]ಯಾವಳೀ[4] ಮನೋಹರಿಯ ಪೆಸರೇನೆಂದು ಬೆಸಗೊಳಲೊಡನಾತಂ

ಮದನಮಂಜರಿಯೆಂಬಳೀಕೆ ಭುಜಂಗಸೇನನೃಪೇಂದ್ರನ
ಗ್ಗದ ತನೂಭವೆಯೆಂಬುದುಂ ಕರೆಗಣ್ಮಿ ಕಂಬನಿ ಕಂಠದೊಳ್
ಪುದಿಯೆ ಗದ್ಗದನಾದಮಳ್ಕೆರ್ದೆ ಡಕ್ಕೆವಾಯೆ ನಿಜೇಶನಂ
ಕದಿನಿಳೇಶನ ಕಾಂತೆ ಚೆಚ್ಚರಮು[5]ಟ್ಟು[5] ಬಿಚ್ಚತಮಪ್ಪಿದಳ್ ೪೮

---

1 ಕ (ಅಇ) 2 ಸಮ್ಮುಖ (ಇ) 3 ಕೃತಂಸಂತಾನ (ಇ) ಕೃತಂಸಂತಾನಾಂ (ಕ)
4 ಯಾದ (ಅಇಉ) 5 ರ್ದು (ಅಇ)

ಫಳಭರನಮ್ರಕಮ್ರಲತೆಯಂ ಲತೆ ತೆಂಬಲರಿಂದಮಪ್ಪಿದಂ
ತೆಳಸಿದ ಸೋದರ ಪ್ರಣಯದಿಂ ಲಲಿತಾಂಗಿಯರಪ್ಪಿ ನೀಳ್ದ ತೋಳ್
ಬಳಸಿದುವಿಲ್ಲ ಪೆರ್ಮೊಲೆಗಳಿಂ ನಡುವಂ ನಡುಸೋಂಕಿತಿಲ್ಲ ಮೈ
ಪುಳಕದಿನೊಂದಿತಿಲ್ಲ ಬಗೆಯಿಂ ತೆಗೆದಪ್ಪಿದರೊರ್ವರೊರ್ವರಂ ೪೯

ವ|| ತದನಂತರಂ

ಪಳಯಿಪ ಸರಸೀರುಹದಿಂ
ತಿಳಿಗೊಳದೊಳ್ ತೇಂಕಿಪ ಮುದಶ್ರುಪೂರದೆ ಮನದು
ಚ್ಚಳದಿಂದಕ್ಕನ ಕೇಸಡಿ
ದಳಿರ್ಗೆ ಜಯಶ್ಯಾಮೆ ಪಾದ್ಯಮಂ ಪ್ರಕಟಿಸಿದಳ್ ೫೦

ವ|| ಆಗಳಾ ಪ್ರಣಯಪ್ರವಾಹಿನಿಯೊಳ್ ಮುೞುಂಕಿ ತೇಂಕಾಡುವ ಪಂಕಜಾನನೆಯಂ ಸಿಂಹಸೇನಮಹಾರಾಜನಿಂತೆಂದಂ

ವ್ಯಾಮೋಹಂ ನಿನಗಿನಿತಾ
ಯ್ತಾಮಾನಿನಿ ನಮಗದಾವಳೆಂದನುನಯದಿಂ
ಭೂಮೀಶಂ ಕೇಳೆ ಜಯ
ಶ್ಯಾಮಾವಧು ಕಿಂಚಿದವನತಾನನೆಯಾದಳ್ ೫೧

ಸುೞಿಗೊಂಡೇೞ್ವ ಮುದಶ್ರು ಪಕ್ಷ್ಮಪುಟದೊಳ್ ಬಟ್ಟಾಡೆ ನುಣ್ಮಿಂಚು ಪೆ
ರ್ಮೞೆಯೊಳ್ಪೊಣ್ಮಿದವೋಲಪಾಂಗರುಚಿಗಳ್ತಳ್ಪೊಯ್ಯೆ ಶೋಣಾಬ್ಜದೊಳ್
ಕೆೞೆಗೊಂಡಿಂದುಕಲಾಂಕುರಚ್ಛವಿಯವೋಲ್ ಬಿಂಬೋಷ್ಠಮಿಂಬಾದ ಬೆಂ
ಬೞಿಯೊಳ್ ಮುಂಬಿಡೆ ದಂತಕಾಂತಿ ಬೞಿಕಿಂತೆಂದಳ್ ಮಹೀಕಾಂತನೊಳ್ ೫೨

ವ|| ದೇವ ನೀಮೆನ್ನ ಪರಿಣಯನದಂದು ಬಂದು ಕಂಡ ಕಾಶ್ಮೀರದೇಶಕ್ಕೆ ವಿಶೇಷಮಾದ ಪದ್ಮನಗರದೊಳ್ ಎಮ್ಮ ತಾತಂ ಭುಜಂಗಸೇನಮಹಾರಾ[1]ಜನೀ[1]ಮದನಮಂಜರೀಮಹಾದೇವಿಯನೆನ್ನಿಮ್ಮನ್ನೆ ಪಡೆದಣುಗಿನೊಳ್ ಕೊಂಡಾಡೆ ನಡಯಿಸೆ ಶಕುನಸಮಯದಂತೆ [2]ರೂಢಿಸಿ[2] ನಡೆಯಲಱಿಯದೆ ಶೈಶವದೊಳೊರ್ಮೆ ಹರ್ಮ್ಯಾಂಗಣದ ಮರಾಳಕೇಕಿಗಳೊಡನೆ ನಡೆಗಲ್ವಂತೆ ಕಣ್ಗಳಂಗಣಕ್ಕೆ ಮಂಗಳಾಲಂಕರಣಮಾದ ಬಾಲಕೇಳೀವಿಲಾಸದೊಳ್

---

1 ಜಂ ಈ (ಆಇಉ) 2 ರುಡಿಸಿ (ಎ)

ಮದನಮೋಹನಪುತ್ರಿಕೆ ಮುದ್ದಿಂ ದಟ್ಟಡಿಯಿಟ್ಟಪುದೆಂಬ ಚೆ
ಲ್ವಿದಿರ್ಗೊಳುತ್ತಿರೆ [1]ರಾಜಗೃಹಪ್ರಾಸಾದಮಣಿ[1] ಪ್ರಘಣಾಂತರಾ
ಳದೊಳಗಾಡುವ ಬಾಲಕಿಯಂ ವಿದ್ಯಾಧರನುತ್ಪಲಚೂಡನೆಂ
ಬದಟನುದ್ಧತಯಾನವಿಮಾನಂ ಕಂಡು ಮನೋಜವಿಮೋಹದಿಂ ೫೩

ನಡೆವ ಬಯಲ್ದಾವರೆಯುಂ
ನುಡಿವಂಗಣಕುಮುದಕುಸುಮಮುಂ ಕಂಡಳಿಗಳ್
ಬಿಡದೆಱಗುವಂತಿರೆಱಗಿದ
ಕಡೆಗಣ್ಗಳ ಕಾಂತಿಯಿಂದೆ ತೆಗೆದಂ ಖಚರಂ ೫೪

ವ॥ ತೆಗೆದು ಗಗನಲತಾಕುಸುಮದಂತಿರೆಸೆವ ಪುಷ್ಪಕದೊಳ್ ನಿಜಪರ್ಯಂಕ ಮಂಡಳಕ್ಕೆ ಮಂಡನಂ ಮಾಡಿ ಬಾಲಕಿಯಂ ಸಮ್ಮೋಹಿನೀವಿದ್ಯಾಪ್ರಭಾವದಿಂ ಮೋಹಿಸೆ ತಾತ ಮಾತೃಜನಂ ಕೇಳಿ ಶೋಕಾಪನೋದವಾದನಮನೇನಾನುಮಂ ನುಡಿದು ನಿಜ ನಿವಾಸಕ್ಕೊಯ್ದು ತುಹಿನಕರಕಳೆಯಂ ಬಳಯಿಸುವ ಗಗನವಲ್ಲಭನಂತೆ ಕಳಾಕಳಾಪ ದೊಳಂ ವಿದ್ಯಾಧರವಿಳಾಸದೊಳವೊಡನೊಡನೆ [2]ಬಳಸೆ[2] ಬೞೆಯಮುಳವಿಗೞೆದ ತಾರುಣ್ಯ ರಾಗದಿಂ ಬಣ್ಣಿಸಿದಂತೆ ಲಾವಣ್ಯರಸದಿಂ ನುಣ್ಣಿಸಿದಂತೆ ಮಂದಗಮನೆಯ ಸೌಂದರ್ಯ ಮಾಶ್ಚರ್ಯಮನಳಂಕೆಗೊಳಿಸೆ

ಅಯಶಂ ಮಾತೃಪಿತೃದ್ವಯಂ ಕುಡದೆಯುಂ ಕೊಂಡಂದು ಮತ್ಖೇಚರಾ
ನ್ವಯಮಂ ಪೊರ್ದುಗುಮೆಂದು ಪದ್ಮನಗರಕ್ಕೆಯ್ತಂ[3]ದು ತಾತಂಗೆ ವಿ
ಸ್ಮಯಮಪ್ಪಂತಿರೆ ರೂಪುವಿಭ್ರಮವಿಲಾಸಾಶ್ಚರ್ಯಮಂ [3]ತೋಱಿ ಕ
ನ್ನೆಯನಾ ಖೇಚರನೊಳ್ ಭವಚ್ಛ್ವಶುರನತ್ಯುತ್ಸಾಹದೊಳ್ [4]ಕೂ[4]ಡಿದಂ ೫೫

ಎಂದೀಕೆಯ ವೃತ್ತಾಂತಮ
ನಂದಾಂ ಕೇಳ್ವೆಂ ಮದೀಯಪುಣ್ಯಫಲಂಗಳ್
ತಂದೆಮ್ಮಂ ಕಾಣಿಸಿದವೊ
ಲಿಂದೀಗಳ್ ಕಂಡೆನೀ ಚಕೋರೇಕ್ಷಣೆಯಂ ೫೬

---

1 ಬಪ್ಪನಭಾಸ್ವದ್ರಾಗೃಹ (ಎ) 2 ಬಳಯಿಸೆ (ಉ) 3 ಕ್ಕೈತಂ (ಅಇಉ)
4 ಮಾ (ಎ)

ವ॥ ಎಂಬುದುಮಿಳಾಕಾಂತನತ್ಯಂತ ವಿಸ್ಮಯಸ್ವಾಂತನಾಗಿ ನಿಜಮನೋವಲ್ಲಭೆಯೊಳೊದವಿದೌತ್ಸುಕ್ಯಸಂಕಟಮನಾನುಕೂಲ್ಯದಿನಗಲೆದೆಗೆದು ಮದನಮಂಜರಿಯಂ ಕೆಳಕ್ಕೆದೆಗೆದು ಇಷ್ಟಶರ್ಮರಂ ವಿಶಿಷ್ಟಾಸನದೊಳಿರಿಸಿ ಪರಿಚಿತೋಪಚಾರಚಾತುರ್ಯವಚನ ರಚನೆಗಳಿನಾ ಚಕೋರಲೋಚನೆಯನನುನಯಿಸುತ್ತುಂ ಓಲಗಮಂ ಪರೆಯಲ್ವೇಟ್ಟು ಗೃಹಮಹತ್ತರಾನ್ತರ್ವಂಶಿಕನರ್ಮಸಚಿವಹಿತಪುರೋಹಿತಸೌವಿದಲ್ಲ ರಾಜವಲ್ಲಭಪರಿಮಿತಪರಿಜನ ಪುರಜನಪರೀತನಾಗಿ ಬಱಿಯಮಿಂತೆಂದಂ

ಧರಣೀಭರ್ತೃ ಭುಜಂಗಸೇನನವನೀಸಾಮ್ರಾಜ್ಯಮಂ ಕೀರ್ತಿಶೇ
ಖರನೊಳ್[1]ನೆ[1]ರ್ಮಿಸಿ ಪೆರ್ಮೆಯಂ ಪಡೆದುದಂ ಮುಂ ಕೇಳ್ದೆವಿಂದೆಮ್ಮ ದೇ
ವರನೇಂ ಕ್ಷೇಮದೊಳಿರ್ದನೇ ಕುಶಲಮೇ ತದ್ವಲ್ಲಭಂಗಂ ಭವ
ದ್ಗುರುಪಾದಾಬ್ಜ ಪರಾಗರೇಣುತಿಲಕಂ ತದ್ರಾಜ್ಯಮೇಂ ಪೂಜ್ಯಮೇ ೫೭

ವ॥ ಎಂದು ಭಾವಂ ನಿಜಪ್ರಭಾವಸಂಭಾವಿತನಮ್ರಕಮ್ರಾಮ್ರೇಡಿತಮಂ ಮೆಱೆಯಲೊಡನಾ ಮೃದುಮಧುರಭಾಷಿಣಿ

ದೇವರ ನಣ್ಪಿನಿಂ ನಿಜವಿಳಾಸನಶಾಸನರಾಜ್ಯವೈಭವಂ
ದೇವರ ಪೆಂಪಿನಿಂದೆ ಗುರುವಾ[2]ರ್ಥ[2]ಕರಾಜವಿಲಾಸಗೌರವಂ
ದೇವರ ತೇಜದಿಂದೆ ಮದಧೀಶವಿಲಾಸಮನೂನವಿನಾಗಳಿಂ
ದೇವರ ಮಿತ್ರನಂತೆಸೆವುದುನ್ನತಿವೆತ್ತ ಕುಳಂ ನಿರಾಕುಳಂ ೫೮

ವ॥ ಎಂದು ಮತ್ತಮಿಂತೆಂದಳೊಂದುದಿವಸಂ ವಿನೇಯವೃಂದಮನಾನಂದರಸದಿನೋಕುಳಿಯಾಡಿಸಲ್ಬಂದ ಬಸಂತದ ನಂದೀಶ್ವರಾಷ್ಟಮಿಯೊಳ್ ವಿಶಿಷ್ಟಾಷ್ಟಮಂಗಳಪುರೋವರ್ತಿ ಕೀರ್ತಿಶೇಖರಮಹೀವಲ್ಲಭಂ ಮದೀಯವಲ್ಲಭಸಮೇತಮಾಂ ಬೆರಸು ಪೂರ್ವವಿದೇಹಾಗತಚಾರಣಮುನೀಂದ್ರವೃಂದಾರಕರ ತಪಃ ಫಲಾವಳಿನಿರ್ಗಳಿತ ಶಾಂತರಸಪ್ರವಾಹವಿತಾನ ನಿಜಲತಾಪ್ರತಾನ ನಾನಾಖಗಮೃಗವಿಶಿಷ್ಟಮಾಗಿ ವಿಷ್ಟಪತ್ರಿತಯಾಗ್ರಲಕ್ಷ್ಮೀಕೇಳೀಶಿಖರದಂತೆ ಭುವನಶೇಖರಮಾದ ಕುರುವಿಂದಮೆಂಬ ಗಿರಿವರಕ್ಕೆ

ಭುವನೈಕಾರಾಧ್ಯರಂ ಪೂಜಿಸುವೆಸಕದೆ ಪೋ[3]ತಂ[3]ದು ಮಾಂಗಲ್ಯಪೂಜೋ
ತ್ಸವದಿಂದಂ ಭಾವನುಂ ಮೈದುನನುಮೆಸೆಯೆ ಕಲ್ಯಾಣಮಂ ಮಾಡಿ ಧರ್ಮ
ಶ್ರವಣಾನಂತರ್ಯ[4]ಕಾರ್ಯಂ ಮನ[4]ದೊಳಿರೆ ಜಯಶ್ಯಾಮಗಿನ್ನಾತ್ಮಜಾತೋ
ದ್ಭವಮೆಂದಕ್ಕುಂ ನಮೋ[5]ಸ್ತು[5] ಬೆಸಸಿಮೆನೆ ಮುನಿಶ್ರೇಷ್ಠರಿಂತೆಂದು ಪೇಳ್ದರ್ ೫೯

1 ನಿ(ಅಇಉ) 2 ಧಿ(ಅಇ) 3 ದಂ (ಉ) 4 ಕಾರ್ಯಾನುನಯ(ಕ)
5 ಸ್ತುಂ (ಅಇ)

ಪರಮಮುನೀಂದ್ರದಿವ್ಯವಚನಾಮೃತವರ್ಷಮನಾಂ ತೆರಳ್ಚುವಂ
ತಿರೆ ಪವಣಲ್ತದಂ ಘನರಸಾವಹವಾಕ್ಯದಿನಿಷ್ಟಶರ್ಮನಿಂ
ಸುರಿ[1]ಸ[1]ಲೊಡರ್ಚಿ ಬಂದೆನಿವರಿಂದವಧಾರಿಸಿ ಕೇಳ್ಪುದಂತದ
ಚ್ಚರಿ ಸವಣೋ ಅಮೋಘವಯಣೋ ಎನೆ ತಪ್ಪದು ತತ್ಫಲೋದಯಂ ೬೦

ಎಂಬ ಕಳಸ್ವನಸ್ತನಿತಮಾಸ್ಮಿತವಕ್ತ್ರೆಯ ವಕ್ತ್ರಬಿಂಬಕಾ
ದಂಬಿನಿಯಿಂದಮುಚ್ಚಳಿಸಿ ಬೆಚ್ಚರಮಾ ನರನಾಥಯುಗ್ಮಕಾ
ದಂಬಲತಾಮಹೀರುಹಯುಗಂ ನಿಜಬಂದುಜನಾವಳೋಕಮೆಂ
ದೆಂಬ ಕದಂಬಮುಗ್ಧತೆಯನಾಳ್ದುದು ಕಂಟಕ[2]ಫುಲ್ಲಪುಂಜದಿಂ[2] ೬೧

[3]ವ|| ತದನಂತರಂ[3]

ಪಿರಿದೊಂದಾದರದಿಂ ನನಾಂದೃಪರಿವಾರಸ್ತ್ರೀವಯಸ್ಯೋರ್ವರಾ
ಮರರಂ ಮಜ್ಜನಭೋಜನಚ್ಛದನಭೂಷಾಲೇಪಮಾಲಾಪರಂ
ಪರೆಯಿಂ ಮನ್ನಿಸಿ ಮುನ್ನೆ ತೀರ್ಚಿ ಗಗನಾಧ್ವಶ್ರಾಂತಿಯಂ ತತ್ಕಥಾಂ
ತರಮಂ ಕೇಳಲೊಡರ್ಚಿದಂ ಬಟುಕಮಾ ಸಾಹಿತ್ಯರತ್ನಾಕರಂ ೬೨

## ಗದ್ಯ

ಇದು ಪರಮಜಿನಸಮಯವನವಸಂತಸಂತಾನಾರಾಮರಾಮಚಂದ್ರ
ಮುನೀಂದ್ರಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂ
ತಃಕರಣ ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾ
ರ್ದನದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್
ಸಿಂಹಸೇನ ಮಹಾರಾಜರಾಜ್ಯೋತ್ಸವವರ್ಣನಂ
ದ್ವಿತೀಯಾಶ್ವಾಸಂ

---

1 ಯ (ಅಇ) 2 ರೋಮಹರ್ಷಮಂ (ಎ) 3 (ಉ) ಪ್ರತಿಯಲ್ಲಿ ಮಾತ್ರ.

# ತೃತೀಯಾಶ್ವಾಸಂ

ಶ್ರೀ ವನಿತೆವೊಲ್ ಜಯಶ್ಯಾ
ಮಾವಧುವಿರ[1]ಲ್[1] ಸಖಿ ಮದನಮಂಜರಿ ಸಹಿತಂ
[2]ಸೌ[2]ವಸ್ತಿಕ ಕಥನ ಸುಧಾ
ಸೇವೆಯೊಳಿರ್ದಂ ವಿನೇಯಜನಮುಖತಿಲಕಂ ೧

ವ|| ಆಗಳಾ ಧರಾಮರಮುಖ್ಯಂ ಧರಾಪಾಳಕಚೂಡಾಮಣಿಗಿಂತೆಂದಂ

ಪ್ರಜ್ಞಾರ್ಗನುಮಂ ಲೋ
ಕಜ್ಞಾರ್ಗಜ[6]ವನಿತನುಸಿರ್ವುದೆಗ್ಗೆನೆ ನಿಮಗಾಂ
ತ್ರಿಜ್ಞಾನಧರರ್ಗೆ ಕತೆವೇ
ಳ್ವಿಜ್ಞತೆ ಸೂರ್ಯಂಗೆ ಸೊಡರನಿಡುವಂತೆ ವಲಂ ೨

ವ|| ಆದೊಡಂ
ಸಂಧಾನಿತ ಗುರುಭಾಷಾ
ಸಿಂಧು ಸುಧಾಪಾನ [3]ಸಮ್ಮದೋನ್ಮತ್ತ[3]ಮನೋ
ಬಂಧುಜನವ್ಯಾಮೋಹನಿ
ಬಂಧನ[4]ಮನು[4]ವಿಷೆ ನೃಪೇಂದ್ರ ಬಿನ್ನವಿಸಿದಪೆಂ ೩

ವ|| ಎಂದು ಬಿನ್ನವಿಸಿ ಸಿಂಹಸೇನಮಹಾರಾಜ[5]ನೊಳಾಭಿಮುಖ್ಯ[5]ತೆಯಂ ಪಡೆದು ಪೇೞಲುದ್ಯುಕ್ತನಾದನದೆಂತೆಂದೊಡೆ

ಅದು ಜಂಬೂದ್ವೀಪಮಂಭೋಧಿಯ ಪೊಱತ[6]ಱ[6]ದೊಳ್ ಧಾತಕೀಷಂಡಮಿರ್ದ
ಪ್ಪುದು ಕಾಳೋದಾಬ್ಧಿ ತನ್ನಂ ಬಳಸಿ ಪಡುವಲುಂ ಮೂಡಲುಂ ಮಂದರಂ ಮ
ತ್ತದಱೊಳ್ ನಿಂದಿರ್ಪುವಾ ಮಂದರವೆರಡಱೊಳೈಂದ್ರೀದಿಶಾಮಂದರಕ್ಕಿ
ರ್ಪುದುದೀಚೀಭಾಗಮುಖ್ಯಂ ಬಹುಜನಪದಸಂಸಖ್ಯಮೈರಾವತಾಖ್ಯಂ ೪

---

1 ಲು (ಇ) 2 ಸಾ (ಅಇ) 3 ಸಮ್ಮದದೆ ಮತ್ತ (ಅ) ಸಮ್ಮದದೊಳ್ ಮತ್ತ (ಇಉ) 4 ವಸಿ (ಎ) 5 ನೊಳಭಿಷೇಕಮುಖ್ಯಂ (ಕ) 6 ಟ (ಎ)

ವಿಜಯಾರ್ಧಾಚಲಕ[1]ಕ್ಷೆ[1] ವರ್ಷಧರವಂಶವ್ಯಂಸಕುಂಭಸ್ಥಳಂ
ಗಜದಂತಾಯತದಂಡಯುಗಳಂ ನಾನಾನದೀಪೂರದಾ
ನಜಲಂ ದೇಶವಿಶಿಷ್ಟಪುಷ್ಟಪೃಥುಲಾಂಗಂ ತೋಱಿ ಬೇಱೊಂದು ದಿ
ಗ್ಗಜಮೈರಾವತಮುಂಟು ಜಂಭರಿಪುಗೆಂಬಂತಿರ್ಪುದೈರಾವತಂ ೫

ಅದಱೊಳ್ ಮೆಱೆವಾರ್ಯಾಖಂ
ಡದ ಮಧ್ಯದೊಳಖಿಲಸುಖದ ಕಣಿ ಚಾಗದ ಭೋ
ಗದ ನೆಲೆ ಪೆಂಪಿನ ಸೊಂಪಿನ
ಸದನಂ ಮೆಱೆದತ್ತು ಕೋಸಲಂ ಪೇಶಲದೊಳ್ ೬

ತೆಮರೆಲ್ಲಂ ಜೈನರಾಜಾಯತನಮೆ ಕುೞಿಯೆಲ್ಲಂ ನವಾಂಭೋಜನೀಷಂ
ಡಮೆ ಪೌರೋದ್ಯಾನಮೆಲ್ಲಂ ಸುರಕುಜಮೆ ತಱಿಂಬೆಲ್ಲಮುತ್ಕೀರ್ಣಕೇದಾ
ರಮೆ ಕಾಡೆಲ್ಲಂ ಮದೇಭಕರಮೆ ಹನು[2]ದರೆ[2]ಲ್ಲಂ ಕನಚ್ಚೋಚಮೋಚೌ
ಘಮೆ ಬೆಟ್ಟೆಲ್ಲಂ ಮಣಿಪ್ರಾಕಟಖನಿಯೆ ಗಡಾ ದೇಶಮಾಶ್ಚರ್ಯಕೋಶಂ ೭

ಅಲರ್ಗಣೆ ಪುಷ್ಪವಾಟಿಕುಲಮೊಳ್ ಬಳೆದಪ್ಪುವು ಮೀನಕೇತುಗಳ್
ಜಲರುಹಷಂಡದೊಳ್ ಮೆಱೆವುತಿರ್ದಪುವಿಕ್ಷುವ[3]ನಂ[3]ಗಳಲ್ಲಿ ಬಿ
ಲ್ಗೊಲೆಗೆ [4]ಬ[4]ರುತ್ತುಮಿರ್ದಪುದು ಕಾದಪನೆಂದು ಬಸಂತನೆತ್ತಲುಂ
ತೊಲಗದೆ ನಿಂದನಂಗಭವನಾಜ್ಞೆಯೊಳಾವಿಷಯಾಂತರಾಳದೊಳ್ ೮

ಇಲ್ಲಿ ಮರಾಳಮಿಲ್ಲದ ಕೊಳಂ ಕೊಳನಿಲ್ಲದ ಪಾಣಿ ಪಾ[5]ಣಿ[5] ಪಾ
ಡಿಲ್ಲದ ತುಂಬಿ ತುಂಬಿಗಳ ಗೊಂದಣಮಿಲ್ಲದ ಪೂನಲರ್ದ ಪೂ
ವಿಲ್ಲದ ಮಲ್ಲಿಕಾಲತಿಕೆ ಮಲ್ಲಿಗೆಯಿಲ್ಲದ ಮಾವು ಬಂದ ಮಾ
ವಿಲ್ಲದ ನಂದನಂ ಕುಳಿರ್ವ ನಂದನಮಿಲ್ಲದ ಜಾತಿಜಾಂಗಳಂ ೯

ತೆನೆ[6]ಪಾ[6]ಲೇಱಿದ ಶಾಲಿಗಂಪುಗಡಲೊಳ್ ಮುೞ್ಗಾಡಿ ಮುೞ್ಗಾಡಿ ಕೌಂ
ಗಿನ ಪೊಂಬಾೞಿಯನ[7]ಟ್ಟೆ[7]ಗಂಪುಗಡಲೊಳ್ ಚುಳ್ಕಾಡಿ ಚುಳ್ಕಾಡಿ ಮಾ
ವಿನರಲ್ಗೊಂಚಲ ತೆಳ್ಪೆಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪ
ದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗ[8]ಳೆ[8]ಗುಂ ಕಾಸಾರತೀರಂಗಳೊಳ್ ೧೦

---

1 ಕ್ಷೆ (ಅಇ) ಕ್ಷ (ಎ)   2 ಮವೆ (ಎ)   3 ಙಂ (ಅಇಉ)
4 ವ (ಅಇ) 5 ಡು (ಅ) 6 ವಾ (ಅಇಎ) 7 ಟ್ಟ (ಅಇಎ) 8 ೞ (ಅಇ)

ವ || ಅಂತು ಸಕಲ[1]ಜ[1]ನಮನೋನಯನಾನಂದಕರಮಾದ ನಗರಗ್ರಾಮಸೀಮಾಪ್ರತಿಬದ್ಧಮಪ್ಪ ನಂದನವನಪ್ರದೇಶದೊಳ್

ಎಳಲತೆ ಪೆರ್ಕ್ಕಣಕ್ಕೆ ತಳಿರಂ ತೆಗೆದುಟ್ಟ[2]ಳದಕ್ಕೆ ನೆ[2]ಟ್ಟನಂ
ಮುಳಯು ಸಮೀರಣಂ ಪನಸರಂಗ[3]ದೊ[3]ಳಿಂತಿವೆ [4]ಪ[4]ಣ್ಣಿ ಬಂದಮು
ದ್ದಳಿ ಮಧುದೂತಿ ನಾಗಲತೆ ಮಲ್ಲಿಗೆ ಮಾಲತಿ ಬನ್ನಿಮೆಂದು ಸೂ
ಟ್ಟಿಳನವೊಲೆತ್ತಲುಂ ಕರೆಗುಮಾ ಬನದೊಳ್ ಕಿಸುಗಣ್ಣೆ ಕೋಕಿಲಂ ೧೧

ವ|| ಮತ್ತಮಾ ಜನಪದಂ ಜನಾರ್ದನನಂತೆ ವನಮಾಲಾವಿಲಂಬಿತಮಾಗಿಯುಂ ನಿರಂತರಮಧುಮದೋದ್ಧತವೃತ್ತಮುಂ ಚಂದ್ರನಂತೆ ಸಕಲಸಸ್ಯಸಂಪತ್ಕರಮಾಗಿಯುಂ ಅಪಗತದೋಷಾನಿವೇಶಮುಂ ಇಂದ್ರನಂತಿರಧಿಗತಸುಧರ್ಮಮಾಗಿಯುಂ ಕುಲಗೋತ್ರಾನುಬಂಧಸಮೃದ್ಧಮುಂ ವಿಯತ್ತಳದಂತೆ ನಾನಾಗ್ರಹಾರಶೋಭಿತಮಾಗಿಯುಂ ಅತಿವಿಪ್ರಕರ ಪ್ರವರ್ತನಮುಂ ಮಾರ್ತಂಡನಂತನಂತಗೋಮಂಡಲಮಂಡಿತಮಾಗಿಯುಮನಸ್ತಮಿತ ಪ್ರಭಾವಮುಂ ಸಮುದ್ರದಂತೆ ರಾಜಪ್ರಸಾದಪ್ರವರ್ಧಿತಮಾಗಿಯುಂ ಅನ್ಯವಾಹಿನೀಸಂಭೇದರಹಿತಮುಂ ಸ್ವರ್ಗಲೋಕದಂತೆ ಸಂಭೃತಾಪ್ಸರಸರೋವರವಿಳಾಸಮಾಗಿಯುಂ ಪೂರ್ವದೇವಾಯತನಸಮಾಕುಳಮುಂ ಭಾರತದಂತೆ ಧರ್ಮಜಾತಾರ್ಜುನಯಶಃಪೂರ್ಣಮಾಗಿಯುಂ ದೂರೀಕೃತಭೀಮದುಶ್ಶಾಸನವಿರೋಧಮುಂ ರಾಮಾಯಣದಂತೆ ಸೀತಾನುಕೂಲಫಲಭೋಗಭೂಮಿಯಾಗಿಯುಂ ವರ್ಧಿತದಶಾನನಶ್ರೀವಿಡಂಬಮುಮೆನಿಸಿ ಮತ್ತಮವಿರುದ್ಧವರ್ಣನಾಳಂಕಾರಮಾದು[5]ದ[5]ಲ್ಲಿ

ಪುರಮುರ್ವೀಮಣಿನೂಪುರಂ ಜನಪದಶ್ರೀವಕ್ತ್ರಬಿಂಬಕ್ಷಪಾ
ಕರನಂತಿರ್ಪುದು ಲಕ್ಷ್ಮಪಕ್ಷ್ಮಪಟಲಭ್ರೂವಲ್ಲರೀಕುಂತಳೋ
ತ್ಕರಶೋಭಾವಹಸೋಮಸೂರ್ಯಸರಣೀವೇಲ್ಲಗ್ನಮಾಲಾಪುರಂ
ದರನೀಲೋತ್ಪಲರಮ್ಯಹರ್ಮ್ಯಧವಳಾಗಾರಾಂಶು ರಾರಾಜಿ[6]ಕುಂ[6] ೧೨

ಉರಗ ನರ ಖಚರ ಕಿನ್ನರ
ಸುರವರ ಪುರನಿಕರ ಶೋಭೆಗಂ ಭುವನಶುಭೇ
ತರತತಿಗಮರಿಷ್ಟಮನಾ
ಚರಿಪುದರಿನರಿಷ್ಟನೆಸರಿನೆಸೆವುದು ನಗರಂ ೧೩

1 ಜಿ (ಅ) 2 ಟ್ಟು (ಉ) 3 ಳೊ (ಅಇಉ) 4 ಬ(ಅಇಉ)
೫ ವ (ಅಇ) 6 ತಂ (ಉಎ)

ಜಿನಚೈತ್ಯಾರಾಜಿರಾಜಾಲಯಮುಖವಿಭವದ್ವೀಚಿಕಾಬಾಹುಶಾಖಾ
ಭಿನಯೋದ್ಯತ್ಪೌರಲಕ್ಷ್ಮೀರಮಣಿಯ ಕಟಿಸೂತ್ರಂ ವಿಚಿತ್ರಾಂಬರಂ ತಾ
ನೆನೆ ರತ್ನಾಟ್ಟಾಳ[1]ಶಾಲಾ[1]ವಳಿ ಮೆಱೆವ ಮದಿಲ್ ಸಾರಸಾಂಭೋಜಿನೀ ಜೀ
ವನನೀಲೀವರ್ಣಸಾಮ್ಯಂ ಮೆಱೆವ ಪರಿಖೆ ಲೋಕಾವಲೋಕಾಭಿರಾಮಂ ೧೪

ಪುರಲಕ್ಷ್ಮೀಹರಿತೋತ್ತರಂಗರುಚಿರೋದ್ಯಾನಂಗಳೊಳ್ ಕೂಡುವೋ
ಪರ ಕಂಠಧ್ವನಿಗಳ್ ಶ್ರವಸ್ಸುಭಗಮಾಗೆಯ್ತಂದು ತತ್ತತ್ಪುರೀ
ಸರವೇಲ್ಲದ್ಗರುಡೀಶ್ರಮಾನುಗತಿವೇಗಂ ಲಾಗದೊಳ್ ತಪ್ಪೆ ತ
ದ್ಗುರುಹಸ್ತಶ್ರಮದಂಡಚಂಡಪತಿಯಂತಕ್ಕುಂ ಕುಮಾರರ್ಕಳೊಳ್ ೧೫

ಸುೞಿವ ತುರಂಗವಾಹಳಿಯ ಪೂವಲಿಯೊಳ್ ಪೊರೆದಂಕದಾನೆಯು
ಗ್ಗೞಿಯ ಮದಾಂಬುಕರ್ದಮದೊಳ್[2]ದುರ್[2] ಬನಂಗಳೊಳಿಂಬುವೆತ್ತ ತ
ಣ್ಬುೞಿಲೊಳಗೊಲ್ದು ಕೂಡುವಿನಿಯರ್ಗೆ ತೆರಳ್ಚಿದ ಕಂಪು ತಣ್ಪು ಪೊಂ
ಪುೞಿಯನಲರ್ಚೆ ತೀಡುವುದು ತತ್ಪುರಬಾಹಿರಮಂದಮಾರುತಂ ೧೬

ನಯನೋನ್ಮಾದಮನೀಯೆ ನುಣ್ಬರಿಜುಗಳ್ ಕಣ್ಬೇಟದಿಂ ದ್ವಾರಶಾ
ಖೆಯ ಕಾಳಾಗರುಧೂಪಧೂಮವಿಸರದ್ಭೃಂಗೀನಿಸೃಷ್ಟಾರ್ಥದೂ
ತಿಯರಂ ಸೃಷ್ಟಿಸುತಿರ್ಪುದಾ ಪುರದ ಸೂತ್ರಕ್ಷೇತ್ರದೊಳ್ ಕೇರಿಕೇ
ರಿಯ ಸೌಧೋತ್ತರಭೂಮಿಕಾಪ್ರಕರಬಿಭ್ರತ್ಪುತ್ರಿಕಾವಿಭ್ರಮಂ ೧೭

ತರುಣಿಯರಂಗಕಾಂತಿಗಳ ಕೂಡೆ [3]ಕವಲ್ವರಿದೊಳ್ಕಿ[3] ಸೂಸುವಾ
ಭರಣಮರೀಚಿಕಾಲಹರಿಗಂ ಮೃಗನಾಭಿಲತಾಂತಚಂದನಾ
ಗರುಘನಸಾರಸೌರಭತರಂಗಿಣಿಗಂ ಪೊಳೆದ[4]ರ್ದಿ[4]ದಂತೆ ಪೊಲ್
ಪರಿವುದು ಹಾರಿಗೊಂಡ ಧವಳಾರದ ಕೇರಿಯ ಬೀದಿಬೀದಿಗಳ್ ೧೮

ಆ ಪುರಮನಾಳ್ವನುದ್ಗತ
ಗೋಪುರಮಂ ವಿಜಿತಶಕ್ರಧನಪತಿವರುಣ
ತ್ರೈಪುರಮಂ ಧರಣೀಮಣಿ
ನೂಪುರಮಂ ಧೃತಮನೋರಥಂ ಪದ್ಮರಥಂ ೧೯

---

1 ಶಾಖಾ (ಅಇಉ) 2 ಱ್ದು (ಉ) 3 ಕಡಲ್ಪರಿದಳ್ಕಿ (ಅಇಎ)
4 ಱ್ದಿ (ಉ)

ಧರೆಯಂ ದಕ್ಷಿಣಬಾಹುಮೂಲಮೃಗನಾಭೀಕರ್ದಮ ಶ್ರೀ ಸಹೋ
ದರಿಯಂ ಮಾಡಿದನಗ್ರನೇಮಿಶತಚೂರ್ಣೀಭೂತವೀರಾರಿಭೂ
ವರನುದ್ಗತ್ರಯಪಾದಮಾರ್ಗಜಲಮಾರ್ಗಾಸೇತುದಂಡಪ್ರಚಂ
ಡರಥಂ ಪದ್ಮರಥಂ ಯಶಸ್ಥಗಿತದಿಗ್ವಾರಾಶಿ[1]ತಾ[1]ರಾಪಥಂ ೨೦

ಮನುಚರಿತಕ್ಕೆ ವೃತ್ತಿ ನೃಪನೀತಿಗೆ ಪಂಚಿಕೆ ಲೌಕಿಕಪ್ರವ
ರ್ತನೆಗಳ ವಾರ್ತಿಕಂ ರಿಪುಷಡನ್ವಯರೋದದ ಟಿಪ್ಪಣಂ ಧರಾ
ವನಗುಣದೊಂದು ಟೀಕು ಪರಮಾರ್ಥವಿವೇಕದ ಭಾಗ್ಯಮೆಂದೊಡಾ
ಜನಪತಿರತ್ನಶೇಖರನ ರಾಜಗುಣಂ ಬುಧಸೇವ್ಯಮೆನ್ನಿರೇ ೨೧

ಧನದಾರಾಪ್ಲವಮಂ ವಿರೋಧಿನೃಪಕೋಟಾಕೂಪದಿಂ ಮಂತ್ರಯಂ
ತ್ರನಿಬದ್ಧಪ್ರಭುಶಕ್ತಿಸಂಭೃತಘಟೀಸಂದೋಹದಿಂ ತೋಡಿ ತೋ
ಡಿ ನಮತ್ಪಾರ್ಥಿವಮೌ[2]ಲಿ[2]ಭೃತ್ಯಸುಹೃದಾಪ್ತಾ[3]ನೀ[3]ಕ ಸತ್ಪಾತ್ರನಂ
ದನಮಂ ವರ್ಧಿಸುತಿರ್ಕುಮಾನೃಪನ ಬಾಹಾಸಾಹಸೌದ್ಯಾನಿಕಂ ೨೨

ಹಾರದ ಕಟ್ಟಳೆ ವಿಜಯ ಯ
ಶೋರಮಣಿಯರಾಗಿ ನೆಲಸೆ ನೃಪನುದ್ಧರಿಸಲ್
ವೀರದ ವಿತರಣದ ಮಹಾ
ಭಾರತುಳಾದಂಡಮಾಯ್ತು ಬಾಹಾದಂಡಂ ೨೩

ಕಾಮನ ಭುಜಬಲಲಕ್ಷ್ಮಿಯೊ
ಕಾಮನ ಭುಜವಿಜಯಲಕ್ಷ್ಮಿಯೋ ಪೇಟಿನೆ ಲ
ಕ್ಷ್ಮೀಮತಿಯೆಂಬಳ್ ಕುಲಮಹಿ
ಷೀಮಂಡನಮಾದಳಾ ಧರಾಧೀಶ್ವರನಾ ೨೪

ತರಳಾಪಾಂಗೆಯ ರೂಪವಿಭ್ರಮವಿಲಾಸಾಶ್ಚರ್ಯಮಂ ನೋಡಿ ತ
ದ್ವಿರಹಾವಸ್ಥೆಯೊಳಂಗಜಂ ಕರಗಿದಂ ದೋಷಾಕರಂ ಕಂದಿದಂ
ಮರವಟ್ಟಂ ಮಧುವಿಂತನಂಗತೆ ಕಳಂಕಿತ್ವಂ ವನಾಸಕ್ತಿ ನಿ
ರ್ನೆರ[4]ಮೇಕಾಯ್ತೆನೆ[4] ತಲ್ಲತಾಂಗಿ ತಳೆದಳ್ ಸೌಶೀಲ್ಯಸೌಭಾಗ್ಯಮಂ ೨೫

---

1 ಪಾ (ಅಇ) 2 ಳಿ (ಅಇ) 3 ನೇ (ಅಇ) 4 ಮಾಯ್ತೇಕೆನೆ (ಅಇಉ)

ತರುಣಿಮೃಗೀವಿಲೋಚನೆ ಮರಾಳಮದಾಲಸಯಾನೆ ಕೇಕಿ ಭಾ
ಸುರಕಚಭಾರೆ ಕೋಕಯುಗಪೀನಪಯೋಧರೆಯಾಕೆ ದೀವಮಾ
ಗಿರೆ ನೃಪನಂತರಂಗವನದೊಳ್ ಸಲೆ ಗೋರಿಗೊಳಿಪ್ಪನುಲ್ಲಸ
ತ್ಕರಣಗಣಂಗಳಂ ಕುಸುಮಸಾಯಕನೆಂಬ ವಿನೋ[1]ದಿ[1]ಲುಬ್ಧಕಂ ೨೬

ತರುಣಾರ್ಕಂ ನೆಲಸಿರ್ದ ಪೂರ್ವಗಿರಿನಾಥಂ ಪ್ರೋತಶೀತಪ್ರಭಾ
ಕರಗೊಪ್ಪಿರ್ದಮೃತಾಬ್ಧಿ ದಾರಕನಮೇರುಪ್ರೀತಿ ಚೆಲ್ವಾದ ಚೈ
ತ್ರರಥಂ ತಾನೆನೆ ಸೂನು ಮೇಘರಥನಿಂ ತಳ್ಪಾದ ನುಣ್ಪಿಂಗೆ ಪ
ದ್ಮರಥಂ ತುಂಗಭುಜಂ ಗಭೀರವಿಭವಂ ಸಂಸಾರಸಾರೋದಯಂ ೨೭

ಸರಸಿಜರತ್ನರಾಗರುಚಿಯಂ ದಿಗಧೀಶಕಿರೀಟಕೋಟಿಯೊಳ್
ವಿರಚಿ[2]ಸಿ[2] ತನ್ನ ತೇಜದೆಸಕಂ ದೆಸೆವೆಣ್ಗಳ ತುಂಗಪೀನ ಪೀ
ವರಕುಚದೊಳ್ ತಳತ್ತಳಿಪ ಮುತ್ತಿನ ಹಾರಮನಿ[3]ಕ್ಕೆ[3] ಕೀರ್ತಿಮಂ
ಜರಿ ನೆಗಟ್ಟಿಂತು ಪದ್ಮರಥನಾಳ್ದ ನಿಳಾತಳರಾಜ್ಯಲೀಲೆಯಂ ೨೮

ಇರೆ ಪರಿಷನ್ಮಂಡಲದೊಳ್
ಹರಿಪೀಠಘಟಿತಸಿಂಹಕಟಿತಟನರಸಂ
ಪರಿವೃತ ಪರಿಮಿತ ಪರಿಜನ
ಪರಿಚಿತಪರಿಹಾಸಸರಸಗೋಷ್ಠಿನಿವಿಷ್ಟಂ ೨೯

ಇದು ತಾಂ ಸ್ವರ್ಗಾಪವರ್ಗಪ್ರಮದೆಯ ಬಟಿ ಸಂಸಾರಸಮ್ಮೋಹವಿಚ್ಛೇ
ದದ ದೂತಂ ವೃತ್ತರತ್ನತ್ರಯಕರಯುಗಸಂಧಾನಸಂದಾಯಕಂ ದಾ
ನದಯೋದ್ಯಾನ ಪ್ರತಾನಪ್ರಬಳವನಪಾಲಂ ದಲೀ ಬಂದನೆಂಬಂ
ದದಿನೊರ್ವಂ ದಿವ್ಯಯೋಗೀಶ್ವರಸಮುದಯ ಸಂವೇದಕಂ ಬಂದನಾಗಳ್ ೩೦

ವ॥ ದೌವಾರಿಕನಿವೇದಿತನಿಜಗಮನನೆಯ್ದೆವಂದು ಕರಕಮಳಕುಟ್ಮಳಘಟಿತನಿಟಿಳಾರ್ಧ ಮೃಗಾಂಕನಖಿಳಮಂಗಳಾಶೀಸ್ತರಂಗಿತಾನನಕುಶೇಶಯನನತಿದೂರದೊಳ್ನಿಂದು ದೇವಾ ಬಿನ್ನಪಮಿಂದು ನಮ್ಮ ವಸಂತಸುಭಗಮೆಂಬ ನಂದನದ ಪರಿಸರಾಗಣ್ಯಪುಣ್ಯಾರಣ್ಯಮಾ ಸನಾಥೀಭೂತಂ ಮಾಟ್ಪಿ ಭೂತಗಿರಿಯ ಭುವನಶಿಖರ ಜಿನಾಲಯದ ಪರಿಸೂತ್ರಸೂತ್ರಿತ ಚೈತ್ರನಂದನ ಮದೀಯನಂದನವನಕ್ಕೆ

---

1 ದ (ಎ) 2 ಸೆ (ಅಇ) 3 ಕ್ಕಿ (ಅಇ)

ಬನಮೆ ಬನಕ್ಕೆ ಬಾವರಿಗೆ ಬಂದವೊಲಾದುದು ತಂಡತಂಡದಿಂ
ಮುನಿಗಳ ಕೆಯ್ಯ ಕುಂಚಣಿಗೆ ಚಾಂದ್ರಮುಸೀದಳಕುಂಡಿಕಾಳಿ ತ
ಜ್ಜಿನಭವನಕ್ಕೆ ದುಗ್ಧನಿಧಿ ಕಟ್ಟಿದ ಪ್ರೊಟ್ಟಣವಾಱಿ[1]ಗ[1]ಟ್ಟಿದ
ತ್ತೆನಿಸಿದುದಿಂದು ಸಾಧುಜನಸಂಗಸಮಾಗಮದ ಪ್ರಪಂಚದೊಳ್ ೩೧

ಅಮೃತಕರನುದಯದೊಳ್ ಬಳೆ
ದಮೃತಾರ್ಣವಲಹರಿಯಿಂದೆ ವೇಳಾವನಮಾ
ಳೆ ಮುಳುಂಕಿದಂತೆ ಬನಮಾ
ಸಮುದಾಯದ ಶಾಂತರಸದೆ ಮುಳುಕಿದುದರಸಾ ೩೨

ವ॥ ಎಂದು ಬಿನ್ನವಿಸಲೊಡಂ ಆಸನದಿನೆೞ್ದು[2] ತದ್ದಿಶಾಭಿಮುಖಕ್ಕೆ ಜಯಜಯ ನಿನಾದಮುಖರಿತಮುಖನಾಗಿ ಮೂಮೆ ಪ್ರೋ[3]ಡೆಮಟ್ಟು

ಮುಂದೆ ನೆರೆವಮೃತಲಕ್ಷ್ಮೀ
ಸುಂದರಿಗನುರಾಗದಿಂದೆ ಲಂಚಮನೀವಂ
ತಂದಂಗಚಿತ್ರಮಿತ್ರಂ
ಬಂದ ಮುನೀಶ್ವರರನೞಪಿದಾತಂಗಾತಂ ೩೩

ವರಕಾಂತಾಕರಪದ್ಮಸತ್ರಧೃತ ರತ್ನಾಮತ್ರಪೂಜಾಪರೀ
ಕರನಾಘೂರ್ಣಿತಗೀತವಾದ್ಯಪಟಹಪ್ರಧ್ವಾನನಾದಾತ್ರಿಕಾಂ
ಬರನಾಪದ್ಮರಥಂ ಬೞಿಕ್ಕೆ ತಳರ್ದಂ ಲಕ್ಷ್ಮೀಮತೀದೇವಿ ಮೇ
ಘರಥಂ ಮಂತ್ರಿಮಹತ್ತರರ್ ಮಕುಟಬದ್ಧರ್ ಕೂಡೆ ಬರ್ಪನ್ನೆಗಂ ೩೪

ವ॥ ಅಂತು ಸಭಾಸದನದಿಂ ತಳರ್ದು ವೇದಿಕೋಪಾಂತಮತ್ತವಾರಣಕ್ಕೆ ವಾರಣ ಸಾ[4]ಧ[4]ನಾಧಿಪತಿ ಸಾರ್ಚಿದ ಮತ್ತವಾರಣದ ಪೂರ್ವಾಸನಮನಳಂಕರಿಸಿ

ಯತಯಾತಪ್ರೌಢಿಯಿಂ ಮಿಂಚಿನ ಮೊಗವಡಮುಂ ಬೀಸೆ ಕೂರಂಕುಶಂ ಪ್ರೇ
ರಿತ ಮತ್ತೇಭಕ್ಕೆ ನಾನಾಮಣಿಖಚಿತಕಿರೀಟಪ್ರಭಾಪುಂಜಮುದ್ಯೋ
ತಿತ ಶುಭ್ರೈಕಾತಪತ್ರಕ್ಕೆಸಗೆ ಸುರಧನುರ್ವಲ್ಲರೀಪಟ್ಟಮುಂ ವಿ
ಶ್ರುತಪುಣ್ಯಂ ಪುಣ್ಯಪುಂಜಾಕರಮೆನಿಸಿದ ಭೂತಾದ್ರಿಯಂ ಮು[5]ಟ್ಟಿ[5]ವಂದಂ ೩೫

---

1 ಕ (ಅ೨) 2 ದ್ದು (ಅ೩) 3 ಡೆ (ಅ೩) 4 ದಾ (ಅ೩) 5 ಟ್ಟ(ಅ೩)

ವ || ಅಂತು ಬಂದು ತದ್ವನೋಪಾಂತದೊಳವತೀರ್ಣಪಟ್ಟವರ್ಧನಗಜೇಂ[1]ದ್ರ ಸಾಗಿ[1] ಸಪರ್ಯಾಶ್ಚರ್ಯಪರ್ಯಾಯಧಾರಿಣೀ ವಾರನಾರೀಸಹಸ್ರಪರೀತನಾ ತಪೋವನ ವೀಥಿಯೊಳ್ ನಡೆತರ್ಪಾಗಳ್

ಪುರುಡಿ[2]ಸಿ[2] ಪೋರದೆ ಪೆಣ್ಗಾ
ತುರಿಸದೆ ಪಿಶಿತಕ್ಕೆ ಪರಿದು ಕೊಲ್ಲದೆ ಚೇತಃ
ಪರಿಣಮನಸುಖದೆ ಸುಖಿಪುವು
ಕೇರಿಕೇರಿಯೆನಳೆ ಪುಲ್ಲೆ ಮರೆ ಸಾರಂಗಂ ೩೬

ಕರಿಣಿ ಕರಾಂಗುಳಿಯಿಂ ಕೇ
ಸರಿಯ ಜರತ್ಕೇಸರಂಗಳಂ ತೊಡೆದುದು ಕೇ
ಸರಿಣಿ ಮೊಲೆಯೂಡುತಿರ್ದುದು
ಕರೇಣುಪೋತಕ್ಕನಾತ್ಮಸಂಜಾತಕ್ಕಂ ೩೭

ಪರಮತಪೋನಿಧಿಗಳ್ ಸಂ
ಚರಿಸುವ ಬಟ್ಟೆಯನಗಲ್ದು ನಟ್ಟವಿಸಿಲ್ಗಾ
ಯ್ದುರಗಂ ಪುಡಿಯೊಳ್ ಪೊರಳ
ತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿದುದು ನೆಟಿಲಂ ೩೮

ಅವನತಕರ್ಣೆಯುನ್ನಮಿತಪಕ್ಷ್ಮ ಸಮುದ್ಗತರೋಮಹರ್ಷೆಯು
ದ್ವಿವಳಿತಪುಚ್ಛೆ ಕುಟ್ಮಳಿತಲೋಚನೆ ಜೋಲ್ದು ಮಲಂಗಿ ಮೆಯ್ಯನೊ
ಡ್ಡುವಿನಮತೀಕ್ಷೆಗೂಡಿ ನಖರಾಂಕುರದಿಂ ಶ್ಲಥಕಂ[3]ಠ[3]ಕಾಂಡಕಂ
ಡುವನಪವರ್ತಿಸಿತ್ತು ಪುಲಿ ಪುಲ್ಲೆಗದೊಂದು ಲತಾವಿತಾನದೊಳ್ ೩೯

ವ|| ಅದಲ್ಲದೆಯುಂ

ಎ[4]ಳೆ[4]ವಸಲೆಯ ಮೇಲೆ ಮರ
ಲ್ದೆಳವಿಸಿಲಂ ಕಾಯುತಿರ್ಪ ಫಣಿಗಳ ಫಣಮಂ
ಡಳಮಂ ಮಲಂಗಿ ಮೆಲ್ಪಂ
ತಳೆದುವು ಸುಖಮುಗ್ನನಯನಮುಕುಳಂ ನಕುಳಂ ೪೦

---

1 ಪ್ರ (ಅಇ) ಪ್ರಂ (ಉ) 2 ಸಿ (ಅಇ) 3 ಟ (ಅಇ)
4 ಳ (ಅಇ)

ನೋಡುವ ಕಣ್ಮಲರ್ಗಮೃತಮ
ನೂಡುವ ಮುನಿವದನಶಾಂತಿರಸಪರಿಣತೆಯಂ
ನೋಡಿ ಸುಖಜಲಧಿಯೊಳಗೋ
ಲಾಡಿದ ತೆಱನಾದುದಾ ನೃಪಾಲನ ಹೃದಯಂ ೪೧

ವ || ತದನಂತರಂ

ಮಂದರಮಂ ಬಲಗೊಳ್ವ ಪು
ರಂದರನವೊಲಷ್ಟಮಂಗಳಾನ್ವಿತಮರ್ಹ
ನ್ಮಂದಿರಮನಿಳಾಪತಿ ಬಲ
ವಂದೊಳಗಂ ಪೊಕ್ಕು ನೆಗೞೆ ಗೀತಾತೋದ್ಯಂ ೪೨

ಜಳದಿಂ ಚಂದನದಿಂ ತಂ
ಡುಳದಿಂ ಪೂಮಾಲೆಯಿಂದೆ ಚರುವಿಂ ದೀಪಾ
ವಳಿಯಿಂ ಧೂಪದಿನೊಪ್ಪುವ
ಫಳದಿಂ ತ್ರೈಳೋಕ್ಯನಾಥನಂ ಪೂಜಿಸಿದಂ ೪೩

ವ || ಅಂತು ನಿವೇದಿತಪೂಜಾವಿಧಾನನಾಗಿ

ಜಿನಪತಿ ದೇವದೇವ ನಿಜಸಂಸ್ತವನಾರ್ಚಿತ ಚಿಂತನೈಕಭಾ
ವನೆ ಖಳಕರ್ಮಕಂಚುಕಗಳಂ ಪೆಱಪಿಂಗಿಸಿ ತೋಱಲಿರ್ದ ಸೋ
ವನಮಿದಿರ್ವಂದು ನಿನ್ನ ಪದಪದ್ಧತಿಗಾಣಿಸಿತಂಜೆನಂಜೆನಿ
ನ್ನೆನಗರಿದಿಲ್ಲದೊಂದೆರಡು ಮೂಱು ಭವಂ ಪ್ರತಿಪರ್ವಲಂಘನಂ ೪೪

ವ || ಎಂದು ಸಾಷ್ಟಾಂಗಪ್ರಣಮನಪೂರ್ವದಿಂ ಅಭಿಷ್ಟುತಿಗೆಯ್ದು ಸಿದ್ಧಶೇಷಾಕ್ಷತಸುಗಂಧಿಗಂಧಜಲಪವಿತ್ರೀಭೂತಚೇತಸನಾ[1] ಗಿ[1] ಭೂತಜಿನಾಲಯದಿಂ ಪೊಱಮಟ್ಟು ಗುರುಚರಣಭಕ್ತಿಭಾಮಿನೀನಿರ್ದಿಷ್ಟ ವಿಶಿಷ್ಟಮಾರ್ಗನಾ ಸನ್ಮಾರ್ಗಭೂಷಣಂ ಸ್ವಯಂಪ್ರಭಪ್ರಭುಚಲನನಳಿನೋಪಾಂತಪ್ರದೇಶಮನೆಯ್ದೆವರ್ಪಾಗಳ್

ಕಾರುಣ್ಯದ ಕಣಿಯೆನಿಪ ತ
ಪೋರಮಣರ ನಟ್ಟನಡುವೆ ಭಟ್ಟಾರಕನಾ
ಚಾರದ ಶೀಲಗುಣಂಗಳ
ಚಾರಿತ್ರದ ನಡುವಣಾತ್ಮನಿರ್ಪಂತಿರ್ದಂ ೪೫

1 ಥೀ (ಅಇಉ)

ಬಹುಶಾಖದಶೋಕಾನೋ
ಕಹಮೆಸೆದುದು ಮುನಿಯ ಪೆಱಗೆ ನೆೞಲಾಗೆ ಮನಃ
ಸ್ಪೃಹೆಯಿಂದಷ್ಟಮಹಾ ಪ್ರಾ
ತಿಹಾರ್ಯಮಂ ನೆರೆಯಲೆಂದು ದೂದಟ್ಟಿದವೊಲ್ ೪೬

ಮಾನಸಮೆನಿಸಿದ ಶುಕ್ಲ
ಧ್ಯಾನಂ ಪ್ರತ್ಯಕ್ಷಮಾಗಿ ಠಾನಲ್ಲಿ ಸುಖಾ
ಸೀನತೆವಡೆದವೊಲಿರ್ದಂ
ಮೌನಸುಧಾಸೂತಿ ಮಣಿಶಿಲಾಪಟ್ಟಕದೊಳ್ ೪೭

ಫುಲ್ಲಶರನಂಜಿ ಕರ್ಬಿನ
ಬಿಲ್ಲಂ ತಲೆಚಮರಿವೆರಸು ಬಿಸುಟಂತೆ ತಪೋ
ವಲ್ಲಭನ ಕೆಲದ ವೇತ್ರಲ
ತೋಲ್ಲಸಿತಕಳಾಪಗುಚ್ಛಮೆಸೆದುದು [1]ಕುಂಚಂ[1] ೪೮

ಖಂಡಿಸಿದಂ ಮುನಿ ಸುಮನಃ
ಕಾಂಡನನೆಂದ[2]ಟ್ಕಿ[2] ಮಱಿಗೆವಂದುದು ಹಿಮರು
ಗ್ಮಂಡಳಮೆನೆ ಶಶಿಕಾಂತಕ
ಮಂಡಲು ಪೊಳೆದತ್ತು ಚಳನನಳಿನಾಂತಿಕದೊಳ್ ೪೯

ಪ್ರೀಣನಮಾದುದು ಮುನಿ ಗೀ
ರ್ವಾಣಮುಖಾಂಬುಜಮನಡರ್ದಿರಲ್ ಶೈಶವದೊಳ್
ವಾಣೀವಧು ನಿಱಿಸಿದ ನಿ
ಶ್ರೇಣಿಯವೊಲ್ ಶ್ರುತದ ಠವಣೆ[3]ಕೋ[3]ಲ ವಿಳಾಸಂ ೫೦

ವ॥ ಅಂತುಮಲ್ಲದೆ

ನನೆಯಂಬಂ ಬಿಸುಟಿಕ್ಷುಚಾಪಲತೆಯಂ ಬಾಱಿಱ್ಕೊಂಪದೊಳ್ಸಿಕ್ಕಿ ಕೇ
ತನಮಂ ವಿಶಾಂಗಳದೊಳ್ ಬೆಲಂಗಿ ಮುನಿಪಾದೋಪಾಂತದೊಳ್ ಸಾಧುವೇ
ಷನಿಷಣ್ಣಂ ರತಿಯಂ ಮರಲ್ಚಿ ಕಳೆದಂ ದೌಶ್ಚಿಂತ್ಯಪಾಶ್ಚಾತ್ಯಯಾ
ಯಿನಿಯಂ ಕಿಂಚಿದಪಾಂಗಸಂಸ್ಫುರಿತಸಂಜ್ಞಾಲೋಕದಿಂ ಮನ್ಮಥಂ ೫೧

1 ತುಚ್ಛಂ (ಅಇಉ) 2 ಕ್ಕಿ (ಉ) 3 ಗೋ (ಉ)

ವ॥ ಅಂತು ಸಕಲಜನಮನೋನಯನಕೈರವಾಕಾರಮಂ ಸ್ವಯಂಪ್ರಕಾಶ ಪ್ರಭಾಪಟಲಮೆಸಳ್ ಮಸಗಿಸೆ ನಿಜಂ ಸ್ವಯಂಪ್ರ[1]ಕಾಶಮ[1]ನನಕ್ಷರಮಱಿಪುವಂ ತುಮಿರ್ದ ಮಹಾನುಭಾವನಂ ಸಂಘಟಿತಕರಪಲ್ಲವನುಮವನತಶಿರಸ್ಸರೋಜನುಮಾ ಕುಂಚಿತ ತನುಲತಾವಿಳಾಸನುಮಾಗುತ್ತುಮೆಯ್ದೆವಂದು

ಚರಣಾಭ್ಯರ್ಚನವಂದನಾನುವಿಧಿಪೂರ್ವಂ ಮೊಳ್ಗಿದುರ್ವೀತಳೇ
ಶ್ವರವಕ್ತ್ರೇಂದುವಿನೊಳ್ ನಮೋಸ್ತುಪದದಂತಜ್ಯೋತ್ಸ್ನೆ ಕೈಗಣ್ಮೆ ಶಾಂ
ತರಸಾಪೂರ್ಣಮುನೀಂದ್ರಸಾಂದ್ರಸಮುದಾಯಶ್ಲೇಷಪೀಯೂಷಸಾ
ಗರದೊಳ್ ತಳ್ತುದು ಧರ್ಮವೃದ್ಧಿರವಕಲ್ಲೋಲಾವಳೀಘೂರ್ಣನಂ ೫೨

ವ॥ ಅಂತು ಪರಸಿದ ಪರಕೆಗಳನಾ ಭವ್ಯರತ್ನಾಕರಂ ದಿವ್ಯಾಶೇಷಪ್ರಕ್ಷಮನ್ವಿತಂ ಕೈಕೊಂಡು ಸಮುಚಿತಾಸನದೊಳಿರ್ದನಂತರಮಿಂತೆಂದಂ

ಇದಿರ್ವಂದುದು ನಿಃಶ್ರೇಯಸ
ಪದವೀಫಲಭರನಮೇರುನಂದನಮಾನಿಂ
ದಿದಱಿೊಳ್ ತಣ್ಣನೆ ತಣಿದಂ
ದದಿನಾದೆನಘಾರಿ ನಿನ್ನ ಬರೆ ಕಂಡುದಱಿಂ ೫೩

ವ॥ ಎಂಬ ನಿರವಧಿ [2]ಪ್ರಿಯಃ[2]ಪ್ರೀತಿವಚನಂ ಪುಳಕದೊಳ್ ನನೆತು ಹರ್ಷ ದೊಳರಲ್ದು ಆನಂದಾಶ್ರುಭರದೊಳ್ ತುಱುಂಕಿ ಬಱಿಯಂ ಧರ್ಮಶ್ರವಣಪ್ರಶಂ ಸೋತ್ಕಂಠನಾದ ನೃಪಕಂಠೀರನಂಗೆ

ಮನದೊಳಗಣ ಕಟ್ಟಲೆಯಂ
ಮುನಿನಾಥನ ದಂತಕಾಂತಿಕೌಮುದಿ ಬೆಂಕೊ
ಳ್ವಿನಮಿಂತೆಂದಂ ಮೃದುಮಧು
ರ ನಿಸರ್ಗಗಭೀರ [3]ಧೀರದಿ[3]ವ್ಯೋಕ್ತಿಗ[4]ಳಿಂ[4] ೫೪

ನಿಮಗೇನಶ್ರುತಮೇಂ ಸಸಂಶಯಮೆಲೇ ಭವ್ಯೋತ್ತಮಾ ಶ್ರೀಮದಾ
ಗಮಸಂವಾದಿತ ಜೀವತತ್ತ್ವಸಹಿತಾಸ್ತಿದ್ರವ್ಯತತ್ತ್ವಂ ಪದಾ
ರ್ಥಮೆನಿಪ್ಪಿಂತಿವಱಿೊಳ್ ಸಮಂತು ತಿಳಿವಂತೆಮ್ಮಿಂದ ಮುಂತಾದೊಡ
ಕ್ಕೆ ಮಹೀಕಾಂತ ಮದೀರಿತೋಕ್ತಿ ಗುರುಶಿಷ್ಯತ್ವಕ್ಕಭಿವ್ಯಂಜನಂ ೫೫

---

1 ಭಾಖ್ಯಾನ (ಅಇಉ) 2 ಪ್ರೇಯ (ಅಇಉ) 3 ದಿವ್ಯನ (ಅ)
4 ಳಂ (ಅಇ)

ವ|| ಎಂದು ಬೞಿಯಮಾಪ್ತಾಗಮಪ್ರಮಾಣಮಪ್ಪ ಗೃಹಸ್ಥಯತಿಮಾರ್ಗ ಸೂಚನಾತಾತ್ಪರ್ಯಮನಾ ಪದ್ಮರಥಮಹಾರಾಜನಂ ಸ್ವಯಂಪ್ರಭಮುನೀಶ್ವರರ್ ಕಿಱು ದುದಱೊಳೆ ತಿಳಿವಂತಿರಿಂತೆಂದು ಬೆಸಸಿದರ್

ಪದಿನೆಂಟು ದೋಷದಿಂ ಪಿಂ
ಗಿದನಂತಚತುಷ್ಟಯಾತ್ಮಕಂ ತಾನಾಪ್ತಂ
ವಿದಿತಾಗಮಮಾದೇವನ
ವದನಸುಧಾಸೂತಿ ಕೌಮುದೀವಾಕ್ಪ್ರಸರಂ ೫೬

ಪರಮಾಗಮದೊಳ್ ಸಾಗಾ
ರರ ನೆಲೆ ಪನ್ನೊಂದು ಪನ್ನೆರೞ್ವ್ರತಪದನಗಾ
ರರ ನೆಗೞ್ದ ಗುಣಸ್ಥಾನಂ
ಪರಿಕಿಪೊಡೇೞಲ್ತೆ ದೇಶವಿರತನಿನವಱೊಳ್ ೫೭

ಮೂಱುಂ ಮೂಢತೆಯಂ ನೆಗ
ೞ್ದಾಱುಮನಾಯತನ ಸೇವೆಯಂ ಮದವೆಂಟುಂ
ತೋಱುವ ಶಂಕೆಗಳೆಂಟುಂ
ಪಾಱಿದ ದರ್ಶನಿಕರಮಲದರ್ಶನಶುದ್ಧರ್ ೫೮

ಅಕಲಂಕವ್ರತಮುಳ್ಳೊಡೇನರಿದೆ ಸಮ್ಯಗ್ದರ್ಶನಂ ತನ್ನೊಳು
ಳ್ಳ ಕೃತಾರ್ಥಂ ನರಕಂಬುಗಂ ತಿರಿಕನಾಗಂ ನಾರಿಯಾಗಂ ನಪುಂ
ಸಕನಾಗಂ ಕುಲಹೀನನಾಗನೆಡೆಯಿಂದಲ್ಪಾಯುವಾಗಂ ದರಿ
ದ್ರಕನಾಗಂ ವಿಕಲಾಂಗನಾಗನಿದು ಸಿದ್ಧಂ ನಂಬು ಭೂವಲ್ಲಭಾ ೫೯

ವ್ರತಿಕಂ ಪಂಚಾಣುವ್ರತ
ತತಿ ಕೊಲೆ ಹುಸಿ ಕಳವು ಪಾದರಂ ತೀರದುದ
ಕ್ಕೃತಿಮೋಹಂ ಪಿಂಗೆ ಗುಣ
ವ್ರತಶಿಕ್ಷಾವ್ರತಮನೇೞುಮಂ ತಳೆದಾತಂ ೬೦

ಇನಿತು ಗುಣಂಗಳುಮಂ ದ
ರ್ಶನಶುದ್ಧಿಯನಾಂತು ಮೂಱು ಪೊೞ್ತಿನ ದೇವಾ
ರ್ಚನಮುಂ ಷಟ್ಕರ್ಮಮುಮು
ಳ್ಳನವದ್ಯಂ ಶ್ರಾವಕರ್ಕಳೊಳ್ ಸಾಮಾಯಿಕಂ ೬೧

ವ॥ ಇವು ಮೊದಲಾದ ಗುಣಂಗಳಿಂ ಪ್ರೋಷದಸಚ್ಚಿತ್ತರಾತ್ರಿಭುಕ್ತ ಬ್ರಹ್ಮಚಾರಿ ಆರಂಭ ಪರಿಗ್ರಹ ಅನುಮಾನೋದ್ದಿಷ್ಟದೇಶವಿರತನೆಂಬ ಪನ್ನೊಂದು ನೆಲೆಯ ಶ್ರಾವಕಂಗಂ ಆತನಿಂದಮತ್ತ ಮಹಾವ್ರತಧಾರಿಯಾದ ಮುನಿಪನಾಱನೆಯ ಗುಣಸ್ಥಾನಕ್ಕಂ ಪ್ರಮತ್ತ ನಾದಿಯಾಗಪ್ರಮತ್ತನಪೂರ್ವಕರಣನನಿವೃತ್ತಕರಣಂ ಸೂಕ್ಷ್ಮಸಾಂಪರಾಯಿಕಕ್ಷಪಕನು ಪಶಾಂತಕಷಾಯವೀತರಾಗಚ್ಛದ್ಮಸ್ಥಂ ಕ್ಷೀಣಕಷಾಯಸಂಯತನೆಂಬ ಪನ್ನೆರಡನೆಯ ಗುಣ ಸ್ಥಾನವರ್ತಿಯಪ್ಪ ಮುನಿಪಂಗಂ ಸಕಲದುರಿತತಿಮಿರಪಟಲಮಂ ನಿರ್ಮೂಲಿಸುವ ಸಹಸ್ರ ಕರಪ್ರಭಾವಕರಮಾವುದೆಂದೊಡೆ

ಸಾರಂ ಸಾಗಾರತೆಗನ
ಗಾರತೆಗಾಧಾರಮೆನಿಪ ರತ್ನತ್ರಯಮು
ರ್ವೀರಮಣ ಬೋಧಿದರ್ಶನ
ಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ ೬೨

ವ॥ ಅಂತುಮಲ್ಲದೆ ಸಯೋಗಕೇವಳಿಯಯೋಗಕೇವಳಿಯೆಂಬ ಪದಿಮೂಱುಪದಿ ನಾಲ್ಕನೆಯ ಗುಣಸ್ಥಾನವರ್ತಿಯಪ್ಪ ಭಗವದರ್ಹತ್ಪರಮೇಶ್ವರರ್ಗಂ ರತ್ನತ್ರಯವು ಪ್ರಭಾವಮೆ ಕೈವಲ್ಯಸುಖಸ್ವರೂಪಸಾರಾಂಶಂಗಳದುಕಾರಣದಿಂ

ಧರ್ಮಂ ಧಾರ್ಮಿಕನಿಂದೆ ನಿಲ್ವುದದಱಿಂದಂ ಧಾರ್ಮಿಕಾಗ್ರೇಸರಂ
ಧರ್ಮಂ ನೀಂ ನೃಪ ಬೋಧದರ್ಶನಚರಿತ್ರಾನರ್ಘ್ಯರತ್ನಾಳಿಗಾ
ಧರ್ಮಂ ಮಾಡುವುದಂತರಂಗಬಹಿರಂಗ ಶ್ರೀಯನೆಂದಾ ಮುನೀಂ
ದ್ರರ್ಮಿಥ್ಯಾಮಲಮಂ ಕಲ್ಚಿ ಕಳೆದರ್ ವಾಕ್ಚಂದ್ರಿಕಾ ಪೂರದಿಂ ೬೩

ವ॥ ಅಂತಾ ನರೇಂದ್ರಂ ಮುನೀಂದ್ರಕಾರುಣ್ಯಜಲಧಾರಾಸಾರ ಧರ್ಮಾಮೃತಾಂಬು ಪಾನಪ್ರೀತ ಚೇತಶ್ಚಾತಕನಾಗಿ

ತೀರ್ದುದು ಹೃದಯಕಲಂಕಂ
ಸಾರ್ದುದು ಪುಣ್ಯಾನುಬಂಧಮಕ್ಷಯಸುಖಮುಂ
ಪೊರ್ದಲ್ಕೆ ಪಡೆದೆನೆನಗೆ ಪು
ನರ್ದರ್ಶನಮಕ್ಕೆ ನಾಥ ತಡೆಯದೆ ನಿಮ್ಮೊಳ್ ೬೪

ವ॥ ಎಂದು [1]ಸಾ[1]ಮುದಾಯಕೀಸಭೆಯುಂ ಬಲಗೊಂಡು ಮುಕ್ತಿಕಚಸ್ರಜಮಂ ಕೊಳ್ವಂತೆ ಸಿದ್ಧಶೇಷೆಯುಂ ಕೈಕೊಂಡು ಮುನೀಂದ್ರವೃಂದಾರಕಪಾದಾರವಿಂದಮಂ ಬೀೞ್ಕೊಂಡು ತದಾಶ್ರಮೋದ್ಯಾನಮಂ ಪೊಱಮಟ್ಟು

1 ಸ (ಇ)

ಏಱಿದ ವಾರಣೇಂದ್ರಮದ ದುರ್ದಿನದಿಂದಮೆ ಕೊ[1]ಡೆ[1] ಕರ್ದಮಂ
ದೋಱೆ ಸಿತಾತಪತ್ರಚಯದಿಂ ಗಗನಸ್ಥಲ ಕೂಡೆ ಚಂದ್ರಮಂ
ದೋಱೆ ವಿಲಾಸಿನೀನಯನಸೈರವದಿಂ ದೆಸೆ ಕೂಡೆ ಪೂಗೊಳಂ
ದೋಱೆ ವಿಲಾಸದೊಳ್ ಪೊರೆಪುದೋಱಿದುದಾಗಮನಂ ನೃಪೇಂದ್ರನಾ ೬೫

ವ|| ಅಂತು ಬಂದರಮನೆಯಂ ಪೊಕ್ಕು ಸೈನ್ಯಾಮಾತ್ಯರಾಜನ್ಯಕಮಂ ಕಳಿಪಿ ಕರುಮಾಡದ ಮುಂದಣ ಭದ್ರಶಾಲಾವೇದಿಕೋಪಾತ್ತಮತ್ತವಾರಣೋಪಾಂತದೊಳ್ ಪಸರಿಸಿದ ಮಸು[2]ರಿ[2]ಗೆಯ ಮೇಲೆ ತಾಂಬೂಲಕರಂಕವಾಹಿನೀದತ್ತವೇದಿಕಾಗ್ರಸಂಧಾನಿತ ಕೋಮಲಾಂಗುಳೀಕೋರಕಾಗ್ರಂ ಪರಿಮಿತಮಿರ್ದಾಗಳ್

ಗುರುವಕ್ತ್ರೇಂದು ಕುಮುದ್ವತೀಸದುಪದೇಶಪ್ರಸ್ಥಿತೋರ್ವೀಶರಾ
ಗರಸಂ ತನ್ನನೆ ಪತ್ತಿದಂತೆ ನಿಜಬಿಂಬಂ ಚೆಂಬುಗೆಂಪೇಱೆ ತ
ತ್ಪರಿಹಾರಕ್ಕೆ ಮುಱುಂಕಲೆಂದಪರಪಾಥೋನಾಥನಂ ಪೊರ್ದುವಂ
ತಿರೆ ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರಪ್ರಾಂತಮಂ ೬೬

ಇನನುಱಿದಪರದಿಶಾಕಾ
ಮಿನಿಯೊಳ್ ಕೂಡಿದೊಡೆ ನೋಡಲಾಱದೆ ಪೂರ್ವಾಂ
ಗನೆ ಮುಚ್ಚಿದಕ್ಷಿಪಕ್ಷ್ಮದ
ತನಿಗರ್ಪೆನಿಸಿದುದು ಕೊನರ್ವ ಕತ್ತಲೆ ನಭದೊಳ್ ೬೭

ವ|| ಆ ಸಮಯದೊಳ್

ಇದು ವಿದ್ಯುಲ್ಲತೆಯಲ್ಲದಾದೊಡೆ ನಿರಭ್ರವ್ಯೋಮದಿಂದೆಂತುಂ ಮೂ
ಡಿದುದಿಂದೂದಯಮಲ್ಲದಾದೊಡೆ ನಭೋಮಧ್ಯಸ್ಥಲಕ್ಕೆಂತು ಬಂ
ದುದು ಸೂರ್ಯಾತಪಮಲ್ಲದಾದೊಡಿನನಿಂದಂ ಪಿಂತೆ ತಾನೆಂತು ನಿಂ
ದುದೆ[3]ನಲ್ಕುಳ್ಕೊಗೆತಂದು[3] ಪೋಲ್ತುದು ವಿಯತ್ಸೀಮಂತಸಿಂದೂರಮಂ ೬೮

ವ|| ಆಗಳದನುದ್ಗ್ರೀವೋತ್ತಾಲಮುಖಸರಸಿರುಹನುಮುನ್ನಯಿತಭ್ರೂಲತಾಬಂಧ ತರಂಗಿತನಿಟಿಲಪಟ್ಟನುಮುತ್ತರ್ಜ್ಜನೀದಂಡಪ್ರಸಾರಿತನೇತ್ರಾಂಚಲಪತಾಕನುಮಾಗಿ ನೋಡುತ್ತುಮಿರೆಯಿರೆ

---

1 ಡಿ (ಉ) 2 ಳ (ಅ) ಳಿ (ಇಉ) 3 ನಲ್ ಸಾಲ್ತೊಗೆದೊಂದು (ಇಎ) ನಲ್ ಸಾಲ್ತೊಗೆತಂದು (ಕ)

ಚಿರಮಲ್ತೆನ್ನಯ ತೇಜಮುಂ ಕಡೆಯೊಳೀಪಾಂಗೆಂಬುದಂ ನಾಱುವಂ
ತಿರೆ ದುರ್ಬೋಧಜ[1]ನಾಂ[1]ತರಂಗತಿಮಿರಕ್ಕುದ್ಯೋತಿಯಂ ತೋಱುವಂ
ತಿರೆ ಸಂಸಾರಸುಖಾನು[2]ಭೋ[2]ಗಶತ ಪೂರಿತಾರ್ಣಪುಂಜಕ್ಕೆ ದ
ಳ್ಳುರಿ ಬಿಟ್ಟಿಂತಿರೆ ಬಿ[3]ಟ್ಟು[3] ತಂದುದೆರ್ದೆಗುಲ್ಕಾಪಾತನೂತಂಕಮಂ ೧೯

ವ|| ಅದಂ ಕಂಡು ಶರೀರಾದಿ ಸಮಸ್ತವಸ್ತುಗಳೊಳಸ್ಥಿರತ್ವಮನೆ ಮನದೆಗೊಂಡು ನಿರ್ವೇಗಪರನಾಗಿ ತನ್ನೊಳಿಂತೆಂದಂ

ಎನ್ನದೊಡಲೆನ್ನದೊಡಮೆಯಿ
ದೆನ್ನದು ಸಂಪತ್ತಿಯೆಂದು ಮಱುಗದೆ [4]ಪೆಱತೆಂ[4]
ದೆನ್ನದೊಡಲೆನ್ನದೊಡಮೆಯಿ
ದೆನ್ನದು ಸಂಪತ್ತಿಯೆಂದೊಡಾತನೆ ಚದುರಂ ೨೦

ವ|| ಅದಲ್ಲದೆಯುಂ ಜವನ ಜತ್ತಕುಱುಮಂ ಪೇೞ್ವೊಡೆ

ತೃಣಮುಂ ತೆನೆವೋದ ಬೞಿ
ಕ್ಕೊಣಗುವುದದಱಿಂದೆ ನರರ ಬಾೞ್ ಲಘುಕಾಲಂ
ಹಣಿದದ ಪೊಯಿಲ್ಗೆ ಮೊದಲ್ಕಡು
ಕಣೆಯೆನ್ನದಿದೆಳವೆ ಜವ್ವನಂ ಮುಪ್ಪೆ[5]ನ್ನಾ[5] ೨೧

ನೆರಪಿದ ಪುಣ್ಯಸಂಚಯ[6]ಮ[6]ಗಣ್ಯತರಂ ನೆಲೆ ನೀಳ್ಕಬಾರದಂ
ಬರತಲಮಧ್ಯವಜ್ರಮಯಮಂಡಪಮೊಪ್ಪುವ ಗಾಡಿ ಶೈಶವಂ
ಜರೆ ರುಜೆ ಕಂಟಕಂ ತುಡುಕಲಣ್ಮದ ದಿವ್ಯಶರೀರಮುಂ ನರಂ
ಕರಗಿ ಕಟಿಲ್ಚಿ[7]ಪಂ[7] ದಿವದಿನೆಂದೊಡೆ ಮರ್ತ್ಯರ ಬಾೞ್ಕೆ ನಿ[8]ಟ್ಟೆ[8]ಯೇ ೨೨

ಪಾತಾಳಸ್ಥಳದೊಳ್ ವಿಲೋಚನಭವಾದ್ಯರ್ ಭಾವನಾಜ್ಯೋತಿಷ
ಜ್ಯೋತಿರ್ಲೋಕದೊಳರ್ಕಮುಖ್ಯರಮರರ್ ಶಕ್ರಾದಿಗಳ್ ಕಲ್ಪ ಸಂ
ಭೂತರ್ ತೊಟ್ಟನೆ ಬಿಟ್ಟಿಪರ್ ಜವನ ಜಾಲಕ್ಕೆಂದೊಡಿಂ ಮರ್ತ್ಯನೇ
ನಾತಲ್ಪಾಂಗನನಲ್ಪರಾಗನನನಲ್ಪಾಯುಷ್ಯನೇನಾದಪಂ ೨೩

---

1 ನಂ (ಅಇ) 2 ಯೋ (ಅಇ) 3 ರ್ದು (ಅಇ) 4 ಹೆಱಕೆಂ (ಅಇ)
5 ನ್ನಂ (ಅಇ) 6 ವ (ಅಇ) 7 ಪರ್ (ಅಇ) 8 ಟ್ಟ (ಅಇ)

ಇದು ದುರ್ಬೋಧಮೆನಿಪ್ಪುದಕ್ಕೆ ಕತೆ ಕಬ್ಬಂ ಹೇತು ದೃಷ್ಟಾಂತಮೆಂ
ಬುದವೇಂ ತೋಱದೆ ಕಾಣರೇ ತಿಳಿಯರೇ ಸಂಸಾರಮೇಂ ನೀರ ಬು
ದ್ಬುದಮೇಂ ಜನ್ಮನಮೇಂ ತರಂಗಲತೆಯೇಂ ಸಂಪತ್ತಿಯೇಂ ವಾರಿವಾ
ಹದ ಸೊಂಪೇನಿದನಿತ್ಯಮೆಂದು ಕೆಲರೇತಕ್ಕೋದಲುಂ ಪಾಡಲುಂ ೭೪

ಇದನಾಂ ಮೆಚ್ಚೆನೆ ಬಾಲ್ಯಯೌವನಜರಾಮೃತ್ಯುಕ್ರಮಂ ವ್ಯಕ್ತಮಾ
ಗದೊಡಂ ಸಾಲ್ವುದಿದಕ್ಕೆ ಮೊತ್ತಮೊದಲೊಳ್ ತಾಯೆಂಜಲೊಳ್ ಬಿಟ್ಟಿ ಗ
ರ್ಭದ ಮಾಂಸಾಂತ್ರಮನೊಟ್ಟೆಕೊಂಡು ಕೊಳೆಯೊಳ್ ತೇಂಕಾಡಿ ವಿಣ್ಮೂತ್ರದೊಳ್
ಪುದಿದೇತಕ್ಕೆ ಬೞಿಕ್ಕೆ ಬೀೞ್ವಿರದಱಿಂ ಮರ್ತ್ಯಂ ಜಿಗುಪ್ಸಾಕರಂ ೭೫

ವ|| ಅದಲ್ಲದೆಯುಂ

ಮೊದಲೊಳ್ ಪುಟ್ಟುವ ನೋವು ಸಾವಿನ ಸಮಾನಂ ಬಾಲ್ಯದೊಳ್ ಬಟ್ಟಿ ಬಾ
ೞದರಿಷ್ಟಂ ನವಯೌವನಂ ಮದಮುಖಂ ಸರ್ವಪ್ರಮಾದಕ್ಕೆ ತಾಂ
ಸದನಂ ಬೂದಿಯ ಬೊಟ್ಟು ಬೀದಿಯ ಸೊಡರ್ ಮುಪ್ಪಿನ್ನೆಗಂ ಬೞಿಕ್ಕಿನೆಂ
ಬಿದೆ ದಲ್ ಚಿತ್ರ[1]ಮ[1]ನಿತ್ಯನಾಟಕದ ಚೋಹಂ ತೀರ್ದುದಿಂ ಸಾಲದೇ ೭೬

ಕರವಾಲಂ ಪಿಡಿದೆತ್ತಲಶ್ವಗಜಮಂ ಮಾ[2]ರ್ಪಾ[2]ಡಿಗೊತ್ತಲ್ ಮನೋ
ಹರಿಯರ್ ಬಂದೊಡಲಂಪು ಪೊಂಪುಳಿಸೆ ಮೈವೆತ್ತಲ್ತನೂಭೋಗವಾ
ಸ್ಫುರಿತೋರುದ್ವಯವೇಗಮೂರ್ಜಿತಭುಜೋದ್ಯೋಗಂ ಸಡಿಲ್ತೆಂದು ಮ
ತ್ತರಸೆಂಬಂ ವಿರಸಂ ಗಡಂ ಸುಡುಸುಡಾ ಛೀಃ ಪೆಂಡಿರಂ ಮುಪ್ಪಿನೊಳ್ ೭೭

ನೆಟಿಲಂ ನೋಡಿದ ರೂಪಿನ
ಪೊೞಪದು ಕನ್ನಡಿಯನೊರ್ಮೆ ನೋಡಿದೊಡಿರದೊ
ಡ್ಡೞಿವುದು ನರೆತೆರೆಯಿಂ ಮ
ತ್ತೞಿಪರ್ ನೋಡುವರದೆಂತೊ ಪೆಂಡಿರ ಮೊಗಮಂ ೭೮

ವೀರರಸಂ ಮೊನೆಯೊಳ್ ಶೃಂ
ಗಾರರಸಂ ಮನೆಯೊಳಳವಿಗೞಿದಿರೆ ಜಸಮಂ
ತಾರದೊಡೆ ಪೋಲ್ತುದು ಯಶೋ
ಭಾರದೆ ತಲೆ ಬಿರಿಯೆ ಬಿಗಿದ ಕಟ್ಟಂ ಪಟ್ಟಂ ೭೯

1 ಪ (ಅಇ) 2 ಪ್ಪಾ (ಅಇ)

ಅಱಿಪಿನ ಮೋಹದಿಂ ತೊಡರ್ದು ಬಟ್ಟಿಪೆನೆಂದೊಡೆ ರಾಜ್ಯಲಕ್ಷ್ಮಿ ಮು
ನ್ನಱಿಯದದೇಕೆನಲ್ ನೆಲಸದಾಯು ಕರಂ ಚಲವೀಚಿಯಂತೆಯೇ
ಕುಱಿದಪೆನೆಂಬ ಜೋಡೆಯನೆ ಮುನ್ನಱಿದಿರ್ಪ ವಿವೇಕಿಯಂತೆ ತಾ
ನುಱಿದೊಡಟಲ್ [1] ಬಟಲ್ವ [1]ದು ಸುಖಂ ತವದೊಪ್ಪುವುದಾತ್ಮಗೌರವಂ ೮೦

ವ॥ ಎಂದು ಪರಿಭಾವಿಸಿ ಸಕಲಸಾಮ್ರಾಜ್ಯಸುಖಾನುಭೋಗಪರಾಙ್ಮುಖನುಂ ಪ್ರವ್ರಜ್ಯರಾಜ್ಯಲಕ್ಷ್ಮೀಸಂಭೋಗಸುಖೋನ್ಮುಖನುಂ ಸಾಂಧ್ಯಸಮಯಸಮುಚಿತನಿತ್ಯನಿಯಮವ್ಯಾಪಾರನುಂ ಅರ್ಹತ್ಪರಮೇಶ್ವರಮುಖಾರವಿಂದಾವಳೋ[2]ಕನನುಂ[2] ದಿವ್ಯಗಂಧೋದಕಸೇಕಸಂತರ್ಪಿತಾಂ[3]ತರಂಗನುಮಾಗಿ[3]

ಕಡೆ[4] ವೊಳ್ತಾಗೆ[4] ಪರಪ್ರವಾಸಗೃಹಶಯ್ಯೋದ್ದೇಶದೊಳ್ ಪಾಂಥನೊಂ
ದೆಡೆಗೆಯ್ದುಂತಿರುಳಿರ್ದು ಸಜ್ಜೆವನೆಯೊಳ್ ಶುದ್ಧಾಂತಕಾಂತಾಜನ
ಕ್ಕೆಡೆಯಂ ಮಾಡದವೊಲ್ ಕಡಂಗಿ ಬರೆ ನಿದ್ರಾಕಾಂತೆ ಕಣ್ಗೆಯ್ದು ಪೊ
[5]ಟ್ತ್ರೆ[5]ಡೆ ಭೂಕಾಂತನುಪಾತ್ತನಿತ್ಯನಿಯಮವ್ಯಾಪಾರಪಾರಾಗನುಂ ೮೧

ವ॥ ಸಭಾಭವನಮಣಿವಿಷ್ಟರಾಧಿಷ್ಠಿತನಿಷ್ಟಬಂಧುಸನಾಭಿಜನಮಂತ್ರಿಮಹತ್ತರಮಕುಟಬದ್ಧಪ್ರಸಿದ್ಧಪರಿಜನಮುಂ ಬರಿಸಿ ನಿಜಮನೋಗತೋದ್ಯೋಗಮನವರ್ಗೊಡಂಬಡೆ ತಿಳಿಪಿ ಬಱಿಯಮಾರಾಜಾಧಿರಾಜಂ ಯುವರಾಜನಂ

ಬರವೇಟಲೊಡಂ ವಿನಯಮೆ
ಪರಿಜಂ ಪಡೆದಂತು ಬಂದು ತನಯಂ ಭೂಭೃ
ಚ್ಚರಣಾಂಬುಜನಖತಾರಾ
ಪರಿರಂಭಮನಾತ್ಮನಿಟಿಲವಿಧುಗೆಸಗಿಸಿದಂ ೮೨

ವ॥ ಅಂತು ವಿನಯವಿನಮಿತೋತ್ತಮಾಂಗನುಮಾಗಿ ಪಾದಪೀಠೋಪಾಂತಮಣಿಕುಟ್ಟಿಮದೊಳ್ ಪಾರ್ಶ್ವವರ್ತಿರಾಜವಲ್ಲಭಪ್ರಸ್ತರಿತಪ್ರಚ್ಛದಾಂಚಲಮನಗಲೆ ನೂಂಕಿ ಕುಳ್ಳಿರ್ದನಂ

ಪರಿದ ಕುರುಳ್ಗಳೊಳ್ ತಳೆದ ಕತ್ತುರಿಗಾಡುವ ಚಂಚರೀಕಮೋ
ಸರಿಸೆ ನಖಾಗ್ರದಿಂ ಸಮೆಜಿ ತಿರ್ದಿ ನವೋತ್ಪಲಕರ್ಣಪೂರಮಂ
ಜರಿ ನಮಿತಾಸ್ಯದೊಳ್ ಜಗುಟಿ ಮೆಲ್ಲನಮರ್ಚಿ ನಿಜಾಂಕಪಾರ್ಶ್ವದೊಳ್
ಬರೆ ತೆಗೆದಪ್ಪಿ ಕುಳ್ಳಿರಿಸಿ ದೇವನಿದಂ ನುಡಿದಂ ಕುಮಾರನೊಳ್ ೮೩

---

1 ಕಟಿಲ್ಪ (ಇಉಕ) 2 ಕಮಂ (ಅಇಉ) 3 ತಃಕರಣನುಮಾಗಿ (ಕ)
4 ಯೊಳ್ತಾಗೆ (ಅಇ) 5 ತ್ತೆ (ಅಇ)

ಕ್ಷಿತಿಸಂವಾಹಿ ಸಹಾಯಿ ಜನ್ಮಸುಖದುಃಖಾಪಾತ [1]ಸಂವಾದಿ[1]ಸ
ದ್ಗತಿ ಸಂದಾಯಕನೆಂದು ತಂದೆ ಪಡೆವಂ ಸತ್ಪುತ್ರನಂ ಸಾರಸಂ
ಸೃತಿಸಮ್ಮೋಹನಪಾತ್ರನಂ ಸುತನೆ ನಿನ್ನಂ ಪೆತ್ತುಮಾಂ ಕರ್ಮಸಂ
ತತಿಯಂ ತೂಳ್ದದೊಡಿಂದು ಲೋಕಪಿತೃಸಾಮಾನ್ಯತ್ವಮಂ ತಾಳ್ದಿನೇ ೮೪

ಅದಱಿಂದಂ ಪ್ರವ್ರಜ್ಯಾ
ಸುದತಿಗೆ ಕೈಗೊಟ್ಟ ತೋಳ್ಗೆ ಭೂಮಿಯ ಭರಮ
ಪ್ಪುದಸಹ್ಯಮನಾಗಿ[2]ಸ[2]ದ
ಪ್ಪುದಿದಂ ನೀಂ ತಳೆದು ಮಗನೆ ಸಲಿಸೆನ್ನೊಲವಂ ೮೫

ವ॥ ಎಂದು ಬೆಸಸಿದ ಪರಮಲಕ್ಷ್ಮೀಸ್ಪೃಹನನಿಸ್ಪೃಹೋದೀರ್ಣಮಂ ಕೇಳ್ದು ಘನರಥಂ ಘನರವಮಂ ಕೇಳ್ದ ಕಳಹಂಸಕಳಭದಂತೆ ತಳವೆಳಗಾಗಿ

ತೀವಿದ ಕಣ್ಣನೀರ್ ಮಿಡಿದು ಪಾಯ್ವೆರ್ದೆ ಹಿಗ್ಗಿದ ಗಗ್ಗರಿಕೆ ಸಂ
ಭಾವನೆಯಂ ಕೞಲ್ಚಿ ದೆಸೆಗೆಟ್ಟಜೀವಂ ಮಱೆದೊಂದು ಮಾತುಮಂ
ದೇವನೊಳಿಂತುಟೆನ್ನದೆ ಕುಮಾರಕನಿರ್ದನದಕ್ಕೆ ಪಂದೆಯಂ
ಪಾವಡರ್ದಂತೆ ಪೊಯ್ವಡೆದನಂತೆ ಮುೞುಂಗಿದನಂತೆ ಚಿಂತೆಯೊಳ್ ೮೬

ವ॥ ಅಂತಿರ್ದ ಮಗನ ಮೊಗಮಂ ನೋಡಿ

ಭ್ರಾಂತರವೊಲ್ [3]ಮ[3]ಱುಗುವರೇ
ಚಿಂತಿಸುವರೆ ಪರಮಸೌಖ್ಯಲಾಭೋದಯದೊಳ್
ಸಂತಸಮಂ ತಳೆಯದೆ ನೀ
ನಿಂತೞಲಲ್ ಕಲ್ತೆ ಮಗನೆ ಪರಮಾಗಮಮಂ ೮೭

ವ॥ ಎಂದು ಶಾಂತೋಪಲಾಲನೆಗಳಿಂ ಸಂತರ್ಜಿಸಲೊಡಮೆಂತಾನುಮವಹಿತಾಂತರಂಗನುಮಾಗಿ ಕುಮಾರನಿಂತೆಂದಂ

ಗತಿಗೆ ನಿಮಿತ್ತಂ ಪಡೆವರ್
ಸುತರಂ ಗಡ ಪೊಱಗೆ [4]ಸೆ[4]ಱಗೆ ನಿಲ್ಲನವಶ್ಯಂ
ಪಿತುರಾಚಾರಂ ದೇವರ
ಗತಿಯಲ್ತೆನಗಿಲ್ಲ ಬೇಱೆ ಗತಿಯುಂ ಮತಿಯುಂ ೮೮

---

1 ಸನ್ನಾದಿ (ಅಇಉ) ಸಂಗಾದಿ (ಕ) 2 ಸಿ (ಎ) 3 ಗ (ಎ)
4 ಜೆ (ಅಇಉ)

ವ || ಎಂಬುದುಂ ನೃಪೇಂದ್ರನಿಂತೆಂದಂ

ಪೊತ್ತ ಪೊಱೆ ತಿಣ್ಣಮಾದೊಡೆ
ಮತ್ತೆ ಕೆಲರ್ ಕಂಡು ಕರುಣಿಪರ್ ಪಿತೃಭವದೊಳ್
ಪೆತ್ತ ಮಗಂ ಸಮ್ಮನಿಸಿ ಕೊ
ಳುತ್ತಿರೆ ಪೊಸತಲ್ತೆ ತಂದೆಮಕ್ಕಳ ಮೋಹಂ ೮೯

ವ || ಎಂಬುದುಂ ಮೇಘರಥ[1]ಕುಮಾರಂ[1] ಪದ್ಮರಥಮಹಾರಾಜಗಿಂತೆಂದಂ

ಈನೆಲದ ಬಿಣ್ಪು ದೇವರ
ಪೀನಭುಜಾಸಹ್ಯಮೆಂದು ಬೆಸಸುವೊಡೆನಗಿಂ
ತಾನಾಗನಾಂತ ಪೊಱೆಯಂ
ಭೂನಾಗಂ ಪೊತ್ತು ದೇವ ನಿತ್ತರಿಸುವುದೇ ೯೦

ವ|| ಎಂಬುದುಮರಸನಿಂತೆಂದಂ

ಕವಚಹರಂಗೆ ನೀತಿ ಮಕರಂದಮುಖಾಂಬುರುಹಂಗೆ ಮದ್ವಚ
ಶ್ರವಣವತಂಸಕಂಗೆ ನಿನಗಂ ಧರೆ ತಿಣ್ಣಮೆ ಕಂದ ಚಾಪಸಂ
ಭವಕಿರಣಕಂಟಕಾಳಿಮಭುಜಾಭುಜಗಂ ಮಣಿಮಾಡ ತಾನೆ ತಾ
ಳ್ದುವುದೆಮಗುತ್ತರಂಗುಡದೊಡಂಬಡು ಸಾಲ್ವುದು ನೀಂ ಮದಿಷ್ಟಮಂ ೯೧

ವ|| ಎಂದು ಮಱುಮಾತಿಂಗೆಡೆಗುಡದೆ ನುಡಿದೊಡಂಬಡಿಸಿ ಬೞಿಕ್ಕೆ ಪರಮಪ್ರವಚನತಾತ್ಪರ್ಯಾರ್ಥದೊಳ್ ಸಂಶಯರಹಿತರುಮನ್ವಯಾಗತಪೌರೋಹಿತ್ಯಪದವೀಸಮಾಹಿತರುಮಪ್ಪ ಹಿತರಂ ಬರಿಸಲೊಡಮನರ್ ವಿದಿತವೃತ್ತಾಂತರಾಗಿ ಕುಲಸ್ವಾಮಿಯ ಮನೋಗತಾರಂಭಕ್ಕನುಗತಮಾಗೆ

ಪರಮಾರ್ಹಂತ್ಯಮನೀವ ಮಂಗಳಮಹಾಶ್ರೀವಲ್ಲಭೋದ್ವಾಹಮೇಂ
ನರಕೀಟಕ್ಕಭಿಗಮ್ಯಮೇ ಸುಕೃತಿಗಳ್ಗಾರೂಢರತ್ನತ್ರಯ
ರ್ಗರಿಷಡ್ವರ್ಗಜಯರ್ಗೆ ನಿಮ್ಮ ದೊರೆಯರ್ಗಕ್ಕುಂ ಕ್ಷಮಾಪಾಲಶೇ
ಖರ ತೆ[2]ತ್ತ್ವಾ[2]ರನುಗಾ[3]ತ್ತ ನಾ[3]ಭಿನುತಮೆಂದರ್ಬಂಧು ಸೌವಸ್ತಿಕರ್ ೯೨

ವ|| ಅಂತು ಬಿನ್ನವಿಸಿದ ಪುರೋಧಸಪುರಸ್ಸರಂ ಪ್ರತಿಪ್ರಧಾನತಾಂಬೂಲಪುರಸ್ಸರಂ ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನಂ ಮಾಡಿಮೆಂದು ಕಳುಪಿದಾಗಳ್

---

1 ಕುಮಾರಂ (ಅಇ) ಪ್ರತಿಗಳಲ್ಲಿಲ್ಲ.

2 ತ್ವಾ (ಎ) 3 ರ್ತನಾ (ಅಇಉ) ತ್ರವಾ (ಎ)

ಪರಮನ ಪರಿನಿಷ್ಕ್ರಮಣಾಂ
ತರದೊಳ್ ಬಿನ್ನವಿಸಿ ಪೋಪ ಲೋಕಾಂತಿಕದೇ
ವರವೊಲ್ ಪೊಕ್ಕರ್ ವಸುಧಾ
ಪರಕಲ್ಪವಿಮಾನಮೆನಿಪ ನೃಪಮಂಡಲಮಂ ೬೩

ಕನಕಮಣಿರಚಿತಮಂಟಪ
ವಿನಿಹಿತ ಕಲ್ಯಾಣವಸ್ತು ವಿಸ್ತಾರಮಗು
ರ್ವನಿಸಿದುದು ಗೃಹಮಹತ್ತರ
ಜನಕೃತ್ಯವ್ಯಂತರಾತಿಶಯಮೆಂಬಿನೆಗಂ ೬೪

ಗುಡಿ ಸುಪ್ರತಿಷ್ಟಕಂ ಕ
ನ್ನಡಿ ಕಳಶಂ ಚಾಮರಾಳಿ ಭೃಂಗಾರಂ ಬೆ
ಳ್ಗೊಡೆ ತಾಳವೃಂತವೊಪ್ಪಂ
ಬಡೆದುವು ವೇದಿಕೆಯೊಳಷ್ಟಮಂಗಳನಿಕರಂ ೬೫

ವ॥ ಅನಂತರಂ ಪದ್ಮರಥಪೃಥ್ವೀನಾಥಂ ಆಸ್ಥಾನಮಂಡಪದಿನೇೞಿಲೊಡನೇೞ್ವ ಮಕುಟಬದ್ಧಪ್ರಚಂಡಮಂಡಳಿಕರ ವಲಯದ ಕರ್ಣಾಭರಣದ ಕೇಯೂರದ ರತ್ನಹಾರದ ಝಳವಟ್ಟಗೆಯ ತೊಡರ ಕಡಗದ ಬೆಡಂಗುವೆಸದಿನಡಿಗಡಿಗೆ ನೆಲನನುಗ್ಗಡಿಸುವಂತಿರುಣ್ಮಿ ಪೊಣ್ಮುವ ಝಣಝಣತ್ಕಾರದೊಳಮಾ ಝಣಝಣತ್ಕಾರಮೊಡನೆ ಗಡಣಿಸಿ ನುಡಿವಂತೆ ಕರ್ಣಸುಭಗಮಾದ ಪುಣ್ಯಾಗಣ್ಯಪುಣ್ಯಾಕಾರಧಾರಿಣೀವರಕಾಂತಾಕದಂಬತನುಲತಾಪರಿಮಳದೊಳ್ ಪರಿಮಱಿಯಾಡುವ ಮಱಿದುಂಬಿಗಳ ಪಂಚಮದನುಚ್ಚಾರಕ್ಕೆ [1]ಬಿನ್ನಾಣ[1]ವಡೆದ ನೂಪುರಕಲಾಪತುಲಾಕೋಟಿಮಂಜರಿಕಾಪುಂಜಶಿಂಜಾನದೊಳಮಾಶಿಂಜಾನಕ್ಕೆ ರಂಜನೆವಡೆವ ಮಂತ್ರಗೀತಪ್ರಸಿದ್ಧಸ್ವಯಂಭುಗಳಿಂ ಜಿನಮಹಿಮಾತಿಶಯದತಿಗಳೆಡೆಯೆಡೆಯೊಳೆಡೆವಿಡದೊಂದಿ ಪೊಗೞ್ವ ಪುಣ್ಯಪಾಠಕರ ಗದ್ಯಪದ್ಯಗಮಕನಿರ್ದಿಷ್ಟ ವಿಶಿಷ್ಟ ಪಠನಪ್ರಪಂಚದೊಳಮಾ ಪಠನಪ್ರಪಂಚಮಂ ಚೆಲ್ವಿಡಿದು ಜಡಿವ ಪಡಿಯಱರ ಕಳಕಳಮನೆೞಕುಳಿಗೊಂಡು ದಿಶಾತಲೋದರಿಯರ ಶಾತೋದರಿಯರಂಗದೊಳ್ ಪ್ರತಿ[2]ರವ[2]ಚ್ಛಲದಿಂ ಪ್ರಸವಪ್ರಸಂಗಮನಂ ಗೀಕರಿಸುವ ಮಂಗಳಾಚರಣಾತೂರ್ಯಧ್ವಾನಶಂಖದುಂದುಭಿಗಭೀರಭೇರೀಭೂರಿಘೋಷಣದೊಳಮಳುಂಬಮಾದ ಸಂಭ್ರಮಂ ಮೆಱೆ[3]ಯೆ ಕುಮಾರಶೇಖರಕರತಲಾಂಗುಲಿಕೋರಕವಿಲಗ್ನ ವಾಮಹಸ್ತಾಂಗುಲಿಜಾಲಕವಿಲಾಸಂ ವಿಲಾಸಕ್ಕಾವಾಸಮಾದ ಮಂಗಲಾವಾಸಮಂ ಪುಗುತಂದು ಮೌಹೂರ್ತಿಕಸಮವರ್ತಿತಶುಭಮುಹೂರ್ತೋದಯದೊಳ್

1 ಬೀಹಣ (ಎ) 2 ಧವಳ (ಅಇಉ)

ಪುರುನಾಥಂ ಭರತೇಶ್ವರಂಗೆ ಪದೆಪಿಂದಂ ಪಟ್ಟಮುಂ ಕಟ್ಟುವಂ
ತಿರೆ ಪಟ್ಟದ್ವಿಪವಾಜಿರಾಜರಥರತ್ನೈಕಾತಪತ್ರಾಂಕಚಾ
ಮರಸಿಂಹಾಸನಶಂಖಖಡ್ಗಫಲಕಾದಿಕ್ಷಾತ್ರಪರ್ಯಾಯ ತೂ
ರ್ಯರವಾಘೂರ್ಣಿತಕಾಯಮಾನಮಣಿವೇದೀಮಂಡಪಸ್ಥಾನದೊಳ್ ೯೬

ನದನದ್ಯಚ್ಛನವೋದಭಾರಪರಿಪೂಜ್ಯೋತ್ಸುಂಭದಿಂ ತಾನೆ ಮಾ
ಡಿದ ರಾಜ್ಯಾಭಿಷವಂ ನಿಜೋದ್ಯಮಲತಾಂಭಸ್ಸೇಕದಂತಾಗೆ ಕ
ಟ್ಟಿದನಾವಮ್ರಾಯಲತಾಂತಮಾಲಿಕೆಯನಾಚಾರಾಂಬುವಂ ಸೇತುಗ
ಟ್ಟಿದನಾ ಮೇಘರಥಂಗೆ ಪದ್ಮರಥರಾಜಂ ಪಟ್ಟಮುಂ ಕಟ್ಟಿದಂ ೯೭

ಪರಿವಾರಕ್ಕುಸಿರ್ದಂ ಪ್ರಧಾನಪುರುಷರ್ಗಪ್ಪೈಸಿದಂ ಮಂತ್ರಿಮು
ಖ್ಯರ ಕೆಯ್ಯಂ ಪಿಡಿದಿತ್ತನಾತ್ಮಸುತನಂ ತದ್ವರ್ಗರಂ ರಕ್ಷಿಪಂ
ತಿರೆ ಸನ್ಮಾನಿಸುವಂತಿರಿಂದು ನುಡಿಗೊಳ್ವಂತಂತಿರಂದೋಳಿಯಿಂ
ದಿರಿದಂ ನಂದನನಂ ಬೞಕ್ಕೆ ತಳರ್ದಂ ಭೂಪಾಲಕಂಠೀರವಂ ೯೮

ವ॥ ಆ ಸಮಯದಲ್ಲಿ

ಮಱಿ ಕಂಬನಿಯಿಂ ದನಿಯುಂ
ಮೊಱಗೆಱಗಿದ ಮಕುಟದಿಂದೆ ಮಿಂಚೊಗೆಯೆ ಪೊದ
ಟ್ದಿಱಲಿಂದಂ ಮುನ್ನಡಿಯೊಳ್
ಮಱಗಾಲಮನಂದು ಸೂನು ತಂದೆಗೆ ತಂದಂ ೯೯

ಹ॥ ಆ ಕುಮಾರನ ಶೋಕೋದ್ರೇಕಮಾಕುಳಮಂ ತೆರಬ್ಬಿಲೊಡಂ

ಮನದೊಳಗಂಧಕಾರದ ಕಡಲ್ ಕವಿತರ್ಪುದು ನಿನ್ನ ವಕ್ತ್ರಚಂ
ದ್ರನ ಬೆಳಗೊಮ್ಮೆ ತೋಱದೊಡೆ ವಲ್ಲಭ ನೀಂ ಬಿಸುಟೆಂತು ಪೋಗೆ ಜೀ
ವನಮೆಮಗೆಂತು ನಾಥ ಬರವೇೞನಲಾಗದೆ [1]ದೇವ[1] ಸತ್ತ್ವಪೋ
ವನತರುಷಂಡಮೆಮ್ಮನೊಳಕೊಳ್ಳ[2]ದೆ[2] ಪೇೞ್ ಭುವನೈಕಭೂಷಣಂ ೧೦೦

ಅರಿನೃಪರಿಂತು ತಮ್ಮ ತಲೆಯಂ ತಲೆವಿಕ್ಕರೆ ಪಾಳಿಯಕ್ಕೆ ಬಂ
ದರಸಿಯರ್ಗಿಂತು ತಮ್ಮ ಶಯನೀಯಮನೀಯರೆ ಮುಚ್ಚಳಿಕ್ಕೆ ಪೋ
ದರಮನೆಗಿಂದು ಪೇೞರೆ ಮಹತ್ತರರಂ ನೃಪಸಿಂಹ ನೀಂ ತಪ
ಸ್ತರುಣಿಗೆ ಕೂರ್ತುದಂ ನುಡಿವೊಡೀಯರೆ ಹೇಱಗರ್ಗಂಗಚಿತ್ತಮಂ ೧೦೧

1 ನಾಥ (ಇ) 2 ರೆ (ಉ)

ಲಲಿತವಿಲಾಸಲಾಸ್ಯರಸಮಿನ್ನೆಮಗೇಕೆಲೆ ದೇವ ವಲ್ಲಕೀ
ಕಳರವದಿಂಪನಾರ್ಪೆಸರಿಡಲ್ಕಱಿವರ್ ನೃಪನೀಱ ಗೀತಮಂ
ಜುಳನಿನದಕ್ಕೆ ಮೆಚ್ಚಱಿದು ಮೆಚ್ಚಿಸರಾರಧಿನಾಥ ನೀಂ ತಪ
ಕ್ಕೆಳಸಿ ಬೞಿಕ್ಕೆ ಪೋದ ಬೞಿಕಾವೆಮಗೇಕೆ ನೃಪಾಲಮನ್ಮಥಾ ೧೦೨

ವ॥ ಎಂದು ಪಲುಂಬಿ ಪಂಬಲಿಸುವ ಪೆಂಡವಾಸದ ತಂಡಮುಂ ಕಂಡು

ವಸುಧಾಧೀಶನ ತೇಜ[1]ವ[1]ಲ್ಲವೆ ಕುಮಾರಂ ನಿಮ್ಮನಾರಯ್ದು ರ
ಕ್ಷಿಸಲೀ ಮಂಗಲಯಾತ್ರೆಯೊಳ್ ದ್ರುತವಿಡಲ್ ಬಾಯ್ವಿಟ್ಟೞಲ್ಕಾಗ ಸೈ
ರಿಸಿಮಿಂ ಸ್ವಾಮಿಯ ಚಿತ್ತಮಂ ಕಡಡದತ್ತಲ್ಸಾರಿಮೆಂದೊತ್ತಿ ಬ
ಗ್ಗಿಸಿದರ್ ಮಂತ್ರಿಮಹತ್ತರರ್ ನೃಪವಧೂವಾರಾಂಗನಾವರ್ಗಮಂ ೧೦೩

ವ॥ ತದನಂತರಂ

ಕರಿರಿಪುಪೀಠಮೆಂಬ ಪೆಸರಾರೆಣೆಯುಂ ಕೆಲಕೊತ್ತಿ ಬಂಧುಮಿ
ತ್ರರುಗಳ ಗರ್ಜನೋಕ್ತಿಗೊಳಸಾರದೆ ಮುಂಗಡೆಯೊಳ್ ಪೊರಟ್ಟಿ ಪೆಂ
ಡಿರ ಕುರುಳೋಳಿಯೆಂಬ ತೊಡರೊಳ್ ತಡವಾಗದೆ ಸಂತತಂ ವನಾಂ
ತರಮನೆ ಗೊತ್ತುಮಾಡಿ ಭರದಿಂ ತಳರ್ದತ್ತಧಿರಾಜಕುಂಜರಂ ೧೦೪

ಅನುರಾಗಚ್ಛವಿಯಿಂ [2]ನವ[2]ದ್ಯುಮಣಿಯಂ ಬೆಂಕೊಳ್ವ ವಕ್ತ್ರಂ ವಿಲೇ
ಪನಮುಕ್ತಾರುಚಿಯಿಂ ವಿಲೋಚನಚಕೋರೀಚಂದ್ರಿಕಾಪಾನ ಭಾ
ಜನಮಾದಾಕೃತಿಯೊಪ್ಪೆ ಮಂಡಪದಿನಂದೇೞ್ತಂದು ರಾಜಾಧಿರಾ
ಜನನೊಲ್ದೀಱಿದನಾ ನೃಪಾಲತಿಲಕಂ ಸಾಹಿತ್ಯರತ್ನಾಕರಂ ೧೦೫

## ಗದ್ಯ

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ ಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತಸಾಥಪುರಾಣದೊಳ್
ಪದ್ಮರಥರಾಜ ವೈರಾಗ್ಯವರ್ಣನಂ
ತೃತೀಯಾಶ್ವಾಸಂ

---

1 ಮೆ (ಎ) 2 ವನ (ಅಇ)

# ಚತುರ್ಥಾಶ್ವಾಸಂ

ಶ್ರೀದಯಿತೆಯ ಸೂೞ್ಗೊಳ್ ತಣಿ
ದಾದರದಿಂ ಕರೆವ ಪರಮಸುಖಲಕ್ಷ್ಮೀಪ್ರಾ
ಸಾದಮನೇಱಿದವೊಲ್ ಸ
ನ್ಮೋದಮನಾಂತಂ ವಿನೇಯಜನಮುಖತಿಲಕಂ

ವ॥ ಅಂತೇಱಿದ ರತ್ನಶಿಬಿಕಾಪುರೋಭಾಗನೊಳ್ ಪರಿನಿಷ್ಕ್ರಮಣಮಾಧವಾಗನುನಸುಮನೋಮಂಜರಿತಲತಾಪ್ರತಾನದಂತೆ ೆಯ್ಗೆಯ್ದು ವಿಲಾಸಮೆಸೆಯೆ ವಸುಧಾತಲಪಾರಿಜಾತನ ಮುಂದೆ ಬಂದು

ಎರಡೊಡಲೊಂದೆ ಜೀವಮೆನೆ ಸಂಸೃತಿ ಸೌಖ್ಯಮನೂಡಿದ್ದೈ ದಿಟಂ
ನೆರೆದರ ನೀತಿಯಲ್ತೆ ಸುರಲೋಕಸುಖಂ ಬೞಿಕಿಂತಿಳೇಶ ಪಿಂ
ತಿರಿಸುವೆ ಮೆಯ್ಯ ಪಿಂತೆ ನೆೞಲಿರ್ಪುದೆ ಬಾರದೆ ಮಾಣೆವೆಂದು ಪೂ
ಣ್ದರಸಿಯರೇಱಿದರ್ ನೃಪನ ಕೂಡೆ ಪಲರ್ ಪಿರಿಯಂದಣಂಗಳಂ ೨

ವ॥ ಮತ್ತಂ

ಶಿಬಿಕಾಂದೋಳವರೂಥದಂತಿಹಯಮಂ ನೇಪಥ್ಯರತ್ನಾವಳೀ
ಶಬಲಚ್ಛಾಯೆ ಮುಸುಂಕೆ ಚಾಮರಸಿತಚ್ಛತ್ರಾಳಿರೋಧೋಲತಾ
ಸ್ತಬಕಸ್ತೋಮಮನುಂಟುಮಾಡೆ ಸಹದೀಕ್ಷೋದ್ಯುಕ್ತರಯ್ನೂರ್ವರೇ
ಱಿ ಬರುತ್ತಿರ್ದರಿಳಾಧಿಪರ್ ಮಕುಟಬದ್ಧರ್ ಭೂಪನಿರ್ವಕ್ಕದೊಳ್ ೩

ಅವರ ವಿಲಾಸಿನೀಜನದ ರಾಣಿಯವಾಸದ ಪುತ್ರಮಿತ್ರಬಾಂ
ಧವರ ವಿಯೋಗಸಂಕಟಮನೇವೆಸಗೊಂಡಪೆನೆಂದು ನಿಂದು ಮ
ತ್ತವರ ಪರಪ್ರಬೋಧಿಸುವ ಕೈಲೆಡೆಮಾಡುವ ಕಣ್ಣನೀರನೊ
ತ್ತುವ ನಿಲವೇೞ್ಗೊಡಂಬಡಿಸುವಚ್ಚಿಗಮುಚ್ಚರಿಯಾ[1]ದುದುರ್ವಿಸಲ್[1] ೪

ವ॥ ಎಂದು ಬಿನ್ನವಿಸಲಿ[2]ಷ್ಟಶರ್ಮರಂ ವಿಕೃತವಿನಯನಾಗಳ್ ಕೆಲದೊಳಂ ಕೇಳುತ್ತಮಿರ್ದ ಶಿಷ್ಟಧೂರ್ತಂ ಚಾರುವಚನಚಾತುರ್ಯದಿಂ ನಿರವಿಸಿ

---

1 ದುದಿರ್ವಸಲ್ (೩ ಉ) ಗಳಿಬ್ಬೆಗಂ (ಎ)      2 ಸುತ್ತಿರ್ಪ ೩(ಅ೩)

ಮಗನಂ ರಾಣಿಯವಾಸಮಂ ವರವಧೂಸಂದೋಹಮಂ ಗೋತ್ರಬಂ
ಧುಗಳಂ ಶೋಕದೊಳಟ್ಟಿ ಮೆಚ್ಚಿಸಿದ ರಾಜ್ಯಶ್ರೀಯುಮಂ ಬಿಟ್ಟು ದೀ
ಕ್ಷೆಗೆ [1]ಪ್ರೋ[1]ಪಂ ಗಡ ಚೆಲ್ವನಾಯ್ತುರಸವಾಟೀನಾದೊಡೇಂ ರಾಜ್ಯದಿಂ
ದಗಲೆಂ ಸತ್ತೊಡಮೆಂದು ತಾಂ ನಗಿಸಿದಂ ಪಾಧನ್ಯನುರ್ವೀಶನಂ ೫

ವ॥ ಆಗಳ್ ಸಂತರ್ಜಿತೋಭಯಪಾಣಿಪಲ್ಲವಂ ಭೂವಲ್ಲಭಂ ವಿದೂಷಕನನಿಂತೆಂದಂ

ಪುಲ್ಲಿಂ ಕಷ್ಟಂ ರಾಜ್ಯಂ
ವಲ್ಲಭೆಯೆನ್ನದೊಡೆ ನೋಂತ ಬಡವಟ್ಟೊಡಲಂ
ಸಲ್ಲೇಖನದಿಂದಿಟ[2]ಪದೊ
ಡಲ್ಲದು[2]ದೇಂ ದೇವನಾಗಲೆನಗಂ ನಿನಗಂ ೬

ವ॥ ಎಂದು ಪುನಃಕಥನಸಂಧಾನಭರಹೊಂಕೃತಾನನಾದಿಳಾಧಿಪತಿಗಾ [3]ಭೂದೇವಂ[3] ಬಟಿಕ್ಕಮಾರಾಜರಾಜಂ ರಾಜಭವನಮಂ ಪೊಱಮಟ್ಟು ರಾಜಮಾರ್ಗದಿಂ ಬಂದು ಪುರಬಹಿರ್ಭಾಗದ ನಂದನ[4]ವನೋಪಾಂತ[4]ದೊಳ್ [5]ನಿಂದನ[5]ರೂಢಾಂದೋಳನಾಗಿ ಸಕಲ ರಾಜಲೋಕಮಂ ಬೀಟ್ಕೊಳಿಸಿ ಮೇಘರಥಕುಮಾರನನೆಂತಾನುಂ ಸಂತಮಿಟ್ಟಿರಿಸಿ ಪಾದಮಾರ್ಗದಿಂ ಸ್ವಯಂಪ್ರಭಪ್ರಭುವಿನ ಆಶ್ರಮಾರಣ್ಯಪುಣ್ಯಾರಣ್ಯಮಂ ಪುಗುತಂದು ತನ್ಮುನೀಂದ್ರವೃಂದಾರಕನ ಸಮುದಾಯಸಹಸ್ರಮಂ ತ್ರಿಃಪ್ರದಕ್ಷಿಣಂಗೆಯ್ದು

ಗುರುಪದ ಸರಸಿರುಹದೊಳಾ
ನರನಾಥನ ವಿನತಮಕುಟಮಣಿಘೃಣಿಗಳಿನೊ
ಯ್ಯರಮಾದುದಾಯ್ತು ಕಟ್ಟಿದ
ಕರಂಬವಾಸಿಗದ ಕುಸುಮವಿಸರದ ಪಸರಂ ೭

ವ॥ ಅನಂತರಂ ಸಾಧುಸಭಾಸದಪರಿಷದ್ವಲಯದೊಳ್ ಮುನಿನಾಯಕ ಪ್ರಾಸಾದಾಸಾದಿತಾತ್ಮನಾಗಿ

ಒದವಿರೆ ಶಾಂತರಸಂ ಚಿ
ತ್ತದರುಚಿ ಜವನಿಕೆವೊಲೆಸೆಯೆ ನಟನೆಯ ನೇಪ
ಥ್ಯದ ದೇವನೃಪತಿ ಬಹುರೂ
ಪದ ಚೋಹಮನಿಟಿಪಿದಂ ಭವಪ್ರಕರಣದೊಳ್ ೮

---

1 ವ್ರೋಃ (ಅಇ) 2 ಪಿದುದಲ್ಲದು (ಅಇಉ) 3 ಧರಾಮರಮುಖ್ಯಂ ದೇವ (ಎ) 4 ವನ (ಅಇಉ) 5 ನಿರೂಢ (ಅ) ನಿಂದಾ (ಉ)

ನಿಲೆ ಮುಖಪದ್ಮದೊಳ್ ಪರಮಪಂಚಪದಂ ಕಮಲಾಸನಕ್ಕೆ ಮೈ
ಸಲೆ ಬಹಿರಂತರಂಗದ ಪರಿಗ್ರಹಶಾಖೆಯಿವೆಂದು ಕುಂತಳಾ
ವಲಿಯನಿೞಿಪ್ಪಿದಂ ವಿಮಲಶುದ್ಧತಪಃಫಲಸೌಖ್ಯ[1]ಯೋ[1]ಗದೊಳ್
ತಲೆನವಿರಲ್ತೆ ಮುಟ್ಟುಪಡವೆಂಬವೊಲೂರ್ಜಿತಪುಣ್ಯಸಂಚಯಂ ೯

ವ॥ ಅಂತು ಪರಮಗುರುಪಾದಪದ್ಮೋಪಾಂತದೊಳ್ ಸಹದೀಕ್ಷಾಲಕ್ಷಿತ ಪಂಚಶತಪ್ರಸಿದ್ಧಮಕುಟಬದ್ಧನುಂ ನಿರ್ವೃತಿನಿಯಮಿತಕತಿಪಯಾವರೋಧ ಕಾಂತಾಕದಂಬನುಮಾಗಿ

ಪೊರೆಯದು ಹಿಂಸೆ ಪೊರ್ದದನೃತಂ ನಸು ಸೋಂಕದು ಚೌರ್ಯಮಂಗನಾ
ಸುರತದ ವಾರ್ತೆ ಗೆಂಟಿರಡುಮಿಲ್ಲ ಪರಿಗ್ರಹಭಾರಮೆಂಬಿನಂ
ದೊರೆಕೊಳೆ ಜಾತರೂಪವಿಧಿ ಪಂಚಮಹಾವ್ರತಧಾರಿಯಾದನು
ದ್ಧರಿಸಿದನಿರ್ಪತೆಂಟೆನಿಪ ಮೂಲಗುಣಂಗಳುಮಂ ಮುನೀಶ್ವರಂ ೧೦

ಸುದೃಢಾಭ್ಯಾಸಮತಿಪ್ರಕಾಶಲಘುವಾತಾಧಾರದಿಂ ನಿತ್ಯಸೌ
ಖ್ಯದಶಾಲಕ್ಷ್ಮಿಯ ಚಿತ್ತಮಂ ಪಡೆದ ಮೂಱುಂ ರತ್ನಮಂ ಕೆಯ್ಗೆಮಾ
ಡಿದನುಂ ದಾಂಟಿದನುಂ ಮುನೀಂದ್ರವಣಿಜಂ ನಿರ್ವಿಘ್ನದಿಂ ದ್ವಾದಶಾಂ
ಗದ ಚಾತುರ್ದಶಪೂರ್ವದೀ[2]ರ್ಧ[2]ಲಹರೀಸಿದ್ಧಾಂತವಾರಾಶಿಯಂ ೧೧

ನಡೆನುಡಿಭಕ್ತಿ ವಸ್ತುಗಳ ಕೊಳ್ಪಿಡುವಂಜಿಕೆ ಕಾಯಶುದ್ಧಿ ಮಾ
ಟ್ಪುಡುಮೆನಿಸಿರ್ಪ ಪಂಚಸಮಿತಿಸ್ಥಿತಿಯಂ ತಳೆದಂ ಬೞಿಕ್ಕೆ ನೇ
ರ್ಪಡಿಸಿದನಂಗದೊಳ್ ವಚನದೊಳ್ ಮನದೊಳ್ ಪರಪೀಡೆ ಪೊರ್ದದೊ
ಳ್ಪಡರ್ವಿನೆಗಂ ತ್ರಿಗುಪ್ತಿಗಳುಮಂ ಜಿನಶಾಸನರತ್ನದೀಪಕಂ ೧೨

ಪದಿನೆಂಟು ಸಾಸಿರಂ ಶೀ
ಲದೊಳೆಸೆದೆಂಬತ್ತುನಾಲ್ಕು ಲಕ್ಕೆ ಗುಣಂಗಳ್
ಪುದಿದು ಕೞಿದಂ ಪ್ರಮಾದಂ
ಪದಿನೈದುಮನೆಯ್ದೆ ಯೋಗಿಜನಮುಖತಿಲಕಂ ೧೩

ವ॥ ಅಂತು ಶೀಲಗುಣಂಗಳ ನಿಳಯನಾಗಿ ಸಂಜ್ವಳನಚತುಷ್ಕಮುಂ ನವನೋಕಷಾಯಮುಂ ಮಂದಮಂದಪವನಾಂದೋಳಿತ ಸ್ವಚ್ಛಜಲಶೈವಲಪಟಳದಂತಿರೊಯ್ಯನೋಸರಿಸಲ್ತೊಡಗೆ ಶುದ್ಧಾತ್ಮಭಾವನಾಬಲದಿಂ ಸಮಸ್ತಗುಣಸ್ಥಾನದೊಳ್ ನಿಂದ ಪ್ರಮತ್ತಸಂಯತನಾದನಂತುಮಲ್ಲದೆಯುಂ

1 ಭೋ (ಎ) 2 ಗ್ದ (ಅಇ)

ಕ್ಷಮೆಯಿಂ ಮಾರ್ದವದಿಂ ಋಜುಪ್ರಕೃತಿಯಿಂ ಸತ್ಯೋಕ್ತಿಯಿಂ ಶೌಚದಿಂ
ಯಮದಿಂದಂ ತಪದಿಂದೆ ದಾನರುಚಿಯಿಂ ನಿಷ್ಕಿಂಚನ ಬ್ರಹ್ಮಚ
ರ್ಯಮಹಾಮಾರ್ಗದಿನಿಂತು ಕೂಡೆ ದಶಧರ್ಮಂಗಳ್ ಭವಾರಣ್ಯ ಸಂ
ಕ್ರಮಣಕ್ಕಾಗಿಸಿದಂ ತಪೋಧನಲಸತ್ಪಾಥೇಯಮುಮಂ ತಾಪಸಂ ೧೪

ವ|| ಅದಲ್ಲದೆಯುಂ

ಆವಿಚಲಧೈರ್ಯದಿನಾಚಾ
ಮ್ಲವರ್ಧನಂ ನೆಗಟ್ದ ಸಿಂಹನಿಷ್ಕ್ರೀಡಿತಮುಂ
ಬಿವು ಮೊದಲಾಗಿರ್ದ ಮಹೋ
ಪವಾಸಮುಂ ಮೊದಲ ತಪದೊಳಾಂತಂ ಮುನಿಪಂ ೧೫

ಪಿರಿಯಕ್ಕರ

ನೆಗಟ್ದ ಸಾಕಾರದನಶನವೊಂದು [1]ತುತ್ತಿಂದವೊಂ[ದೂನ]ವುಳು[1]ಪ್ಪಿನಂ
ತೆಗೆದು ಕೊಳ್ವವಮೌದರ್ಯಂ ಚಿಹ್ನಂ[2]ಕುಡದದುಂ[2] ನಿಲ್ಲದವೃತ್ತಿ ಪರಿಸಂಖ್ಯಾನಂ
ಸೊಗಯಿಪ ರಸವ[3]ರ್ಗಂ[3] ಮಾಣ್ಬ ರಸಪರಿತ್ಯಾಗಮುಂಗನೆ [4]ಷಂಡ[4] ಪಶು ಮಾನಸಂ
ಮೃಗಮಿಲ್ಲದಲಿರ್ಪ ನುತವಿವಿಕ್ತಾಸನಮೆಂಬಯ್ದುಂ ತಪಮನಾ ಮುನಿ ತಾಳ್ದಿದಂ ೧೬

ಆಱುಸಲಂಗದ ಮಲಮಂ
ಪಾಱುಸಲಿಂದ್ರಿಯದ ದರ್ಪಮಂ ಮಾರ್ಗದ ಮೈ
ದೋಱುಸಲಾಱನೆಯ ತಪ
ಕ್ಕೇಱಿದನಾ ತಪದ ಪೆಸರೆ ಕಾಯಕ್ಲೇಶಂ ೧೭

ಹೃದಯದ ಕಾಂತಿಯಿಂ ಮರುಮರೀಚಿಕೆ ತೀರತರಂಗಿಣೀತರಂ
ಗದ ದೊರೆಯಾಗೆ ದಳ್ಳುರಿವೊಲೇೞ್ವ ಬಿಸಿಲ್ ಹಿಮಪುಂಜಮುಂ ಮುಸುಂ
ಕಿದ ತೆಱನಾಗೆ ತನ್ಮನಿಗೆ ಕಲ್ಮೆಲೆಯಲ್ಲಿದು ಬೆಳ್ಳವಾಸಮೆಂ
ಬುದನೆಸಗಿತ್ತು ಬೇಸಗೆಯ ಬೆಟ್ಟದ ಕಲ್ಮೆಲೆನಿಂದ ಗೌರವಂ ೧೮

ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮೞೆ ಕೂಡೆ ಲಚ್ಚಣಂ
ಬರೆದವೊಲುಳ್ಕೆ ಪೆರ್ಮೞೆಯ ರಾಶಿಗೆ ಮಿಂಚಿನ ಬಳ್ಳಿ ಭೂತಲಂ
ಬಿರಿಯೆ ಸಿಡಿಲ್ ಸಿಡಿಲ್ದೆಱಗೆ ಕಲ್ಲಬಳಾರನವೊಲ್ ತಪೋಧನಂ
ಮರಮೊದಲಿರ್ದನೆನ್ನದೊಡಲೆನ್ನದೊಡಂಬಡೆ ಮೇಘಕಾಲದೊಳ್ ೧೯

1 ತುತ್ತಿನಿಂದೊದವುಳಿ (ಎ) 2 ಗೂಡಿದಲ್ಲದೆ (ಎ) 3 ರ್ಗಮಂ (ಎ)
4 ಪೇಡಿ (ಇಎ)

ವೀರತಪಸ್ವಿ ನಿಂದನಿರುಳಂ ಪಗಲುಂ ಹಿಮಪುಂಜಮುಂಗದೊಳ್
ಬೂರಮನೊಟ್ಟಿದಂತೆಲೆಯೆ ತಣ್ಣೆಲರ್ಗೆೞ್ದು ತರಂಗಶೀಕರಾ
ಸಾರದ ಮಂಜು ಸುತ್ತಿಱಿದು ಕುತ್ತಿಱಿಯುತ್ತಿರೆ ಮಾಗೆಯೊಳ್ ನದೀ
ತೀರಹಿಮೋಪಲೋಪರಿಮದೊಳ್ ಬಗೆಗೊಳ್ಳದೆ ಬೆಳ್ಳ [1]ವಾಸಮೊಳ್[1] ೨೦

ವ || ಅಂತು ಷಡ್ವಿಧಮಾದ ಬಾಹ್ಯತಪಸ್ತಾಪದಿಂ ಹೃದಯಪಟ್ಟಂ ಪುಟವಿಟ್ಟಂತೆ ಕರ್ಮಾವಲೋಹಕಾಳಿಕೆಯಿಂ ಪಿಂಗುವಿನಂ ಪ್ರಮತ್ತಾಪ್ರಮತ್ತಗುಣಸ್ಥಾನವರ್ತಿಯಾಗಲೊಡಂ

ಈ ವಿಧದಿಂ ಪನ್ನೆರಡು ತ
ಪೋವಿಧಿಯಂ ಧೈರ್ಯದಿಂದೆ ನೆರಪಿ ಸಮುತ್ಸ್ವೀ
ಭಾವದೊಳೆ ಪರೀಷಹಮುಂ
ದ್ವಾವಿಂಶತಿಯಂ ಯತೀಶ್ವರಂ ಬೆಂಕೊಂಡಂ ೨೧

ಪ್ರಾಯಶ್ಚಿತ್ತಂ ವಿನಯಂ
ವೈಯಾವೃತ್ಯಂ ತಪಸ್ವಿಗನುಬದ್ಧಸ್ವಾ
ಧ್ಯಾಯಂ ವ್ಯುತ್ಸರ್ಗಪ್ರಾ
ಲೇಯಧ್ಯಾನಂ ತಪೋಧನಾಂತರ್ಯತಪಂ ೨೨

ವ|| ಅಂತು ವಿಶೋಧಿಪರಿಣಾಮಸಾಮರ್ಥ್ಯದಿನನಿವೃತ್ತಿಪರಿಣಾಮೋಪೇಕ್ಷೆಯಪ್ಪ ಕೆಯ್ದು

ಉಡುಗೆ ಮದಂ ಪಿಡಿಗೆ ಮಲಂ
ಕೆಡೆ ಜಂಘಾಶಕ್ತಿಯೂಥಪತಿ ಕಡುಪಿನ ಸಂ
ಗಡಮನುೞಿವಂತೆ ತಪದಿಂ
ಬಡಪಟ್ಟ ಮುಮುಕ್ಷುಗಣದ ಗಣಜಮನುೞಿದಂ ೨೩

ಕಡುಬಡವಾಗಿ ನೆಕ್ಕೆ ಗೆಡೆ ಮೆಯ್ಯ ಮಲಂ ದಳವೇಱಿ ಮೆತ್ತಿದಂ
ತಡರ್ದಿರೆ ಸಂಯಮೋಪಕರಣಕ್ಕೆಡಗೈ ಬಲಗೈ ಪೆಗಲ್ಗೆನೇ
ರ್ಪಡೆ ನೊಗದಂತರಂ ನಡೆಯೆ ಕಣ್ಕೆಸಱಿಂ ಕಱುವಿಟ್ಟ ಜಂತ್ರಮುಂ
ನಡೆಯಿಸುವಂತೆ ವರ್ತಿಪನರಣ್ಯದೊಳೇಕವಿಹಾರಿ ತಾಪಸಂ ೨೪

1 ವಾಸಿನೊಳ್ (ಆಇಉ)

ವ|| ಅದಲ್ಲದೆಯುಂ

ಪಗಲಿರುಳೆಂಬ ವೂರಡವಿಯೆಂಬ ಬಿಸಿಲ್ ನೆಟಿಲೆಂಬ ಮಾನಸರ್
ಮೃಗಗಣಮೆಂಬ ಕಲ್ನೆಲಮಿದೆಂಬಿದು ತಾಂ ಪೆಱರೆಂಬ ಭೇದಮೊಳ್
ಬಗೆಗಱವಿಲ್ಲ ತನ್ನೊಳಗೆ ತನ್ನನೆ ತಾನಱದಿರ್ದನಾತ್ಮಸಿ
ಷ್ಠೆಗೆ ಗುಱಯಪ್ಪವೊಲ್[1]ಪ್ರತಿಮೆಯ[1]ಪ್ರತಿಮಂ ಪ್ರತಿಮಾಂಗಯೋಗದೊಳ್ ೨೫

ನಂದದ ಬಿಸಿಲಿಂ ಬೆಮರೊಗೆ
ತಂದು ತನೂಮಲ[2]ದ ಕದಡುವೆರಸಿಱಯೆ ತಪೋ
ವೃಂದಾರಕನೊದವಿದ ಕಾ
ಳಿಂದಿಯ ಪರಿವೊನಲನಾಂತ ಗಿರಿಯಂತಿರ್ದಂ ೨೬

ಗೀಜಗನ ಗೂಡು ಕುಂತಲ
ರಾಜಿಯ ಬಱವಿಡಿದು ಕೆನ್ನೆಯಿಂದಿಱಯೆ ತಪೋ
ರಾಜನಪವರ್ಗಲಕ್ಷ್ಮಿಸ
ರೋಜಾತದ ಕನ್ನವುರಮನಿಟ್ಟಂತಿರ್ದಂ ೨೭

ಪಾಟಿಯೊಱಲೆಯಿಟ್ಟ ಪುತ್ತಿನ
ಪ್ರೋಟಿಲ ಪಾವುರಮನಡರ್ದು ಪೆಗಲಿಂ ಜೋಲ್ದೊಂ
ದೇಟಿಂಟೆಱತರೆ ಯತಿಪತಿ
ಬೇಟಿಲ್ವರಿದಿರ್ದ ಕಲ್ಪಕುಜಮಂ ಪೋಲ್ತಂ ೨೮

ಒರಸಿಕೊಳಲೆಂದು ಪೊರ್ದಿದ
ಹರಿಣಂ ಮೇಗಡರ್ದ ಪುತ್ತು ಸಾರ್ದಾಲಂ ಶಾಂ
ತರಸಪ್ರಭಾವಮೆಸೆದಿರೆ
ಧರೆಯೊಳ್ ಮೂಡಿದ ಸುಧಾಂಶುವಂ ಮುನಿ ಪೋಲ್ತಂ ೨೯

ವ|| ಅಂತುಪೇಕ್ಷಾಸಂಯಮಮೊಳ್ ನೆಗೞ್ತೆವಡೆದುಮಂತರ್ಭಾವಸಾಲಂಬಮು
ಮಾದ ಪರಮ ಪಾವನ ಪ್ರತಿಮಾಯೋಗನಿಷ್ಠೆಯೊಳ್

---

1 ಬ್ರತಮತಾ (ಎ)   2 ಳ (ಅಇ)

ಪಿರಿಅಕ್ಕರ

ಪದಿನೆಂಟುಂ ಭೇದ [1]ದೃದ್ಧಿ[1] ಘೋರಾದಿತಪೋಋದ್ಧಿಯಣಿಮಾದಿವಿಕ್ರಿಯದ್ಧಿ
ಪುದಿದಂಗಮಳಮೆ ದಿವ್ಯೌಷಧಮೆನಿಸಿದೌಷಧರ್ದ್ಧಿ ಕೆಯ್ಯೊಳಿಕ್ಕಿದ ನೀರಸಂ
ಪೃದುರಸಾಯನಮಪ್ಪ ರಸದ್ಧಿ ಯಳ್ಕದಬಳರ್ದ್ಧಿಯುಂಡುಮಿಕ್ಕನ್ನಮಿದಾ
ಸ್ಪದಮುಂಟುಕಟಕಕ್ಕಮೆನಿಸುವಕ್ಷೀಣರ್ದ್ಧಿಯಿಂತು ಸಪ್ತರ್ದ್ಧಿಯಂ ಮುನಿ ತಾಳ್ದಿದಂ ೩೦

ವ॥ ಅಂತು ತಾಳ್ದಿ

ಮಂದರದೊಳ್ ಗೊತ್ರಾಚಲ
ಕಂದರದೊಳ್ ಸಾಗರಾಂತರ್ದ್ವೀಪದೊಳಂ
ಬಂದೆಯ್ದರ್ಹದಕೃತ್ರಿಮ
ಮಂದಿರಮಂ ಚಾರಣರ್ದ್ಧಿಯಿಂ ಬಂದಿಸುವಂ ೩೧

ಸುಮನಸ್ಸದ್ಮಲತಾಂತಕಾಂತಮಣಿಮಾಲಾದೀಪಧೂಪಾರ್ಚನ
ಕ್ರಮದೇವೀಜನಗೀತವಾದ್ಯರಸಲಾಸ್ಯಪ್ರೇಕ್ಷಣಕ್ಷೋಭ್ಯಕೃ
ತ್ರಿಮಚೈತ್ಯಾಲಯವಂದನೋತ್ಕಳಿತಚಿತ್ತಂ ಬ್ರಹ್ಮಚರ್ಯಕ್ಕೆ ಭಂ
ಗಮಿಳಾಸ್ಪರ್ಶನಮೆಂಬವೊಲ್ ನಡೆವನಂಭೋದಾಧ್ವದೊಳ್ತಾಪಸಂ ೩೨

ಒಂದುಱದಿರೆ ಪಕ್ಷಂ ಮಕ
ರಂದಮಹೀಧರದ ಕಂದರೋಪಲದೊಳ್ ತಾಂ
ನಿಂದಂ ಸುಱಯದೆ ಪಕ್ಷಂ
ಕುಂದಿದ ಕಳಹಂಸನಂತೆ ಮುನಿಕಳಹಂಸಂ ೩೩

ವ॥ ಅಂತು ಪರಮೋಪೇಕ್ಷಾಪರಿಪಾ[2]ಕದೆಸೆಯೊಳ್[2]

ಪ್ರಶಮಿಸಿದ ಮೋಹನೀಯ
ಪ್ರಶಾಂತಿಯಿಂ ಸೂಕ್ಷ್ಮಸಾಂಪರಾಯಕ್ಷಪಕೋ
ಪಶಮಕಸಂಯತನಾದಂ
ದಶಮಗುಣಸ್ಥಾನವರ್ತಿ ಮುನಿಮುಖತಿಲಕಂ ೩೪

1 ದರ್ಧಿ (ಅ) 2 ಳನದ ಸೇದೆಯೊಳ್ (ಅ) ಳದಸೇದೆಯೊಳು (ಇ)

ತನು ತಾನಧ್ರುವಮಾರುಮಿಲ್ಲ ಶರಣಾನೇಕಾಕಿಯೆಂ ದೇಹಮುಂ
ತನತಲ್ತುಗ್ರತರಂ ಭವಂ ತ್ರಿಜಗಮಿಾಯಂದಂ ಜುಗುಪ್ಸಾಕರಂ
ತನು ಪಾಪಕ್ಕಿದು ಬರ್ಪ [1]ಬಟ್ಟೆಗೆ[1] ತೆರ್ಗಿವಂ[2]ತಾಗಿ[2]ದೀ ಪಾಂಗು ಗೆ
ಲ್ವ ನಯಂ ಧರ್ಮಮಡರ್ಪು ಬೋಧಿಪಳಮೆಂಬೀರಾಱನುಪ್ರೇಕ್ಷೆಯಂ ೩೫

ಪಿರಿಯಕ್ಕರ

ಮುನಿಗೆ ದರ್ಶನಶುದ್ಧಿ ವಿನೇಯಂ ಶೀಲವ್ರತಂ ಜ್ಞಾನೋಪಯೋಗಂ ತನು
ಮನಸ್ತಪನಸಮಾಧಿವೈಯ್ಯಾಪೃತ್ಯಮರ್ಹದಾಚಾರ್ಯಬಹುಶ್ರುತೋಪಾಸ
ನೆ ನುತಶ್ರುತಭಕ್ತಿಯಾವಶ್ಯಕಕ್ರಿಯೆ ಮಾರ್ಗಪ್ರಭಾವನೆ ವಾತ್ಸಲ್ಯಮಿಂ
ತನುವಾ[3]ಯ್ತು[3]ತೀರ್ಥ[4]ಕೃನ್ನಾಮಪುಣ್ಯಮನೀವ ಷೋಡಶ ಭಾವನೆಯಿಂ[4] ಭಾವದೊಳ್ ೩೬

ವ|| ಅಂತು ನೋಂತು

ಪ್ರಾಯೋಪಗಮನವಿಧಿಯಂ
ಕಾಯಮನಳವಡಿಸಿ ವಿಮಳಶುದ್ಧಧ್ಯಾನಂ
ಧ್ಯೇಯದೊಳಮರೆ ಮುಮುಕ್ಷು
ಜ್ಯಾಯಂ *ಪಂಡಿತಸಮಾಧಿವಿಧಿಯಂ ತಳೆದಂ ೩೭

ಅಳ್ಕದೆ ಚಿತ್ತದೊಳ್ ಬೆದಱಿ ಬೆಳ್ಕುಱದುಗ್ರತಪೋನುತಾಪದಿಂ
ಬಳ್ಕದೆ ನೋಂಪಿಯಿಂ ಗೊಲಗೆವಂದ ಶರೀರಗುಣಾನುರೋಧದೊಳ್
ತ[5]ಳ್ಕಿ[5]ಱಿದಿರ್ದು ಜೀವಶರಮಂ ಬಿಡೆ ಧಾರ್ಮಿಕಚಕ್ರವರ್ತಿ ತಾಂ
ಪಿಳ್ಕು ಬಳಿಲ್ದು ಮೇಗೊಗೆದು ತಾಗಿದುದಚ್ಯುತಕಲ್ಪಲಕ್ಷ್ಯಮಂ ೩೮

---

1 ಬಟ್ಟೆ (ಅಇಉ) 2 ದಾತಾಗಿ (ಅಇಉ) 3 ಯ್ತು (ಇಎ) 4 ಕೃತನಾಮ ಕರ್ಮವನೀವಷೋಡಶ ಭಾವನೆಯೆ (ಅ) ಕೃತನಾಮಕರ್ಮವನೀವ ಷೋಡಶಭಾವನೆಯುಮಂ (ಇಉ) 5 ಳ್ಕ (ಅಇಉ) ಗು (ಎ)

* ಆಚಾರಾಂಗದ ಆಜ್ಞಾ ಪ್ರಮಾಣಕ್ಕನುಸಾರವಾಗಿ ಹೇಳಲ್ಪಟ್ಟ ಚಾರಿತ್ರವನ್ನು ಧಾರಣೆ ಮಾಡಿ ಶರೀರತ್ಯಾಗಮಾಡುವುದಕ್ಕೆ ಪಂಡಿತ ಸಮಾಧಿಮರಣವೆಂದು ಹೆಸರು. ಪಂಡಿತ ಮರಣವು ೧. ಭಕ್ತಪ್ರತಿಜ್ಞಾ ೨. ಇಂಗಿನೀ ೩. ಪ್ರಾಯೋಪಗಮನವೆಂದು ಮೂರು ಪ್ರಕಾರವಾಗಿದೆ. ಇದರ ವಿಶೇಷ ವಿಷಯವನ್ನು ಶಿವಕೋಟಿ ಆಚಾರ್ಯರ ಭಗತೀಆರಾಧನೆಯನ್ನು ನೋಡಿ.

ಅಣಿಮಾದಿಮಣಿಗಣಂಗಳ
ಕಣಿ ಸಾಗರಸಂಮಿತಾಯುವಿಂಗಾಗರಮೊಂ
ದಣಕದ ರಾಗದ ಭೋಗದ
ತಣಿವಿಂದ್ರತ್ವದ ಮಹತ್ವಮಚ್ಯುತಕಲ್ಪಂ ೩೯

ಅವಱ ವಿಳಾಸಮಂ ಪೊಗೞಲಾನಱಿಯೆಂ [1]ಪ[1]ದಿನಾಱು ಸಗ್ಗದ
ಗ್ಗದ ಸುಖಮೊಂದು ತುತ್ತತುದಿ ಸಂ[2]ದಿ[2]ಪವಿಂದ್ರಸುಖಕ್ಕೆ ಸಿದ್ಧಿ ಸೌ
ಖ್ಯದನಿಳಯಕ್ಕೆ ನೊತ್ತಮೊದಲಚ್ಯುತನಾಮಮಿವಕ್ಕೆ [3]ಸಾ[3]ಮ್ಯಮೆಂ
ಬುದ[4]ದೇ[4]ನೆ ತಾನೆ ನಟ್ಟನಡುವಾದುದು ಕಲ್ಪಮನಲ್ಪಸೌಖ್ಯದಾ ೪೦

ವ। ಅಂತು ನೆಗೞ್ತೆವಡೆದಚ್ಯುತಕಲ್ಪಲಕ್ಷ್ಮಿಗುತ್ತಂಸಕಲ್ಪಮೆನಿಸಿ

ಮುತ್ತಿನ ಕಂಭದ ವಜ್ರದ
ಭಿತ್ತಿಯ ಶಶಿಕಾಂತವಭ್ರಶಿಲೆಯ ನೆಲಗಟ್ಟಿನ ಪು
ಷ್ಪೋತ್ತರವಿಮಾನದೊಳಗಿ
ಪ್ಪತ್ತೆರಡಂಬುಧಿಮಿತಾಯು ಸುರವರನೊಗೆದಂ ೪೧

ನವರತ್ನಾಭರಣಪ್ರಭಾಪಟಳನೊಳ್ನಿರ್ಮಲ್ಯ[5]ತೇಜಸ್ತ[5]ನು
ಚ್ಛವಿ ಸಂಪೂರ್ಣಸುಧಾಂಶುವಂ ಸುರಧನುಶ್ರೀಯಸ್ಪಿದಂತಾಗೆ ತ
ನ್ನವಿಮಾನಂ ಶರದಭ್ರವಿಭ್ರಮಮನಾದಂ ಬೀಱಿ ಕೈಕೊಂಡನಾ
ಭುವನಾಗ್ರೇಸರನಚ್ಯುತೇಂದ್ರಪದವೀ ಸಾಕಲ್ಯಮಾಂಗಲ್ಯಮಂ ೪೨

ದಿವಿಜಾಧೀಶನಧೀನಮಾಯ್ತು ಸಲೆ ಪೀತಶ್ವೇತಪಾರೀತರ
ತ್ನವಿಮಾನಂ ಶ್ರಿಶತೀಶತಾರ್ಧ[6]ವಿಭವಾಜ[6]ಸ್ಯಂದನಾಂಘ್ರಿಯಪುಂ
ಗವ ಗಂಧರ್ವನಟೀವರೂಥಿನಿಗಳಿಳೇಶಾಧಿಪರ್ನಾಲ್ವರೊ
ಪ್ಪುವ ವೈಮಾನಿಕದೇವಮೊಂದಯುತ[7]ರೆ[7]ಣ್ಬರ್ಪಟ್ಟಮಾದೇವಿಯರ್ ೪೩

ತ್ರಿಪದಿ

ಮೂವತ್ತಿರ್ವರ್ ಮುಖ್ಯದೇವಿಯರಱುವತ್ತುಂ
ಮೂವರ್ದೇವಿಯರೆನಿಪ ಪಸಾಯಿತೆಯರಾ
ದೇವನ ವಿಭವಮಸದೃಶಂ ೪೪

---

1 ಪ (ಅಇ) 2 ಪ (ಉ) 3 ಸಾ (ಅಇ) 4 ನೆ (ಅಇಉಎ)
5 ಬೀಱಂತ (ಅಇಉ) 6 ವಿಭವಾದಿ (ಅಇ) 7 ಮೆ (ಎ)

ಆ ಸುರವರನಿರ್ವ್ವರ್ತ್ತಿ
ಚಾರ್ಗ್ಗಿನಿರವರ್ಗಕ್ಕೆ ನೆನೆನೆಮೆಲೆಸಂ ಬರಿಸಂ
ಮಾ[1]ಸೋ[1]ನಮಾಗೆ ಪಿಜನ
ಶ್ವಾಸದ ಪರಿಮಳದೆ ದಿವಮನಧಿವಾಸಿಸುವಂ ೪೫

ನೋಟದ ಸೋಲಮುಟ್ಟಿನ ಸುಖಂ ರಸಚುಂಬನದಿಂಪು ಸುರನ್ನಕಂ
ಪಾಟಿಸಲಿಲ್ಲೆ ಮೆ[2]ಯ್ಯೊಳಲ್[2] ಸುಂದಪ್ಪವೆ ಮುಲರ್ಗಣ್ಯುಬಿಂಬಿಯಂ
ಜೋಟದ ಗೊಂಚಲಂತೆ ಮನಮೊಲು ಕೊಡಂಚಿಯೊಳೊ[3]ನೋರ್[3]ದಲ್ ಸುಜಾ
ಸ್ಯೋ[4]ಟಿಮನೇ[4]ವುಪಿನ್ನವು ಮನಃಪ್ರಬಿಚಾರದ ಕಾಮಕೇಳಿಗಳ್ ೪೬

ತರುಲತೆಯುಂ ವಸಂತನನುಯುಂ ಕಲಿಕೋದ್ಗಮಸೌರಭಂಗಳೊಳ್
ಪೊರೆದವೊಲಂಗನಾಸಹಿತನಾದಿವಿಜಾಧಿಪನಂ ಮನಃಪ್ರಬಿ
ಚರಣಸುಖೋದಯಂ ಸಮುಸಮುದ್ಭವಸಂಗತಿಯಿಂದಲಂಪಿನ
ಚ್ಚರಿಯನೊಡರ್ಚಿ ಮೂಡಿ ಮುಟ್ಟುಗಾಡಿಸುಗುಂ [5]ಸುರ[5]ತಾನ್ಯತಾಬ್ಧಿಯೊಳ್ ೪೭

ಪಳುಕಿನ ಪಸೆಯೊಳ್ ಕಪ್ಪುರ
ವಳುಕಿನ ಪುತ್ತಳಿಯನೀಟಿಪಿದಂತೆ ಮೊಟುಂ ಮೂ
ಅಳಕೆಯ ತನುರುಚಿ ಕಂಪಿನ
ಪೊಳಪಿನ ಕೌಮುದಿಯನೀಂ ಕಡಲ್ಬಿರಿಯಪ್ಪುದೋ ೪೮

ಸ್ಫುರಿತವಿಮಾನಭಿತ್ತಿಗಳ ಚಿತ್ರದ ಮೇಲೆ ಸುಧಾರಸಂಗಳಿಂ
ದರೆಬಳಿದಂತೆ ಸುತ್ತಿಜಾದ ನಾಕನಿಕಾಯಮನಚ್ಛಮುತ್ತಿನೊ
ಚ್ಚರದೆ ಮುಸುಂಕುವಂತೆ ಸುರಕಾಮಿನಿಯರ್ಗಳ ಕಣ್ಬೆಲಗೇ ಕ
ಪ್ಪುರದ ಶಲಾಕೆಯಂ ಪಸರಿಸಂತೆಸಗುಂ ಪಿಸುಪಚ್ಯತೇಂದ್ರನಾ ೪೯

ಮದನನ ಬಿಲ್ಲ ಜೇವೊಡೆ ಪಿಸುಂಚಿಯ ಬಂಚದ ನುಣ್ಪು ಕರ್ಣ[6]ಪ್ರ
ರೋದ ಪರಮಾಸ್ಯತಾಂಬುನನೆ ನೇವ್ವುರದಿಂದುಡೆನೂಲ ತೊಂಗಲಿಂ
ಮೃದುರವಮುಣ್ಮೆ ಕೂಡಿ ಸುಟೀವರ್ ಕಮನಾದನೊಳಿಂದ್ರಕಾಂತೆಯರ್
ಸದನಮುಕತ್ತ್ರದಾ ಮರೆಯರಪ್ಸರೆಯರ್ ಪರಿವಾರದೇವಿಯರ್ ೫೦

---

1 ಕೂ (ಅ) 2 ಯ್ಯೆ (ಅಇಉ) 3 ಕೊ (ಅ ಇ ಉ) 4 ಯಮ (ಅ ಇ) ವುಪಿ (ಉ) 5 ಸತ (ಅಇಉ) 6 ದಾನ (ಎ)

ಸಹಜವಿಭೂಷಣಾಂಬರವಿಲೇಪನಕೇಸರದಾಮಗಂಧಸ
ಸ್ಪೃಹಮಧುಪಾಳಿ ಮಂಡಳಿಸಿ ಸೀಗುರಿಯಂತಿರೆ ಚಾಮರಂಗ[1]ಳಂ[1]
ಬಹುವಿಧಮಿಕ್ಕುವರ್ ದಿವಿಜನೋಲಗದೊಳ್ ತನುಕಾಂತಿ ಕೌಮುದೀ
ಲಹರಿಯ ತುಂತುಱಂತೊಗೆಯೆ ಮುದ್ದಿನ ಬರ್ದಿನ ವಾರನಾರಿಯರ್ ೫೧

ಪಗೆ ಪೆಱತಿಲ್ಲ ಕಂಟಕಸಮಾಕುಲಮಿಲ್ಲ ವಿಭೀತಿಯಿಲ್ಲ ಭೂ
ತಿಗೆ ಕುಱುಪೆಂಬ ಕಿಂಕರರ ತೊಣ್ಮೆಯಿದೆಂಬ ವಿಲಾಸಮೆಂಬ ದೇ
[2]ಸೆ[2]ಗೆ ದಶಲಕ್ಷ ಲೆಕ್ಕದಸಿಖೇಟಕಕೋಟಿಯ ಮಿಂಚು ಬಳ್ಳಿದೀ
ವಿಗೆಯನಲ[3]ರ್ಚೆ[3] ದೇವಸಭೆಯೊಳ್ ಮೆಱೆವರ್ ದಿವಿಜಾಂಗರಕ್ಷಕರ್ ೫೨

ಪದಿನಾಱುಂ ಪಟಲಂಗಳಪ್ಪ ದಿವಮುಂ ತುಟ್ಟುರ್ಚೆಯುಂ ಮಧ್ಯಲೋ
ಕದಿನಿತ್ತಲ್ ಕೆಳಗಯ್ದು ಪೃಥ್ವಿಗವಧಿಜ್ಞಾನಾಕ್ಷಿ ಸಲ್ವಂತೆ ಸ
ಲ್ವುದು ತಾಂ ವೈಕ್ರಿಯಿಕಾಂಗವೆಂದೊಡೆಸಕಂಬೆತ್ತಚ್ಯುತೇಂದ್ರಂಗೆ ಮಾ
ಡದುದೇಂ ಕೂಡದುದೇಂ ಒಡಂಬಡದುದೇಂ ನಿಸ್ಸೀಮಸಾಮರ್ಥ್ಯದೊಳ್ ೫೩

ವನಧಿ ದ್ವೀಪಸುಮೇರುವರ್ಷಧರನಾಗಾವಾಸನಂದೀಶ್ವರಾ
ವನಿಗಳ್ಗೆಲ್ಲಮಕೃತ್ರಿಮೋತ್ತಮಜಿನಾವಾಸಕ್ಕೆ ಬೆನ್ನಿತ್ತು ವಾ
ಹನದೇವರ್ ಗಜವಾಜಿಸೈರಿಭಗವೇಂದ್ರಾಕಾರಮಂ ತಾಳ್ದು ತಿ
ರ್ಪಿನಮೇಟ್ಟಿಂದು ಮಹಾಮಹೋತ್ಸವಮನಾಕಲ್ಪಾಮರಂ ಮಾಡುವಂ ೫೪

ಅಮರೇಂದ್ರಾಣಿಯರೊಂದನಂತಮಮರೀಸಂದೋಹಮಂತೊಂದನಂ
ತಮಲಂಪಿಂ ಬರೆ ತೀರ್ಥಕೃತ್ಪದಸಪರ್ಯೋಡ್ಡೀನಯಾನಂಗಳಿಂ
ದಮರೇಂದ್ರಂ ರಸಭಾವಚಿತ್ರಗತಸೂಚೀಯಾನನಾನಾವಿತಾ
ನಮಯಂ ಮಾೞ್ಪಿನುಪಾತ್ತಸಪ್ತವಿಧ ಸೇನಾಸ್ತೋಮಮಂ ವ್ಯೋಮಮಂ ೫೫

ಅಣುತಮನಾಗಿ ಮೇರುಸಮನಾಗಿ ಧರಾಗುರುವಾಗಿ ನೋೞ್ಪಿನಂ
ತೃಣಸಮನಾಗಿ ಲೋಕಸದೃಶಾಯತನಾಗಿ ಸರಾಗನಾಗಿ ವಾ
ರಣಪತಿಯಾಗಿ ಮೋಹನತರಾಕೃತಿಯಾಗಿ ಜಿನಾರ್ಚನಕ್ಕೆ ಪೆ
ಕ್ಕಣಮನೊಡರ್ಚೆ ತೋರ್ಪನಣಿಮಾದಿಗುಣಂಗಳನಚ್ಯುತಾಮರಂ ೫೬

---

1 ಳಿಂ (ಅಇ) 2 ಶ್ಯ (ಅ ಇ) 3 ರ್ಚಿ (ಅಇ)

ಅಸಿತೊಂದಚ್ಚರಿಯಚ್ಯುತೇಂದ್ರ[1]ನೆ[1] ಭವತ್ಸರ್ವಾಂಗಲಕ್ಷ್ಮೀಪ್ರಣೂ
ತನಗ[2]ರ್ಭ[2]ಕ್ಕೊಗೆದಪ್ಪನೆಂದು ಮುನಿನಾಥರ್ ಪೇೞ್ದರಾಕಲ್ಪಜೇಂ
ದ್ರನನಂತಂ ಪರಮಂ ಚತುರ್ದಶಜಿನಂ ತತ್ಪುತ್ರನೆಂದಿಷ್ಟಶ
ರ್ಮನದೇಂ ಪೇೞ್ದನೊ ಸಿಂಹಸೇನನರನಾಥಂಗಂ ಜಯಶ್ಯಾಮೆಗಂ ೫೭

ವ || ಅಂತು ಕೇಳ್ದು ಸಂತೋಷಭಾಷಾಪಿಯೂಷಪೂರದೊಳ್ ಸಭಾಜನ ಪರಿಜನ ಬಂಧುಜನಮನಿತುಂ ತುಱುಂಕಿ ತೇಂಕಾಡುವಿನಮರಸನುಮರಸಿಯುಂ ಪರಿತೋಷದ ಪರಮಕೋಟಿಯನೆಯ್ದಿ

ಸ್ವಾತಿಯೆ ಬರ್ಷವೊಲ್ ಮದನಮಂಜರಿ ಬಂದೊಸೆದಿಷ್ಟಶರ್ಮ ಜೀ
ಮೂತಮುಖಾಗ್ರದಿಂ ಪ್ರಚುರಚಾರಣಸನ್ಮುನಿಹೈಮಶೈಲಸಂ
ಭೂತಕಥಾಂಗಗಾಂಗಜಲವರ್ಷಮನಾಗಿಸೆ ತನ್ನೃ[3]ಪೇಂದ್ರಯು
ಗ್ಮಾ[3] ತಳಮಾಯ್ತು ಪಾವನಪದಂ ಪುಲಕೋದ್ಗಮಸಸ್ಯಸಂಪದಂ ೫೮

ವ|| ಅನಂತರಮಿಷ್ಟಶರ್ಮನವನೀವಲ್ಲಭಂಗಿಂತೆಂದಂ :—

ಕೃತಕೃತ್ಯರಾದೆವಾಂ ಮುಂ
ಸುತನಂ ತ್ರೈಲೋಕ್ಯನಾಥನಂ ಪಡೆವೀ ದಂ
ಪತಿಯಂ ನಿಮ್ಮಂ ನೋಡಿದ
ಕತದಿಂದಿನ್ನೆಮಗೆ ದೇವ ಬೀೞ್ಕೊಡವೇೞ್ಕುಂ ೫೯

ವ|| ಎಂಬುದುಮಾಧರಾಮರಬಿನ್ನಪಮನವಧಾರಿಸಿ

ಸಮನಿಸಿದ ಕಲ್ಪಕುಜದಾ
ರಮೆ ಪಣ್ತೆಱಗಿದವೊಲಿತ್ತು ನರನಾಥನ ತೋಳ್
ಸುಮನೋಹಕಮಂಬುದನಾ
ಮಮುಮಂ ದ್ವಿಗುಣಿಸಿದುದಿಷ್ಟಶರ್ಮಂಗಾಗಳ್ ೬೦

ಒಡೆಯಳ್ ಮನಕ್ಕೆ ವಲ್ಲಭೆ
ಯೊಡೆಯಳ್ ರಾಜ್ಯಕ್ಕೆ ಮದನಮಂಜರಿಯೆನೆ ಮೆ
ಲ್ಲುಡಿಗೆಗಳಿಂ ಮಿಸಲ್ಗಳೆ
ದುಡಿಗೆಗಳಿಂದಂ ನನಾಂದ್ರುವಂ ಮನ್ನಿಸಿದಂ ೬೧

ವ|| ಅಂತು ಮನ್ನಿಸಿ ಬೀೞ್ಕೊಡಲೊಡವೊಡನೆೞ್ದು ತಳ್ಕೈಸಿಕೊಂಡು ಪೊಡೆವಟ್ಟು ಸಹೋದರೀವಿಯೋಗವಿಹ್ವಳೀಭೂತಚೇತಸೆಯಾಗಿ

---

1 ವಿ (ಅ ಇ ಉ) 2 ರ್ವ (ಅ ಇ ಉ) 3 ಪೇಂದ್ರನುದ್ಮಾ (ಅ.ಇ)

ಅವನಮ್ರಾಸ್ಯಾಬ್ಜೆಯಂ ಪ್ರೋತ್ಕಳಿತಹೃದಯೆಯಂ ಸಾರ್ದು ತಕ್ಕೈಸಿ ಪುತ್ರೋ
ತ್ಸವವಾರ್ತಾ ಕರ್ತೃ ನಿಮ್ಮಗ್ರಜೆ ತಡೆದಪಳೇಂ ಬಂದಪಳ್ ತಂದಪಳ್ ನಿ
ಮ್ಮವರಂ ಕಂಡಪ್ಪಿನಂ ಸಂತಸದಿನಮರಿನಿಂ ಪೋಗು ಬರ್ಪಂದಮೇಂ ಕೈ
ರವನೇತ್ರೇ ಬೀೞ್ಕೊಡಿನ್ನೆಂದುಸಿರ್ದು [1]ನಿಲಿ[1]ಸಿದಂ ನಲ್ಲಳಂ ಸಿಂಹಸೇನಂ ೬೨

ಅವರತ್ತಲ್ ಪೋದರಿತ್ತಲ್ ನರಪತಿ ಮುದದಿಂದರ್ದನುತ್ತಲ್ ಬಱಿಕ್ಕಾ
ದಿವಿಜಂ ಷಣ್ಮಾಸಮಾಗಾಯುವಜಳಧಿಗಳಿನಿಪ್ಪತ್ತೆರೞ್ತೀರೆವಂದ
ಪ್ಪುವು ಶಾವೇಂ ಬಂದು ಜೃಂಭಾವಳಿ ಮುಖರಸದೊಳ್[2] ನಿ[2]ಂದುವಂಗಾಂಶುಗಳ್ಕಂ
ದುವ ಭೂಷಾರಶ್ಮಿಗಳ್ಕಂದುವ ಮುಡಿವಲರ್ಗಳ್ ಕಂದುವಂತಲ್ಲಿ ಕಂಡಂ ೬೩

ಖಳಕಾಳಾಂತಕವಜ್ರಪಾತಮನಮರ್ತ್ಯಾಗ್ರೇಸರಂ ಕಂಡು ಸಂ
ಚಳನಾದಂ ಗಡ ಕೊಂಕಿದಂ ಗಡೆಡೆಯೊಳ್ ತಳ್ಳಂಕಗೊಂಡಂ ಗಡಾ
ಕುಳನಾದಂ ಗಡದೊಂದುಮಿಲ್ಲ ಮನಮಂ ಮೋರ್ಬೈಸಿ ಕಟ್ಟಾಯದಿಂ
ಕಲಿಯಂ ಕಟ್ಟಿ[3]ದಿ[3]ರಲ್ಲಿ ಮೂದಲಿಸಿದಂತುತ್ಸಾಹಮಂ ತಾಳ್ದಿದಂ ೬೪

ವ|| ಅಂತು ನಿಶ್ಚಲಚಿತ್ತನಾಗಿ

ಮಾಲಿನಿ

ಪರಮಜಿನಪದಾಂಭೋಜಾತದೊಳ್ ಭೃಂಗಮಾಲಾ
ಪಱಿಕರಮೆನೆ ಕಣ್ಗಳ್ ಪೂಜೆ[4]ಯೊ[4]ಳ್ ಕಲ್ಪಭೂಜಾ
ಪಱಿಲತೆಯೆನೆ ಕೆಯ್ಗಳ್ ಶುದ್ಧಚೈತನ್ಯರೂಪಂ
ಗಿರಲೆಡೆಯೆನೆ ಚಿತ್ತಂ ದೇವತಾನಿಷ್ಠನಾದಂ ೬೫

ಇತ್ತಲ್ ಸಾಕೇತದೊಳಮ
ರೋತ್ತಮನವಧಿಯಿನನಂತನಾಥೋದಯಮಂ
ಚಿತ್ತದೊಳಱಿದಱುದಿಂಗಳ
ನಿತ್ತುಂಟೆನೆ ಪುಣ್ಯಜನವರಂಗಱಿಪಲೊಡಂ ೬೬

ಅರಮನೆಗಿಂಬುವೆತ್ತ ರಣಮಂಡಲಮೊಳ್ ರಸಚಿತ್ರಭಿತ್ತಿಯಂ
ವಿರಚಿಸೆ ನೂತ್ನರತ್ನಶಬಲಚ್ಛವಿ ಕೊಂಡುದು ತಂಡತಂಡದಿಂ
ಸರಸಿಜರಾಗರತ್ನದ ಬಿಸಿಲ್ಮಿಱೆ ಮೌಕ್ತಿಕರತ್ನದೊಂದು ಬೆ
ಳ್ಸರಿ ಹರಿನೀಲರತ್ನದ ಕಱಂಗಿದ ತಂದ[5]ಲು[5]ಗುಂದಲೆಂಬಿನಂ ೬೭

---

1 ನೆರೆ (ಅ) 2 ಮುಂ (ಎ) 3 ದ (ಅ) 4 ಗ (ಅಇಉ)
5 ಲ (ಅಇಉ)

ಆ ರಾಜಗೃಹಾಂಗಣದೊಳ್
ಓರೆಯು ಹೊಪಿಂದೆ ಸಮೆದ ಪೊಸ ಪೊನಲಿಯೊಳ್
ಕಾರಿಲ್ಲದೆಯುಂ ಕಱೆದುವು
ನೇರಾಣೆಯ ಹೊನ್ನ ಮೞೆ ಕುಬೇರನ ಬೆಸದಿಂ ೭೮

ಅಲಿವರಲಿಂದ್ರಗೋಪಂ
ಸಾಲಿಟ್ಟುದ ಬಂದುವೆಂದು ಗೃಹಕೇಕಿಗಳುಂ
ಪೀಲಿಗಳನೆತ್ತಿ ಕುಣಿದುವು
ನೀಲದ ಮಾಣಿಕದ ಮುತ್ತಿನೆಚ್ಚರಿವೞಿಯೊಳ್ ೭೯

ವ|| ಅಂತು ಸುರಿವ ಸಾರ್ಧತ್ರಿಕೋಟಿಪರಾರ್ಧ್ಯರತ್ನವೃಷ್ಟಿವರ್ಷಪ್ರಚಾರಸಾರಸಾರೀವಿಕಾರಪ್ರಪಂಚಮುಮಿತಸ್ತತಃ ಪ್ರಧಾವ[1]ತ್ಸಂ[1]ಜಕುಬ್ಜವಾಮನಸ್ತ್ರೀಮುಮಣಿಧಾರಾಘಾತಭೀತನಟನಭಾವಮುಂ ಜಂಬೂಫಳದಾಡಿಮಬೀಜಸಂಶಯವ್ಯಾಪದಸಿತನೀಳಮಾಣಿಕ್ಯಕಾರ್ಕಶ್ಯಭೃಶ್ಯಮಂತರ್ಗಣಕೀರಶಾರಿಕಾಮರ್ಕಟಸಂಕಟಮುಮಾನನಕುಶೇಶಯಕ್ಕೆ ದರಹಾಸಮಾಲೆಯನೋಲಗಿಸೆ ಪರಿಮಿತ ಪ್ರಸಾದಿತ ಪರಿಜನಪರೀತಂ ತಲ್ಪತಳಾಕಲ್ಪಿತಭೂತಜಯಶ್ಯಾಮಾದೇವೀ ಸಮೇತಂ ಸಿಂಹಸೇನನಾಸ್ಥಾನಮಂಡಪದೊಳಿರ್ದನಾ ಪ್ರಸ್ಥಾವದೊಳ್

ಎಳೆಮಿಂಚಿಂ ಕಡೆದಂತೆ-ಚಂದ್ರಕಳೆಯಿಂ ಕಣ್ಡಿಟ್ಟರೆಂಬಂತೆ ಕಂ
ಗೊಳಿಪಂಗಚ್ಛವಿ ಕಂಕಣಾಂಗದವತಂಸೋತ್ತಂಸರತ್ನಾಂಶುಮುಂ
ಡಳಮುಂ ಬಣ್ಣವಿಡುತ್ತುಮಿರ್ಪನೆಗಮೊರ್ವಂ ಬಂದನಾಸ್ಥಾಯಿಕಾ
ವಳಯಂ ಸೂಡಿದ ಪಾರಿಜಾತದಲರ್ಗಂಪಿಂ ಕೇಂಕೆ ವೈಮಾನಿಕಂ ೮೦

ವ|| ಅಂತು ಬಂದು ಸಮುಚಿತಪ್ರದೇಶದೊಳ್ ನಿಂದು ಕರಕಮಲಮುಕುಳಮಂ ನೊಸಲ್ಪಿಱಿಗೆ ತಂದು ದೇವಾ ಬಿನ್ನಪಮೊಂದಿಂತೆಂದಂ

ಅವನೀಪಾಲಕಮೌಲಿಮಂಡನ ಭವತ್ಸರ್ವಾಂಗಮಾಂಗಲ್ಯ ಲ
ಕ್ಷ್ಮಿವಧೂವರ್ಗದೊಳಾ[2]ವುದಂ[3] ನೆಱೆಯೆ ಮುನ್ನಂ ನೋಂತಳಾಪಡುವಾ
ಡುವ ಕೊಂಕಾಡುವ ಮಾಡುವೊಂ[4]ದಿಸುವೆಸಂ[4]ಗಳ್ಗಟ್ಟಿದಂ ದೇವ ಪಾ
ರವಧೂವರ್ಗಮನೀಮಹಾಸತಿಗೆ ಪೌಲೋಮಿಮಾಮನೋವಲ್ಲಭಂ ೮೧

---

1 ತ್ಸಂ (ಅಇಉ) 2 ಯೊಪದಾಶ್ರಿತ (ಅಇಉ) 3 ಯುಧಂ (ಅಇ) ವಿದಂ (ಉ) 4 ದುದಿವಸಂ (ಅಇಉ)

ವ|| ತದನಂತರಂ

ಭೂಮೀಶ ಸಭೆಯೊಳನಿಮಿಷ
ಕಾಮಿನಿಯುರನಿತ್ತ ದೇವ ಚಿತ್ರೈಸೆನುತುಂ
ವ್ಯೋಮಾಂತರದೊಳ್ ತೋಱುವ
ವೈಮಾನಿಕನಿಂದ್ರಜಾಲಿಗಂಗೆಣೆಯಾದಂ ೭೨

ವ|| ಆಗಳುದ್ಧರಿತಕಂಧರಮುಮುವತ್ತಂಭಿತಹಸ್ತಪತಾಕಮುಂ ಪ್ರಾಚೀಮು ಖೋನ್ಮುಖಪ್ರಕರಮಾದ ಪರಿಷಜ್ಜನವಿಲೋಚನಮರೀಚೀಪಟಲಮೆ ಸೋಪಾನಮಾರ್ಗ ಮಾಗೆ

ಸರಸಿಜಷಂಡಮಂ ಕಱಿಯೆ ಪಾದತಳಂಗಳ ಕೆಂಪು ಸೂಸೆ ನೇ
ವುರದುಡೆನೂಲ ರತ್ನರುಚಿ ಶಕ್ರಧನುಸ್ಸುಗಳಂ ಪ್ರಭಾಪಯೋ
ಧರಭರಮೊಡ್ಡುಮಾಡೆ ಕಲಶಾವಳಿಯಂ ಬಳಿಕಿಂದುಮಾಲೆಯುಂ
ಪರಪೆ ಮುಖಪ್ರತಾನಮಿೞಿದತ್ತೆಲರ್ವಟ್ಟೆಯಿನಪ್ಸರೋಗಣಂ ೭೩

ವ|| ಆನಿತಂಬಿನೀಕದಂಬಮುಂ ತೆಂಬಲರೆಂಬ ಪಡೆವಳನಂಗಜರಾಜಂಗಾಳ್ದೋಱು ವಂತೆ ಬೇಱಿಮೋಱಿ ನಿಲಿಪಂತೆ ರಾಜಾಙ್ಗಣದೊಳ್ ತಿರ್ದಿಸಲಿಸಿ

ದೆಸೆದೆಸೆಯನಿತಕ್ಕಂ ದರ
ಹಸಿತಾನನವಳಯದಂತೆ ಸೊಗಯಿಪ ಪದ್ಮಾ
ದಿಸರೋವರಂಗಳೊಳ್ ಪಳ
ಯಿಸಿದರಿವರ್ ದೇವ ಪೆಸರೆ ದಿಗ್ದೇವತೆಯರ್ ೭೪

ವ|| ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಎಂಬಱುವರುಮಂ ಪೂರ್ವ ದಿಶಾ ನಾಥಂ ಸರ್ವದಿಶಾರಕ್ಷಣಾರ್ಥಂ ಕಳಿಪಿದನೆಂದು ತೋಱಿ ಪಿಂಗಿಸಿ ಮತ್ತಮಿಂತೆಂದಂ:—

ವಿಚಕಿಲಕುರುವಕವಕುಳ
ಪ್ರಚಯದೆ ಮಂಡವಿಗೆ ಚಂಪೆಯಂ ನೆಲೆಮಾಡಂ
ರಚಿಯಿಸೆ ನೆಲಸಿದರಿವರಾ
ರುಚಕಾದ್ರಿಯ ಮೂಡಣೆಂಟು ಶಿಖರದ ವನದೊಳ್ ೭೫

ವ॥ ಜಯೆ, ವಿಜಯೆ, ಜಯಂತಿ, ವೈಜಯಂತಿ, ಅಪರಾಜಿತೆ, ಆನಂದೆ, ನಂದೋತ್ತರೆ, ನಂದಿವರ್ಧನೆಯರೆಣ್ಬರುಂ ಕನ್ನೆಯರಿವರಂ ನಿಜಾಂಗನೆಗೆ ಮಂಗಲೋತ್ಸವದೊಳ್ [1]ಭೃ[1]ಂಗಾರಕಲಶಧಾರಿಣಿಯರಾಗಿ ಬೆಸಸಿದನೆಂದು ಪೆಸರ್ವೆಸರೊಳೆ ತೋಱಿ

ಮತ್ತಂ ರುಚಕದ ದಕ್ಷಿಣ
ಭಿತ್ತಿಯನಧಿಕರಿಸಿ ಮಾಟಕೂಟಪ್ರಾಸಾ
ದೋತ್ತುಂಗಸದನ[2]ಮೆನೆತ[2]
ಮ್ಮುತ್ತೆಣ್ಬರುಮಿರ್ಪರೆಂಟು ಕೂಟಂಗಳೊಳಂ ೭೬

ವ॥ ಇವರ ಪೆಸರ್ ಸುಪ್ರಣೀತೆಯುಂ, ಯಶೋಧರೆಯುಂ, ಲಕ್ಷ್ಮೀಮತಿಯುಂ, ಕೀರ್ತಿಮತಿಯುಂ, ವಸುಂಧರೆಯುಂ, ಸುಸ್ಥಿತೆಯುಂ, ಸಪ್ರಬುದ್ಧೆಯುಂ, ಚಿತ್ರೆಯುಮೆಂ [3]ಬುದಿವರ[3] ನಂಬಿಕೆಯ ಸೀಗುರಿಯ, ಕನ್ನಡಿಯ, ಪಡಿಯಜೞಿಕೆಯ, ಕೊಡೆಯ, ಡವಕೆಯಡಪದಡಿಯೂಟದ ಪಡಿವೆಸಕ್ಕೆ ಬೆಸಸಿದನದಲ್ಲದೆಯುಂ

ಆ ಗಿರಿವರದಪರದಿಶಾ
ಭಾಗದ ಕುಲಿಶಾ[4]ಶ್ಮ[4]ಶಿಖರಮೆಂಟುಂ ನಿಜ ಸೌ
ಧಾಗಾರಮಾಗೆ ನೆಲಸಿದ
ರಾಗಿಣಿಯರನಾಡಿ ಪಾಡಿ ಸಲೆ ಬಗೆಗೊಳಿಸಲ್ ೭೭

ಮನದೊಲವಿಂ ಬೆಸಸಿದನೀ
ಜನ[5]ಮ[5]ನಿಳಾದೇವಿ ಪೃಥ್ವಿ ಪದ್ಮಾವತಿ ಕಾಂ
ಚನೆ ನವಮಿಕೆ ಸೀತೆ ಸುರಾಂ
ಗನೆ ಚಂದ್ರಾದೇವಿಯೆಂಬರೆಣ್ಬರನಿಂದ್ರಂ ೭೮

ರಾರಾಜಿಪ ರುಚಕದುದೀ
ಚೀರುಚಿರತರಾಷ್ಟಶಿಖರದೊಳ್ ನೆಲಸಿದರೀ
ನಾರಿಯರೆಣ್ಬರ್ ಶ್ರೀ ಹ್ರೀ
ವಾರುಣಿ ಧೃತಿ ಬುದ್ಧಿ ಪುಂಡರೀಕಿಣಿ ಮತ್ತಂ ೭೯

---

1 ಶೃಂ (ಅ) 2 ಮನೆಡ (ಅ) 3 ಬೀದೇ (ಅಇಉ)
4 ತ್ಮ (ಅಇಉ) 5 ವ (ಅಇ)

ವ॥ ಮಿಶ್ರಕೇಶಿಯಲಂ[1]ಬು[1]ಸೆಯೆಂಬರೀ ನಿತಂಬಿನಿಯರನೀ ಬಿಂಬಾಧರೆಗೆ ಧವಳಚಮರೀಜಸಮಾಜವೀಜನಂಗಳ್ಗೆ ಯೋಜಿಸಿ ಮತ್ತಮಾಗಿರಿವರದಧಿತ್ಯಕಾಸ್ಥಳದನಾಲ್ಕುಂದೆಸೆಯ ನಾಲ್ಕುನಾಲ್ಕಾದ ಪದಿನಾಱುಂ ಕೂಟಂಗಳೊಳಿರ್ಪ ನಿತ್ಯಾವಳೋಕಾಪ್ರಮುಖವೈಜಯಂತೀಪರ್ಯಂತಮಪ್ಪ ಪದಿನಾಱುವರುಮಂ ಉೞಿದ ಕುಲಶಿಖರಶೇಖರಿಯರುಮಪ್ಪ [2]ದೇವಾಂ[2]ಗನೆಯರುಮಂ ಗಲೋದರಪರಿಶೋಧನಪ್ರಮುಖನಿಖಿಲನಿಯೋಗಭೋಗಕ್ಕೆ ಬೆಸಸಿದನೆಂದು ಬಿನ್ನವಿಸಿ ತೋಱಿ ತನ್ನೃಪಾಲಮಿಥುನಪ್ರದತ್ತಪಾರಿತೋಷಕಪರಿತುಷ್ಟಸ್ವಾಂತಂ ತದ್ವಾಸಕ್ಕೆ ಸಂದನಿತ್ತಂ ವೃಂದಾರಕಸುಂದರೀಸಂದೋಹಕಮಂದಂದಿನ ತಮ್ಮಸೂೞಱಿದು ಜಗಜ್ಜನನಿಗಿನಿಸುವೆಸಂಗೆಯ್ವ ಸಮಯಂಗಳೊಳಗೆ

ಎಳೆಲತೆ ಮಾಧವೀಲತೆಯ ಪೂಗುಡಿಯೊಳ್ ಪೆಣೆದಂತೆ ಬಾಳ ಬೆ
ಳ್ವೆಳಗು ಮಲಂಗಿದಂಗರುಚಿ ಕಣ್ಗೆದಱುತ್ತಿರೆ ಚಂದ್ರಮಂಡಲಂ
ಗಳನೆಳಮಿಂಚು ತಾಳ್ದಿದವೊಲಡ್ಡಣದೊಡ್ಡಣ ಮೆಡ್ಡಮಾಗೆ ಕಾ
ವಳವಿಗೆ ಖಡ್ಗಧಾರಿಣಿಯರಾದರನಿಂದೆಗೆ ದೇವಕಾಂತೆಯರ್ ೮೦

ಪಡಿಯಱವಕ್ಕಿಯ ದನಿಯೊಳ್
ಪತಿಯಿಡುವರ್ಕಳವಿಗಳೀ ಜಯಶ್ಯಾಮೆಯ ನು
ಣ್ಣುಡಿಯನವಗಿರ್[3]ದುವ[3] ಸೆಳೆಯೆನೆ
ಪಡಿಯಱಿಕೆಗೆ ಸುರವಧೂಟಿ ಕಟ್ಟಿಗೆವಿಡಿದಳ್ ೮೧

ಅತ್ತಲಿರು ಚಂದ್ರರಾಜಕು
ಲೋತ್ತಮೆಯೋಲಗಕೆ ಸಮಯ[4]ಮೆಂ[4]ದೆತ್ತಿದಳೊಂ
ದೆತ್ತಿದ ಕಟ್ಟಿಗೆಯಿಂದೆನೆ
ಮುತ್ತಿನ ಕೊಡೆವಿಡಿದಳರಸಿಗಮುಱಿಯದೊರ್ವಳ್ ೮೨

ತಿಂಗಳ ತಣ್ಗದಿರ್ವೊದ[5]ಱಿತೊಳ್[5]
ಪೊಂಗಚ್ಚವಿ ಸೆಣಸೆ ತಂದು ತಲೆವಾಗಿಪವೊಲ್
ತುಂಗಘನನಿಬಿಡುಕುಚೆಗಮ
ರಾಂಗನೆ ಚಾಮರಮನಿಕ್ಕಿದಳ್ ಮತ್ತೊರ್ವಳ್ ೮೩

1 ಬಾ (ಅಇಉ) 2 ಲೇಖಾಂ (ಉ) 3 ಡುವ (ಅಇಉ)
4 ಮೊಂ (ಎ) 5 ಜಿನ (ಅಇಉ)

ದೇವೀ ನಿಜವರಸವಿಧುಗೀ
ತಾವರೆ ಸೋಲ್ತಲ್ತು ಬಾಯ ತಂಬುಲನುಂ ನೀ
ನೀವುದೆನಿಪಂತೆ ಪಚ್ಚೆಯ
ಕಾವಿನ ಮಾಣಿಕದ ಡವಕೆವಿಡಿದಳದೊರ್ವಳ್ ೮೪

ಕರಗಮುನೆತ್ತು ಶೀತಳಿಕೆ ಕಾಲ್ದೊಳೆ ಮಾಲಿನಿ ತಿರ್ದು ಬೋನಮುಂ
ತರಳಿಕೆ ಪಾಸು ಗದ್ದಿಗೆಯನುತ್ಪಳಿನೀ ಕೆಲಕೊತ್ತು ಚಿತ್ರಿಕೇ
ಪರಿಯ[1]ಣ[1]ವಂ ನೃಪೇಶ್ವರಿಯನಾರೋಗಿಸಲ್ ಕರೆ ಮಂಜುಘೋಷೆಯಿಂ
ದರಸಿಗೆ ಬೋನಮೆತ್ತಲುಲಿದತ್ತಮರೇಂದ್ರಮಹತ್ತರೀಜನಂ ೮೫

ಕರಿರಿಪುಪೀಠಮುಂ ತೊಡೆದು ಪಾಸುವ ಕತ್ತುರಿ ನೀರಧಾರೆಯುಂ
ಪರಸುವ ಮುತ್ತಿನೆಕ್ಕಸರದಿಂ ಕಡೆಯಿಕ್ಕುವ ಪಾರಿಜಾತದೊ
ಳ್ಪರಲನುದಿರ್ಚುವಿರ್ತರದ ಗದ್ದಿಗೆಯಿಕ್ಕುವ ಸಂಭ್ರಮಂಗಳಿಂ
ಪರಿಮಱಿಯಾಡಿದರ್ ಸುದತಿಯೋಲಗಸಾಲೆಯೊಳಿಂದ್ರಕಾಂತೆಯರ್ ೮೬

ಎಸಗಿದುದು ಸವಿಯ ಸೋನೆಯ
ನಸದಳವೆನಿಸಿದುದು ಮೆಚ್ಚಿನಚ್ಚರಿಯುಂ ಬಾ
ಜಿಸುವಮರರಮಣಿಯರ್ಕಳ
ತಿಸರಿಯ ಕಿನ್ನರಿವೀಣೆಯ ನವವಿಧದ ರವಂ ೮೭

ವಳಿಯ ತೆರಳ್ಕೆಯುಂ ವಹಣಿ[2]ಯೊಟ್ಟೆ[2]ಜೆಯ ಪಸರಂಗಳಿಂಪನು
ಜ್ವಳಿಸುವ ಡಾಳಮುಂ ನಡೆವ ಠಾಯೆಯ ಜಾಯನುಜಾಯಿಯೋಜೆಯುಂ
ಗಳನಱಿವನ್ನರಾರ್ ಸುಖಸುಧಾರಸದೊಳ್ ಪರಿಷಜ್ಜನಂಗಳಂ
ಮುಳುಗಿಸಿದತ್ತು ಚಾಳಿಸಿದ ರಾಗಮೆ ನಚ್ಚಿನ ಮಂಜುಘೋಷೆಯಾ ೮೮

ಸಮಶ್ರುತಿಯಾಗೆ ಝುಂಕೃತಿಗೆ ಕಂಕಣಝುಂಕೃತಿ ವಾಮಹಸ್ತ ವಿ
ಭ್ರಮದ ತೆರಳ್ಕೆಗಳ್ ಪೆಗಲ ಸಂಚದೊಳಂಚಿರವಾಗೆ ಕೊಂಕು ಬಿಂ
ಕಮನೊಳಕೊಂಡು ಮೆಚ್ಚಡರ್ವಡಪುರ್ಗಳಂತಿರೆ ಪೋಗಿ ಪೊಕ್ಕು ವಾ
ದ್ಯಮನೊಳಕೊಂಡು ಬಾಜಿಸಿದರಾವುಜಮುಂ ದಿವಿಜೇಂದ್ರಕಾಂತೆಯರ್ ೮೯

---

1 ೞ (ಎ)  2 ಪಟ್ಟೆ (ಅ) ವಟ್ಟೆ (ಇಉ)

[1]ಶಾ[1]ಳದಮೇಲೆ ತೊಕವಣೆ ರೇಖೆಯನಾಳ್ದಿರೆ ಪಾದದೊಳ್ಪಯಂ
ಮೇಳಿಸಿ ಝುಂಕೆ ಬಿಂಕದೊಳೊಡಂಬಡೆ ಮೋಹನ ಬಾಣಲೀಲೆಯಂ
ಬಾಳೆಯದೋಜೆಗಳ್ ಬಳಬಳಿಕ್ಕೆಗಳಾಂತಿರೆ ಸಿಂಹಸೇನ ಭೂ
ಪಾಳನ ಚಿತ್ರವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ ೯೦

ಧಿರು ಮಾಧವಿಯೂರ್ವಸಿ ಹೋ
ಯಿರೆ ನಚ್ಚಣಿ ರಂಭೆ ಭಲ ತಿಲೋತ್ತಮೆ ಕಹಳೋ
ದರಣಿ ಮಝುವಾಯೆ ಮೇನಕಿ
ಸುರಾಂಗಿಯೆನೆ ಪೊಗಟ್ಟಿದಲ್ತೆ ಸುರಭಾರತಿಯರ್ ೯೧

ಅಮರಿಯರಿಂದ್ರಲೋಕದರಸಾಯನವರ್ಗದೆ ಗರ್ಭಶೋಧನ
ಕ್ರಮಮನೊಡರ್ಚೆ ಕಾಂತೆ ಕುಸುಮಾಸ್ತ್ರನ ಸಾಯಕಲಕ್ಷ್ಮಿಯಂತೆ ಲೋ
ಕಮನೆರ್ದೆಗೊಳ್ವ ಚಂದ್ರಿಕೆಗೆ ಸೋರ್ಮುಡಿ ತೋರ್ಪೊಲೆ ಮೂಡಿದಂತೆ ಮ
ತ್ತಮೃತಜಲಂಗಳಿಂ ತೊಳೆದ ಮುತ್ತಿನ ಪುತ್ತಳಿಯಂತೆ ತೋಱಿದಳ್ ೯೨

ವ॥ ಅಂತು ದಿವ್ಯಕಾಂತೆಯರೊಡರ್ಚಿದ ಪವಿತ್ರೀಕರಣಚೈತ್ರಾಗಮಂಜಗತ್ತ್ರಿತಯಾಂಬಿಕೆಯ ತನುಲತೆಗೆ ಕುಸುಮೋದ್ಗಮನಸಮಯಮಂತರಲೊಡಂ

ಕರಟೋಗ್ರಗ್ರಂಥಿಯಂತೊಂದೆರಡು ಮೊಡವಿಗಳ್ ಮೂಡೆ ಕುಂಭಸ್ಥಳಂ ನಿ
ಬ್ಬರಿಪಂತುದ್ಯತ್ಕುಚಂ ಬೆ[2]ಣ್ಮಿಳಿಸೆ[2] ಸೊವಡನಾರಯ್ದುದೊರ್ಮೂಲದೊಳ್ ಕೈ
ಕರಣಂ ಕೈಗಣ್ಮೆ ಕ[3]ಣ್ಕಾ[3]ಣಿಸಿ ಬಿಡೆ ಮಣಿಭೂಷಾಳಿ ಮೈ ಸೋಂಕೆ ಬಿಂಬಾ
ಧರೆ ಪಿಂಗಲ್ ನಿಂದು ಕಂದರ್ಪನ ಕ[4]ರುವಿಡು[4]ತರ್ಪಂತೆ ಕಣ್ಗೆಡ್ಡಮಾದಳ್ ೯೩

ವ॥ ಆ ಚತುರ್ಥದಿವಸದೊಳ್

ಮೃಗಮದದಣ್ಪು ಪುಷ್ಪಕಮುದಾವಳಿ ನೂಪುರಮಾಲೆ ತೀರದಂ
ದುಗೆ ತೆಗೆದಿಟ್ಟ ಕೇಸರಮೆ ಪೂಸಿದ ಸಿಂಧುರವಟ್ಟೆ ಮಸ್ತಕಂ
ನೆಗೆದ ಕುಚಂಗಳಾಗೆ ಕರಿಗಳ್ ಸಿರಿಯಂ ಮಿಸಿಪಂತೆ ಮಜ್ಜನಂ
ಬುಗಿಸಿದರಾನರೇಂದ್ರನ ಮನಃಪ್ರಿಯೆಗಿಂದ್ರನ ವಾರನಾರಿಯರ್ ೯೪

---

1 ಡಾ (ಅಇಉ) 2 ಬಿಣ (ಅಇಉ) 3 ಣ್ಕಾ (ಇ) 4 ರಿಬಿಡು (ಎ)

ವ|| ಅನಂತರಂ ಪರಿಪೂರಿತಮಂಗಲಮಜ್ಜನವಿಧಾನೆಯುಂ ನೀರಾಜನರಾಜಿತ ರಾಜೀವರಾಗದೀಪಕಲಾಪಪ್ರತಿಫಳಿತಕೇಸರಕಪೋಳಮುಕುರೆಯುಂ ಪ್ರತಿಪದಕ್ವಣಿತ ಮಣಿಮಯಾನುನೂಪುರಪ್ರತಿಧ್ವಾನಾನುಯಾತವಯದಾವಿರಲಮಣಿಕುಟ್ಟಿಮಾಂತರ ಮಾರ್ಗಭೋಗೆಯುಂ ತನುಲತಾಪರಿಮಳನಪರಿ[1]ಮಿ[1]ಳಿತಮಧುಕರೀಝಂಕಾರಭಂಗುರ ಮಂಗಳಗಾಯಿಕಾಕಲಮಧುರನಿನಾದೆಯುಂ ದೇವದೌವಾರಿಕ ಕಳಕಳಕ್ವಣಿತ ಪ್ರತ್ಯುತ್ತ ರೋಚ್ಚಳಿತ ಕೇಳೀವನಮಾಲಾಕಲಕಂಠವಿಲಾಪೆಯುಂ ದಿವಿಜನಿತಂಬಿನೀಭುಜಲತಾಸ್ತಬ ಕಿತಚಂದ್ರಕಚ್ಛತ್ರವಿಚಿತ್ರಪ್ರತಾ[2]ನ[2]ಮಂಡಪವಿತಾನಮಂಡಳಿಯುಮಾಗಿ

ಕೊನರುತ್ತಿರ್ಪ ಲಲಾಟಘರ್ಮಜಲಮಂ ತೀಡುತ್ತುಮುದ್ಯತ್ಕುಚಾ
ನನದಿಂ ಜಾಱುವ ಮೇಲುದಂ ನಿಲಿಸುತುಂ ಸಯ್ತೊತ್ತುತುಂ ನುಣ್ಗುರು
ಳ್ಮೊನೆಯಂ ವಾಮಕರಾಗ್ರದಿಂ ಸಚಲವೇಣೀಭಾರಮಂ ತಾಳ್ದಿ ಕ
ಬ್ಬಿನಬಿಲ್ಲಂ ರತಿ ತಾಳ್ದಿ ಬರ್ಪ ತೆಱದಿಂ ತನ್ವಂಗಿ ಕಣ್ಗೊಪ್ಪಿದಳ್ ೯೫

ವ|| ಅಂತು ಮಂಗಲಾಭರಣಮಣಿಮಂಡಪಕ್ಕೆ ಬಂದು

ಅಮೃತಾಬ್ಧಿತರಂಗದ ಮೇ
ಲೆ ಮಲಂಗಿದ ಚಂದ್ರಕಲೆಯ ಕಳಿಕೆಯೊಲಂತಾ
ರಮಣಿ ನವಕ್ಷೌಮಚ್ಛ
ನ್ನಮರಾಳಿಕತೂಲತಲ್ಪದೊಳ್ ಕುಳ್ಳಿರ್ದಳ್ ೯೬

ವ|| ಆಗಳ್

ಉದಬಿಂದುವ್ರಜಮಂ ತಮಂ ತರಲತಾರಾನೀಕಮಂ ಕಾಱುವಂ
ದದೆ ಸಾಲಿಕ್ಕುವಿಳೇಂದ್ರವಲ್ಲಭೆಯ ವೇಣೀಭಾರಮಂ ಸಾರ್ಚಿ ಬಿ
ರ್ಚಿದಳಗ್ರಾಂಗುಲಿಮಾಲೆ ಕೂದಲನೆ ಬಂದೊರ್ವಳ್ ವಿಲೋಲತ್ತಮಾ
ಲದ ಬಾಳ್ಝೊಂಪಮನಾಡೆ ಸೋಂಕುವ ಚಳನ್ಮಂದಾನಿಲಶ್ರೀಯವೋಲ್ ೯೭

[3]ಎರಡ[3]ರುಣಾಂಬುಜಂ ಜಗುನೆಯೊಳ್ಪೊನಲೊಳ್ ಕುಣಿವಂತೆ ಕೆಂದಳಂ
ದೊರೆವಡೆದೊಪ್ಪೆ ಪಿಕ್ಕಿ ನಖರಪ್ರಕರಂಗಳ ಕಾಂತಿ ನೀಲನೀ
ರರುಹದ ಜೊಂಪದೊಳ್ ಜಗುಳ್ವ ಚಂದ್ರಿಕೆಯಂತಿರೆ ಸಾರ್ಚಿ ಕೇಶಮಂ
ಮುರಿದು ಮುಖೇಂದುವಿಂಗೆ ತಮಮಂ ತಲೆವಾ[4]ಗಿ[4]ಸುವಂತೆ ತಿರ್ದಿದಳ್ ೯೮

---

1 ವ (ಅಇಉ) 2 ಪಕುತಾಮಂಡನವಿಚಿತ್ರಮಾಲೆಯುಮಾಗಿ (ಅಇಉ)
3 ಇರದ (ಅಇಉ) 4 ರಿ (ಅಇಉ)

ಅಲರ್ಗಣೆಯಿಲ್ಲದೆ ಲೋಕಮ
ನೊಲಿಸಿದಪಂ ನಿನ್ನ ಬಸಿಱೊಳುದಯಿಪ ಮದನಂ
ಲಲನೆ ಮುಡಿ ಮಡಗದೆಂಬವೊ
ಲಲವಾರ್ಸಿಗಮಿತ್ತಳಮರಿ ಸಿರಿಮುಡಿಗೊರ್ವಳ್ ೯೯

ಲಲನೆಯ ಸೋರ್ಮುಡಿಯೊಳ್ ಸುರ
ಲಲನೆ ಕನತ್ಕನಕಕೇತಕೀನವದಳಮಂ
ಸಲಿಸುವ ನೆವದಿಂದಂ ಕ
ಟ್ಟಿಲೆಗಿತ್ತಳ್ ಚಂದ್ರಕಲಿಯ ಕವಳಮನೊರ್ವಳ್ ೧೦೦

ಬಂಬಲ್ಗುರುಳಿಂ ತುಂಬಿಯ
ಬಂಬಲಿವೆಂದಱಿಪಲಿದುವೆ ಕುಱುಪೆಂ[1]ದು ಜಿನೇಂ
ದ್ರಾಂ[1]ಬಿಕೆಯ ಕುರುಳೊಳಮರನಿ
ತಂಬಿನಿ ನಿಱಿಸಿದಳು ಚಿನ್ನಪೂಗಳನೊರ್ವಳ್ ೧೦೧

ತಳತಳಿಪ ಕರ್ಣಪತ್ರಮ
ನಳವಡಿಸಿದಳೊರ್ವಳಮರಕಾಂತೆಯ ಕಡೆಗ
ಣ್ಗಳ ಕಾಂತಿಲತೆಗೆ ಸಂದಿಸಿ
ದೆಳವೆಱೆಗಳಿನಾಳವಾಳಮಂ ತಿರ್ದುವವೊಲ್ ೧೦೨

ಪಳುಕಿನ ಕನ್ನಡಿಯಂ ಪಿಡಿ
ದಳದೊರ್ವಳ ದೇವಗಣಿಕೆ ದಯೆಗೆಯ್ವುದು ಕೋ
ಮಳೆ ನಿನ್ನ ತೆಳ್ಗದಂಪಿನ
ಪೊಳೆಪನಿದಕ್ಕೆಂದು ತಂದು ಕಾಣಿಪ ತೆಱದಿಂ ೧೦೩

ಕೆಂದಳದ ಕೆಂಪು ಪಳುಕಿನ
ಚಂದನದೊಳ್ ಪೊರೆಯೆ ಘುಸೃಣರಸಮೆಂದೊರ್ವಳ್
ವೃಂದಾರಕಿ ದೇವಿಗೆ ಹರಿ
ಚಂದನಮಂ ತಂದು ನೀಡಲಣ್ಮದೆ ನಿಂದಳ್ ೧೦೪

ಪೊಡವಿಯನುರಾಗಮಿದೆ ಕಾ
ಲ್ಪಿಡಿದಪ್ಪುದು ವೀತರಾಗನಂ ಪಡೆದೊಡಲಿಂ
ಬಿಡದಿರೆಲೆ ದೇವಿಯೆಂಬವೊ
ಲಡಿಯೂಡಿದಳೊರ್ವಳಮರಿ ಲಾಕ್ಷಾರಸದಿಂ ೧೦೫

---
1 ಬವೊಲೇನಂ (ಅ೩ಉ)

ವ|| ಅಂತು ಮಂಗಳಮಂಡನವಿಧಾನಮುಳಂಕೆವಡೆಯೆ

ಅರಲ ಸರಲ್ಗಳಂ ತೊಳಪಚಂದನದಿಂ ಪೊರೆದಂತೆ ಮಕ್ತೌಕ್ತಿಕಾ
ಭರಣದ ಡಾಳದಿಂ ಪೊಳೆವ ಚಂದ್ರಿಕೆಯಂ ದಳವೇಱಿಪಂತೆ ಶೇ
ಖರ ನವಮಾಲಿಕಾವಿಸರದಿಂ ಶಶಿಬಿಂಬಕಳಂಕಲೇಖೆಯಂ
ಪರಿಹರಿಪಂತೆ ಬೆಳ್ವಸದನಂ ಮೆಱೆದತ್ತಮೃತಾಂಶುವಕ್ತ್ರೆಯಾ ೧೦೬

ಅಲಸಮೃದುಗಮನೆ ಭೂಷಣ
ವಿಲಾಸಮಂಡಪದಿನೆಬ್ದು ಸಜ್ಜೆಗೆವಂದಳ್
ಪುಲಿನತಳದಿಂದೆ ಮೆಲ್ಲನೆ
ನಲಿನಾವಾಸಕ್ಕೆ ಬರ್ಪ ಕಲಹಂಸಿಯವೊಲ್ ೧೦೭

ಸುಲಿಪಲ್ಲ ಮಿಂಚು ಕಡೆಗ
ಣ್ಮಲರ ಕಡಲ್ವರಿ[1]ವ[1] ಕಾಂತಿ ದುಗುಲದ ಮುಕ್ತಾ
ಫಲದ ಮುಲಯರುಹದೊಪ್ಪಮು
ನಲರ್ಗಣೆಗಳಿನೊಪ್ಪಸಲಗೆಯಿಡೆ ನಡೆತಂದಳ್ ೧೦೮

ವ|| ಅಂತು ಬಂದು

ಮದನನ ಜೈತ್ರಶಾಲೆಯೆನೆ ಶಾಲೆ ಬೆಡಂಗಡರ್ದಿಂದುಕಾಂತಸ
ದ್ಮದೊಳತಿ ಸಾಂದ್ರಚಂದ್ರಿಕೆಯ ಸೋದರಮಾದ ಮರಾಳತೂಲತ
ಲ್ಪದೊಳನುರಾಗದಿಂ ತಳೆದರುಜ್ಜ್ವಳಶಾರದನೀರದಾವಳೀ
ಸದನದೊಳಿರ್ದ ರೋಹಿಣಿಯ ಚಂದ್ರಮನೊಪ್ಪಮನಾ ಮನಃಪ್ರಿಯರ್ ೧೦೯

ವ|| ಅಂತು ಸೊಬಗ್ಗಿವಂದು ಮನೋನಯನವಲ್ಲಭನ ತೋಳ್ಗಿವಂದು ಸಮುಸುಪ್ತಿ ಸುಖದಿನವಗಾಢತ್ರಿಯಾಮಾಯಾಮತ್ರಯತ್ರಿಪಥಗೆಯಾಗಿ ವಿರಾಮಾರಾಮದೊಳ್

ಉತ್ತಮದೇವಿ ನೀನೆ ಮೊಲೆವೊತ್ತರೊಳೆಂದು ಜಗತ್ರಯಕ್ಕೆ ಬೊ
ಟ್ಟಿತ್ತಿದ ಮಾಚ್ಕೆಯಿಂದೆ ಗುಡಿಗಟ್ಟಿ ವಿನೇಯಕರಾವಲಂಬನಂ
ಪೆತ್ತಪೆಯೆಂಬವೊಲ್ ಬಲದ ಕೊಂಬಿನೊಳೊಯ್ಯನೆ ಪೇಱಿ ಕೈಯನು
ನ್ಮತ್ತಗಜೇಂದ್ರಮಿರ್ದೊಡೆ ಗಜೇಂದ್ರಮುದಾಲಸಯಾನೆ ನೋಡಿದಳ್ ೧೧೦

[2]ಇಣಿಗಿಡಿದಿಣಿ[2]ಯಂ ಕೊಳ್ಕಣಿ
ನಣೆದು ನೆಲಂ ಬಿರಿಯೆ ಕೆಲೆದು ಮಲೆದೊಲೆದಿದಿರೊಳ್
ಮಣಿಕದ ನಸೆಗಸವಸದಿಂ
ದಣಿಯರ ಮಾಡುವ ಗವೇಂದ್ರನಂ ಸತಿ ಕಂಡಳ್ ೧೧೧

1 ರ (ಅಇಉ) 2 ಲಣೆನಡರ್ದಳಿ (ಎ)

ಸಮಋಜುವಾಗಿ ಕುಕ್ಕುರಿಸಿ ವಾಲದೆ ಬೆಂಬಿಡಿದಡ್ಡವಿಟ್ಟು ಮುಂ
ದಮರ್ದಿರೆ ಗಂಧಸಿಂಧುರಭಿದುಗ್ರಸನೋಯ್ಯಕಟಸೃಕ್ವಸಿಕ್ತಕ
ರ್ದಮಿತಮದಭ್ರಮದ್ಭ್ರಮರಮಾಳಿಗೆ ವಕ್ತ್ರಮನಗ್ರಪಾದದಿಂ
ಸಮಱಿಕೊಳುತ್ತುಮಿರ್ದ ಮೃಗವಲ್ಲಭನಂ ಮೃಗನೇತ್ರೆ ನೋಡಿದಳ್ ೧೧೨

ಪೊಳೆವಮರ್ದಂ [1]ಕನ್ನಡಿಗಂ[1]
ಕಳಶಕ್ಕಂ ಜನಳಿವೆಱೆಯೆ ಕಱೆನಂತೆರಡುಂ
ಬಿಳಿಯಾನೆ ಮಿಸಿಸೆ ಮೊಗಮು
ಜ್ಜ್ವಳಿಸುವ ಮೊಲೆ ಪುಲೆವ ಲಕ್ಷ್ಮಿಯಂ ಸತಿ ಕಂಡಳ್ ೧೧೩

ಸೌರಭಮಂ ದಳಂಗೊಳಿಸೆ ಬಣ್ಣದೆ ನುಣ್ಣಿಸೆ ರಾತ್ರಿಮಾಳಿಕಾ
ಕಾರೆ ತೊಡರ್ಚಿ ನಾರುಗಿದ ತಿಂಗಳ ತಣ್ಣದಿರಂ ನಮೇರುಮಂ
ದಾರದರಲ್ಗಳಂ ತನಗೆ ನೀಡಿದ[2]ಳಂ[2]ದೊಲವಿಂದೆ ನೋಡಿದಳ್
ವಾರಿಜವಕ್ತ್ರೆ ಕೈರವವಿಲೋಚನೆ ಮಾಲೆಯನಂದು ಲೀಲೆಯಿಂ ೧೧೪

ಗಗನಮಣಿಮುಕುರದೊಳ್ ನಿಜ
ಮೃಗಲೋಚನದುರುಳಿಗುರುಳ ಕುಡುವುರ್ವಿನ ಕ
ರ್ಪುಗಳ ಕಱೆಯೆಂಬಿನಂ ನಗೆ
ಮೊಗದ ನೆಟಿಲ್ಗೆತ್ತು ನೋಡಿದಳ್ ಚಂದ್ರಮನಂ ೧೧೫

ಕುವಲಯವೈರಿ ಪಂಕರುಹಮಿತ್ರನಶೇಷರಸಾಪಹರ್ತುವೆಂ
ದವನಿಜನಂ ಪಿಸುಣ್ಗಿಡೆದೆಲೇ ಜಗದಂಬಿಕೆ ಬೇಱುಮಾಡಿದರ್
ಭವದಧಿನಾಥತೇಜಮುಮನೆನ್ನುಮನಿಂ ಕೆಳೆ ಮಾಳ್ಪುದೆಂದು ಪೊ
ರ್ದುವ ತೆಱದಿಂದೆ ಮೂಡುವೆಳನೇಸಱನಂಬುಜನೇತ್ರೆ ನೋಡಿದಳ್ ೧೧೬

ಇನಿಯನ ಕಡುಗಾಡಿ ಮನೋ
ಜನ ಬೆನ್ನಟ್ಟಿದೊಡೆ ಬಿಸುಟ ಪೞಿಯಿಗೆಯೆನೆ ಕೋ
ಳ್ವನಲೊಳಗೆ ಪೊಳೆವ ಮೀಂಬೊಣ
ರನಲಂಪಿಂ ಮೀನಲೋಲಲೋಚನೆ ಕಂಡಳ್ ೧೧೭

ಗಳದ ಸಿತಾಕ್ಷತಾವಲಿಯೊ ಮೌಕ್ತಿಕಹಾರಮೊ ಸಂದಿಸಿಟ್ಟ ಕೆಂ
ದಳಿರ್ಗಳೊ ಚೂಚುಕಚ್ಛವಿಯೊ ಪೊಂಗಳಶಂಗಳೊ ತನ್ನುರೋರುಹಂ
ಗಳೊ ದಿಟಮೆಂದು ಕೈ ತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳು
ಜ್ಜ್ವಳಕಳಶಂಗಳಂ ಘನರಸಾಕಳಿತಂಗಳನುನ್ನತಂಗಳಂ ೧೧೮

---

1 ಕಾಂಚನಯುಗ (ಅಇಉ)  2 ರಿಂ (ಅಇಉ)

ಪರಿಮಳಮಿಳದ[1]ಳ[1]ಮಾಲಾ
ಚರಣಾಹತ ಶಿಥಿಲ ಶಿಥಿಲದರದಳಸಂಧಿ
ಸ್ಫುರಿತ ಮಕರಂದಸುಂದರ
[2]ದರದಳಿತ ಸರೋಜ[2]ವನಮನಂಗನೆ ಕಂಡಳ್ ೧೧೯

ಮೊರೆವ ರವಂಗಳಿಂ ಪರಸುವಂತೆ ಪಯಃಕಣಕಾಂತಿಯಿಂ ನಿರಂ
ತರಮೆಳಮುತ್ತಿನಕ್ಷತೆಗಳಂ ತಳಿವಂತೆ ತರಂಗಬಾಹುವ
ಲ್ಲರಿಗಳಿನಪ್ಪುವಂತೆಸೆವ ಪಾಲ್ಗಡಲಂ ನಡೆನೋಡಿದಳ್ ತಳೋ
ದರಿ ವದನೇಂದುಮಂಡಲದ ಕೌಮುದಿಯಿಂ ಕಱಿಗಣ್ಮಿದಂತುಟಂ ೧೨೦

ತನುಮಧ್ಯೆ ಕೇಸರಚ್ಛವಿ
ವನಜಾನನೆ ಪೃಥುನಿತಂಬೆ ಕಂಡಳ್ ನೃಪಸಿಂ
ಹನ ಸಿಂಹಿ ಸಿಂಹಸೇನಾ
ವನಿಪನ ಸರ್ವಾಂಗಲಕ್ಷ್ಮಿ ಸಿಂಹಾಸನಮಂ ೧೨೧

ಮಾನಿನಿ ನೋಡಿದಳ್ ಸುರವಿಮಾನಮನುದ್ಧತಕೇತುಮಂಜರೀ
ಚೀನಮನಬ್ಜರಾಗಮಣಿಪುಂಜರಿತಾನನಮಿಂದ್ರನೀಲ ಸೋ
ಪಾನಮನಾತ್ತಚಿತ್ರರಸಲಾಸ್ಯವಿತಾನಮನಾವೃತಾಂಚಲೋ
ದ್ಯಾನಮನಾಸಿತ ತ್ರಿದಶದಂಪತಿಭೂಷಣಭಾಸಮಾನಮಂ ೧೨೨

ಭವನಾಮರದಂಪತಿಗಳ
ನವರತ್ನಾಭರಣಕಿರಣದಿಂ ಸುರಚಾಪ
ಚ್ಛವಿಯನಗೆವೊಯ್ದ ಪಡಲಿಗೆ
ಯವೊಲೊಪ್ಪುವ ಭೋಗಿಭವನಮಂ ವಧು ಕಂಡಳ್ ೧೨೩

ಕಂಜದಳಾಕ್ಷಿ ಕಾರಿರು[3]ಳ[3]ನಾರಮೆಯಂ ಬಿಸಿಲಂ ಸುಧಾಂಶುವಂ
ಸಂಜೆಯನಾಯ್ದು ಕೊಯ್ದುರುಳಿಮಾಡಿ ರಸಂಬಿಡೆ ರಂಗರಕ್ತಿಯಿಂ
ರಂಜಿಸಿದಂತೆ ತೋಱಿ ಶಬಲಚ್ಛವಿ ಕಾಮನ ಬಿಲ್ಲ ಬೀಜಮಂ
ಪುಂಜಿಸಿದಂತಿರಿರ್ದ ನವರತ್ನದ ರಾಶಿಯನೊಲ್ದು ನೋಡಿದಳ್ ೧೨೪

---

1 ಧಿ (ಅಇಉ) 2 ದರಿತ ಸರೋವರಜ (ಅ) ದಳಿತ ಸರೋವರಜ (ಇಉ)
3 ೞ (ಅಇಉ)

ಒಗೆದಳುರ್ದು ಮಿಳಿರ್ದ ಬಲದೊಳ್
ಪೊಗೆಯದೆ ಕಿಡಿಸೂಸದಸುಗೆಯೆಳದಳಿರ್ಗಳನಾ
ಯ್ದುಗೆವೊಯ್ದಂತಿರೆ ನಾಲಗೆ
ಸೊಗಯಿಸುವುರಿಮಾಲೆಯಂ ತಳೋದರಿ ಕಂಡಳ್ ೧೫

ವ|| ಅಂತುಮಲ್ಲದೆಯುಂ

ದರದಳಿತ ಕೇತಕೀಕುಸು
ಮರಜಂಗಳೊಳಾೞೆ ಕೂಡಿ ಪೊರೆದಸಿತೇಂದೀ
ವರಮಂಬುಜದೊಳ್ ಪುಗುವಂ
ತಿರೆ ಮೊಗದೊಳ್ ಪುಗುವ ಬಿಳಿಯ ಕರಿಯಂ ಕಂಡಳ್ ೧೬

ವ|| ಅಂತು ತನ್ನ ಕಂಡ ಕನಸುಗಳಂ ಮನಸಂದು ಮಿ[1]ನು[1]ಕುವ ಮನಮನನುಭವಿಸಿ

ಸುರಸುದತೀ ಕದಂಬಕದ ಗಾಂದರದಿಂ ದನಿಯೊಳ್ ದರಸ್ಮಿತಾಂ
ಬುರುಹಮನೊತ್ತಿ ಚುಂಬಿಸುವ ತುಂಬಿಯ ಗಾವರಮಂ ಪೊಣರ್ಚೆ ನ
ಲ್ಲರ ಬಿಗಿದಿರ್ದ ಪಕ್ಷಪರಿರಂಭನುನೊಯ್ಯನೆ ಬಿರ್ಚೆ ಕಣ್ಗೆ ಕ
ಪ್ಪುರದ ಶಲಾಕೆಯ ಸಲಿಸುತೆಟ್ಟಿಱಿಸಲ್ ಮೃದುಶೀತಮಾರುತಂ ೧೭

ವ|| ಆ ಪ್ರಭಾತೋದ್ಯೋತನದೊಳ್ ನಲ್ಲನ ತೋಳ ತಲ್ಪದಿಂ ಮೆಲ್ಲನುಪ್ಪವಡಿಸಿ ನಿತ್ಯನಿಯಮಮಂಗಳಾಭರಣಪರಿಪೂರಿತಾಂತರಂಗೆಯಾಗಿ ನಿಂದು ಚಿತ್ರವಲ್ಲಭಂಗೆ ತನ್ನ ಕಂಡ ಕನಸುಗಳಂ ಪೇೞೆ ಕೇಳ್ದು ಬೋಧತ್ರಯಾಧಾರನಾಪ್ಪವಷ್ಟಮೆಂಬ ಸ್ವಪ್ನ ಮಹೀರುಹ ಫಲಂಗಳನನುಕ್ರಮದಿನಾಕೆಗಿಂತೆಂದು ವಿರಚಿಸಿದಂ

ಪರಿಭೃತವಂಶನೂರ್ಜಿತನುದಾತ್ತಮನಂ ಕಮಲಾಪ್ರಿಯಂ ನೃಶೇ
ಖರನತಿಶಾಂತನಭ್ಯುದಯಮೂರ್ತಿ ಸುನೇತ್ರನುಪೇತಮಂಗಲಂ
ಸರಸಗುಣಂ ಗಭೀರನವನೀಶ್ವರನಾನತವಜ್ರಿಭೋಗಿ ಭಾ
[2]ಸ್ಕ[2]ರನಘದಾಹಕಂ ನಮಗೆ ನಂದನನಾದಪನಂಬುಜಾನನೇ ೧೮

ವ|| ನಿನ್ನ ನಗೆಮೊಗಮೆಂಬ ಸೆಜ್ಜರಮನರ್ಜುನಗಜಂ ಪೊಕ್ಕುದೆ ಪರಮಪುರುಷನವತಾರಮೆಂದ ನಿಜವಲ್ಲಭನ ವಚನಾಮೃತವರ್ಷರಸ ಪ್ರವಾಹಮಂ ನೆಲೆವೆರ್ಚಿಸುವಿನಂ ಉತ್ತರೋತ್ತರಮಾದ ಶುಭಮುಹೂರ್ತದೊಳ್

1 ಸು (ಅಇಉ) 2 ಸ್ವ (ಎ)

ದಿವದಿಂ ಕಾರ್ಮಣತ್ರೈಜಸಾವಯವನಾಕಲ್ಪಾವುರಂ ಪೂಜನೋ
ತ್ಸವ ಸೌಧರ್ಮಕೃತೋಪಹಾರ ಸುಮನಸ್ಸೌರಭ್ಯದೇಶೀಯನಾ
ಯುವತೀ ಪ್ರೋಜ್ಜ್ವಲಗರ್ಭದೊಳ್ ನೆಲಸಿದಂ ಬಂದಟ್ಮಿಱಿಂದೇಟ್ಗಿಪಾ
ಡಿವದೊಳ್ ಕಾರ್ತಿಕದೊಳ್ [1]ನಿ[1]ಶಾಂತಿಮದೊಳಂತಾ ರೇವತೀ ತಾರೆಯೊಳ್ ೧೨೯

ಪಳುಕಿನ ಸಾಲಭಂಜಿಕೆಯ ಮಧ್ಯದೊಳಿಂದುಕಲಾಂಕುರಂ ತೆಱಿಂ
ಬೊಳೆದವೊಲಾವ ಬೇವಸಮುಮಾವ ವಿಕಾರಮುಮಾವ ಚಿಹ್ನಮುಂ
ಬಳೆಯದೆ ತಾನೆ ಬಂದು [2]ಬೞೆದತ್ತಮೃತಾಬ್ಧಿತರಂಗಲಕ್ಷ್ಮಿಯೊಳ್
ಬಳೆವ ಮಣಿಪ್ರಭಾಪಟಲದಂತೆ ಲತಾಂಗಿಯ ಗರ್ಭವಿಭ್ರಮಂ ೧೩೦

ಪಿಂಗದು ವಳಿಗಳ ದೇಸಿ ಕ
ಱಂಗದು ಮೇಣ್ಬಾಸೆ ಮೊಲೆಯ ಮೊಗಮೆಳಗರ್ಪಂ
ತಾಂಗದು ತೆಳ್ವಸಿಱುನಿಸಂ
ಪೊಂಗದು ನಿಪ್ಪೊಸತು ಸತಿಯ ಗರ್ಭವಿಲಾಸಂ ೧೩೧

ಸುದತಿಯ ಗರ್ಭಗೌರವಮನೇವೆಸಗೊಂಡಪೆ ಚಾರಣರ್ ವಿದೇ
ಹದ ಮುನಿಪುಂಗವರ್ ತಮಗೆ ತತ್ತ್ವಪದಾರ್ಥದೊಳೊಂದು ಸಂದೆಯಂ
ಪುದಿದಿರೆ ಬಂದು ತಾಯನೊಲವಿಂ ಬಲವಂದೊಡೆ ಸುಪ್ರತೀತಮ
ಪ್ಪುದು ಗಡ ಗರ್ಭದರ್ಭಕನ ನಿರ್ಭರಬೋಧಮಹಾಪ್ರಭಾವದಿಂ ೧೩೨

ವ॥ ಅಂತುಮಲ್ಲದೆಯುಂ

ಅಮರೇಂದ್ರತ್ವಮನಂದೆ ಪೆತ್ತ ತೆಱದಿಂ ಕಾಯಪ್ರವೀಚಾರಮಾ
ರ್ಗಮನಿಚ್ಛೈಸದೆ ಸಿಂಹಸೇನರಮಣಂ ನೇತ್ರಪ್ರವೀಚಾರಭಾ
ವಮನಸ್ಪರ್ಶಸುಖಪ್ರವೀಚರಣಮಂ ಚಿತ್ತಪ್ರವೀಚಾರಭೋ
ಗಮುಮಂ ಮಾಟ್ಪನುಪಾವಲಂಬಿತಜಯಶ್ಯಾಮಾಸ್ಮಿತಾಸ್ಯಾಂಭುಜಂ ೧೩೩

ದಿವದಿಂ ಸಲ್ವಮೃತಾನ್ನಪಾನವಸನಾಲೇಪಸ್ರಜಂ ದೇವವಾ
ರವಧೂವರ್ಗದ ಮೆಚ್ಚಿ ಮೆಚ್ಚಿ ಬೆಸಕೆಯ್ವಟ್ಟುಂಬೆಸಂ ನೆಟ್ಟನಾ
ತ್ಮವರಂ ಮನ್ನಿಸಿ ಮಾಟ್ಪಲಂಪು ಮುದಮಂ ತಂದೀಯೆ ತನ್ವಂಗಿಯೊಳ್
ನವಮಾಸಂ ನವಮಾಸರಕ್ಕೆ ದೊರೆಯಾಯ್ತುತ್ಸ್ಯತ್ಸವೋತ್ಸಾಹದಿಂ ೧೩೪

---

1 ಪ್ರ (ಅಇಉ) 2 ಬೆ (ಅಇಉ)

ವ॥ ಅಂತು ಪರಿಪೂರ್ಣವಾಸರವಸಂತೋತ್ಸವಪ್ರಸವಾನುರಾಗಮಾಗಲೊಡಂ

ಒಂಬತ್ತು ಸಾಗರೋಪಮ
ದಿಂ ಬೞಿಕೆ ತೃತೀಯಪಾದಪಲ್ಯೋಪಮಮಾ
[1]ಯ್ತೆಂಬುದು[1] ಧರ್ಮಸಂತತಿ
ಬೆಂಬೞಿದಪ್ಪಿದುದು ವಿಮಲತೀರ್ಥಾಧಿಪನಾ ೧೩೫

ವ॥ ಅಂತು ಧರ್ಮವ್ಯುಚ್ಛಿತ್ತಿಯಾದ ಕಾಲದೊಳ್

ಶಶಿಸೂರ್ಯಾದಿ ನವಗ್ರಹಂಗಳಿರೆ ತಂತಮ್ಮುಚ್ಚದೊಳ್ ಶುದ್ಧಲ
ಗ್ನಶುಭಶ್ರೀಗಗನಾಂತರಾಲತಲಮಂ ನಿಷ್ಕಲ್ಮಷಂ ಮಾಡೆ ಕೂ
ಡೆ ಶಿವಾಖ್ಯಾನ ವಿಶಿಷ್ಟಯೋಗಮೊಸೆದಿದಾಷಾಢಕೃಷ್ಣತ್ರಯೋ
ದಶಿಯೊಳ್ ರೇವತಿಯೊಳ್ ಜಗತ್ತ್ರಿತಯಲಕ್ಷ್ಮೀವಲ್ಲಭಂ ಪುಟ್ಟಿದಂ ೧೩೬

ಉದಯಾದ್ರೀಂದ್ರದ ರತ್ನಮೇಖಲೆಗೆ ಸೂರ್ಯಂ ಕ್ಷೀರವಾರಾನ್ನಿಧಾ
ನದ ವೇಳಾರಮೆಗೋಷಧೀಶನುದಯಂಗೆಯ್ವಂತೆ ಭವ್ಯಾಬ್ಜನೀ
ಹೃದಯಂದೀವರಬಂಧು ಶಂಕರನ ಶುದ್ಧಾಂತಾಂಗನಾಗಂ[2]ಗೇ[2]
[3]ನುದ[3]ಯಂಗೈದನೊ ಕಾಶ್ಯಪೋದ್ಭವಕರಂ ಸಾಹಿತ್ಯರತ್ನಾಕರಂ ೧೩೭

## ಗದ್ಯ

ಇದು ಪರಮಜಿನಸಮಯವನವಸಂತಸಂತಾನಾರಾಮರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತನಾಥಪುರಾಣದೊಳ್
ತೀರ್ಥಕರ ಕುಮಾರೋದಯೋತ್ಸವವರ್ಣನಂ
ಚತುರ್ಥಾಶ್ವಾಸಂ

1 ಯೆಂಬತ್ತು (ಅಇಉ) 2 ಯಂ (ಏ) 3 ತಂದು (ಎ)

# ಪಂಚಮಾಶ್ವಾಸಂ

ಶ್ರೀವನಿತೆಗೆ ಸೊಂಪು ವಚ
ಶ್ರೀವನಿತೆಗೆ ಪೆಂಪು ಕೀರ್ತಿವನಿತೆಗೆ ಸೊಬಗು
ದ್ಭಾವಿಸುವಿನಮೊಗೆದನಿಳಾ
ಪಾವನಚರಿತಂ ವಿನೇಯಜನಮುಖತಿಲಕಂ ೧

ತ್ರಿದಶಕರಕೋಣಹತಿಯಿ
ಲ್ಲದೆಯುಂ ಮೊಳಗಿದುವು ದುಂದುಭಿಧ್ವನಿ ತಾಲ್ಜೋ
ಷ್ಠದ ವಿವರವಿಲ್ಲದುಣ್ಮುವ
ಪದವಾಕ್ಯಪ್ರಸರದಂತೆ ಪರಮೇಶ್ವರನಾ ೨

ಪರಮಪವಿತ್ರನಂತೆ ಧರೆ ನೀರಜಮಾದುದು ತತ್ತ್ವವೇದಿಯಂ
ತಿರೆ ಜಳಸಂಕುಳಂ ತಿಳಿದುದುಜ್ಜ್ವಲಮಾದುದು ದಿಙ್ಮುಖಂ ಪ್ರಸ
ನ್ನರಮುಖದಂತೆ ಭಾಕ್ತಿಕನವೊಲ್ ಬಲವಂದುದು ವಹ್ನಿ ಸಗ್ಗದಿಂ
ಸುರಿವಲರ್ಗಂಪನಾಂತು ಜಡನಂತಡಿಯಿಟ್ಟುದು ಮಂದಮಾರುತಂ ೩

ಅವಿರಳಮಾದುವಾ ಪುರದೊಳೀಶನ ಜನ್ಮಮಹೋತ್ಸವಕ್ಕೆ ತೀ
ವುವ ಕಲಶಂಗಳರ್ಚಿಸುವ ಕನ್ನಡಿ ಬರ್ಚಿಸಿಕೊಳ್ವ ಪೆಂಡಿರಾ
ಡುವ ರಸಲಾಸ್ಯಮೋದುವ ಶುಭಧ್ವನಿ ಪಾಡುವ ಪಂಚಮಾ[1]ದಿ[1] ಕ
ಟ್ಟುವ ಗುಡಿ ಪೊಯ್ವ ಬದ್ದವಣಮೆತ್ತುವ ಮುತ್ತಿನ ಮಾಲೆದೋರಣಂ ೪

ಕೇಸರದ [2]ರಜಂ ಬೆರಸಿದ[2]
ಸೌಸವಮಂ ಕೇರಿಕೇರಿಯೊಳ್ ಮನೆಮನೆಯೊಳ್
ಸೂಸುವ ಸುಟ್ಟುರೆ ರಾಗದಿ
ನಾಸುಕರಂ ಮುಟುಗಿಸಿತ್ತಯೋಧ್ಯಾಪುರಮಂ ೫

ವ॥ ಅಂತದೃಷ್ಟಪೂರ್ವಶ್ರುತಮುಮಪ್ರಯತ್ನಮುಮವಾಙ್ಮಾನಸಗೋಚರಮುಮ ಮಾನುಷೀಯಮುಮಾದ ಪರಮೇಶ್ವರನ ಪರಮಪಾವನೋತ್ಸಾಹಾ[3]ಹಮಹಮಿಕೆಯಿನ ಮರಗಣಿಕೆಯರೊಡನೊಡನೊಡರ್ಚುವ[3] ಮಂಗಳೋಪಚಾರಂಗಳೊಳೆಡೆವಡೆಯದೆ ಧೂಪ

---

1 ಡಿ (ಅಇಉ) 2 ಸಂದೆ ಬೀಸುವ (ಅಇಉ) 3 ನೊಳ್ ಮಹಾ ಮಹಿಮೆಯೊಳಮರನಾರೀನಿಕರಮಾಡರ್ಚುವ (ಅಇಉ)ದೊಳಹಮಹಮಿಕೆಯಿನಮರಗಣಿಕೆಯ ರೊಡನೊಡನದಿರ್ಚುವ (ಎ)

ಲೇಪಭಕ್ಷಣೌಷಧ ರಕ್ಷಣದ್ರವ್ಯಲಕ್ಷಿತೆಯರಾಗಿ ಸೂತಿಕಾಭವನ ದ್ವಾರೋಪಕಂಠದೊಳ್ ಸಂದಣಿಸಿ ನಿಂದ ಕುಲಮಹತ್ತರವಧೂಕದಂಬದೊಳಂ ಮತ್ತಮೋಲಗಶಾಲೆಯ ಸಂಗೀತ ಸದನರಂಗದೊಳಚ್ಚರಸಿಯರ ಗೊಂದಣವೆಕ್ಕ[1]ಣಮೆ[1] ತೆಕ್ಕನೆ ತೀವೆ ಪುಗಲ್ಪಡೆಯದೆ ಸೂಱಾಯ್ತುರ ಕರೆಹಮಂ ಸನ್ನೆಗೆಯ್ವಂತೆ ರಾಜಾಂಗಣದೊಳಗೆ ಮಂಗಳಾಚಾರಸಂಗೀತ ಕಮಂ ನೆಗಟ್ಟೆ ಮುಖರೀಗಾಣರ ತಾಳವಾದ್ಯಕೋಳಾಹಳದೊಳಂ ಮತ್ತಮಗಣ್ಯಪುಣ್ಯ ಪುಣ್ಯಾಕಾರಂ ಪಣ್ಯಾಂಗನಾಸಂಗೀತರಾಗಿ ಸಮಯಂಬಾರ್ದು ಕರುಮಾಡದ ಮತ್ತವಾರ ಣದೊತ್ತುವಿಡಿದು ಕುಳ್ಳಿರ್ದ ಮಕುಟ[2]ವರ್ಧನ[2]ಮಂಡಳಿಕರ ದಂಡನಾಯಕರ ಠಕ್ಕುರರ ಮಹತ್ತರರ ಮೊತ್ತಂಗಳಿತ್ತ ಸಮಯತ್ಯಾಗಮತ್ತಳಗಮಾಗೆ ಮಂಗಳ ವೃತ್ತಂಗಳನೋದಿ ಪೊಗಟ್ದು [3]ಪಾ[3]ರೈಸಿ ಪರಸುವ ವಂದಾರುವೃಂದಾರಕರ ಸಂದಣಿಗಳೊಳಂ ಆ ಸಿಂಹಸೇನ ಮಹಾರಾಜಾಲಯದೊಳಗುಂ ಪೊಱಗುಂ ಅತ್ಯುತ್ಸವೋತ್ಸವ ಪ್ರಕ್ಷೋಭಿತಮಾಗಿರ್ದು ದಂತುಮಲ್ಲದೆಯುಂ

ಅರೆಜೋಲ್ದುಟ್ಟುದೆಱಲ್ವ ಮೇಲುದೊಗೆವೀಷಲ್ಲಂಬಶುಂಭತ್ಪಯೋ
ಧರಮಡ್ಡಂ[4]ಗೆ[4]ಡದಿರ್ದ ಪೂಮಿಡಿವಿತಾನಂ ವರ್ತನಂ ದಾದಿಯ
ರ್ಗೆ ರಸಾವೇಶದಿನೊಪ್ಪೆ ಕೂಡೆ ಕುಣಿಯುತ್ತುಂ ಬಂದು ಸಲ್ವನ್ನಮಾ
ಹರಚೇಳಕ್ರಿಯೆ ಭೂಪನಂ ಸುಲಿದುಕೊಂಡರ್ ಪಾಯ್ದು ದಿಂಡುಟ್ಚೆಯರ್ ೬

ವ|| ಅಂತು ಮೆಱೆವ ಮಾಂಗಲ್ಯ[5]ಸಾಕಲ್ಯ[5]ಸಮಯದೊಳ್

ಏಱ ಪುಲೋಮಜಾರಮಣ ಪುಟ್ಟಿದನೀಗಳನಂತನಾಥನೀ
ರೇಱನೆಯಕ್ಷಯಂ ಪರಮನೆಂದು ಕನನ್ಮಣಿಪೀಠಕಂಪನಂ
ಪೇಱಲೊಡಂ ಬೞಿಕ್ಕವಧಿಯಂ ತಿಳಿದಾಗಳಯೋಧ್ಯೆಯತ್ತಲಾ
ಗೇಱಡಿಯಿಟ್ಟು ಮೂಮೆ ಪೊಡೆವಟ್ಟು ಶತಕ್ರತು ಸಾನುರಾಗದಿಂ ೭

ಜನ್ಮಮೃತಿವಿರಹಿತಂಗೆ ಜ
ಗನ್ಮಂಡನಮಣಿಗೆ ಭಕ್ತಿಭರಚರಿತಮನಂ
ಜನ್ಮಾಭಿಷೇಕಮೆಂಬು
ದ್ಯನ್ಮಹಮಂ ಮಾಡಲಾಗಳುದ್ಯತನಾದಂ ೮

ವ|| ಅನ್ನೆಗಮತ್ತಲ್

---

1 ತುಳ (ಎ) 2 ಬದ್ಧನರು (ಎ) 3 ಹಾ (ಅಇಉ)
4 ಗಿ (ಅಇಉ) 5 (ಅಇಉ) ಗಳಲ್ಲಿಲ್ಲ

ಅಭವಂ ಶ್ರೀಮದನಂತನಾಥನುದಯಂಗೆಯ್ದಿರ್ದುದಂ ಶಂಖದುಂ
ದುಭಿ ಕಂಠೀರವಘಂಟಿಕಾಪ್ರಕರನಾದಂ ಸಾಱುವಂತಾಗೆ ಭ
ಕ್ತಿಭರಾನಮ್ರ[1]ತಿ[1]ರೀಟರಾಭವನವಾನವ್ಯಂತರಾ ಜ್ಯೋತಿಷ
ಪ್ರಭುಕಲ್ಪೇಂದ್ರಚತುರ್ನಿಕಾಯದಿವಿಜರ್ ಕೈಕೊಂಡರುತ್ಸಾಹವಂ ೯

ಮದಪೂರಾಪ್ಲಾವಿತಾನ್ನೈಕಪಘಟೆ ಘನರಂಗತ್ತುರಂಗವ್ರಜಂ ಕೇ
ತುದಳದ್ವ್ರ್ಯೋಮೋದರಸ್ಯಂದನತತಿ ಘಟಿತಾಸ್ತ್ರಸ್ಫುರದ್ವಿಸ್ಫುಲಿಂಗಂ
ಪದಗಂ ನಿರ್ಘೋಷಿತಾಭ್ರಂಕಷವೃಷಭಚಯಂ ಲಾಸ್ಯಗಾಂಧರ್ವಲೀಲಾ
ಸುದತೀವೃಂದದ್ವಯಂ ಬಂದುದು ಹರಿಯಹ ಸಪ್ತಾಂಗಸೇನಾಸಮುದ್ರಂ ೧೦

ಗಗನಶ್ರೀ ಚಂದ್ರಕಚ್ಛತ್ರಮನೆಸಗೆ ನಿಜೋಷ್ಣೀಷರತ್ನಾವಳೀರ
ಶ್ಮಿಗಳಿಂ ಕೂರಂಕುಶಂ ಮುಯ್ವಿನೊಳಳವೆಱೆ ಬಂದಪ್ಪಿದಂತಿರ್ಪಿನಂ ಪ
ಕ್ಷಗಜಶ್ರೀಪುಷ್ಪಕಾಲಂಕೃತ ಸುರಗಣಿಕಾಚಾಮರಾಂದೋಳಲೀಲಾ
ನುಗವಸ್ತ್ರಪ್ರಾಂತನೈರಾವತ ವಿಪುಲತರಸ್ಕಂಧದೊಳ್ ಶಕ್ರನಿರ್ದಂ ೧೧

ದಿಗಧೀಶರ್ ಪರಿವಾರವಾಹನವಧೂನದ್ಧಾಯುಧರ್ ವಂದು ಪೆ
ರ್ಮೆಗೆ ನೆಮೊ[2]ದ[2] ಬೞಿಕ್ಕೆ ಚಾತುರವಿಧೈಕತ್ರಿಂಶದಿಂದ್ರತ್ರಿಲೋ
ಕಗುರುಶ್ರೀಪದಪೂಜನಾತಿಶಯ ನವ್ಯದ್ರವ್ಯದಿವ್ಯಾಂಗನಾ
ಪ್ರಗುಣಪ್ರಸ್ತುತಗೀತವಾದ್ಯನಟನಾದ್ಯಾನೀಕಿನೀಸಂಯುತರ್ ೧೨

ದೆಸೆಯೆಲ್ಲಂ ನೂತ್ನರತ್ನಾಭರಣಕಿರಣಜಾಲಂಗಳಿಂ ತೇಂಕೆ ತಳ್ತಾ
ಗಸಮೆಲ್ಲಂ ಛತ್ರಚಿತ್ರಧ್ವಜಚಮರಜ ನಾನಾ ವಿ[3]ತಾ[3]ನಂಗಳಿಂ ಚಿ
ತ್ರಿಸೆ ವಾತವ್ರಾತಮೆಲ್ಲಂ ಮಲಯಜಘುಸೃಣಸ್ರಗ್ಗಂಧಾಮೋದದಿಂ ಪು
ಟ್ಟಿಸೆ ಸೌಧರ್ಮೇಂದ್ರಸೇನಾಭರದಭಿಮುಖದೊಡ್ಡೊಡ್ಡುಗೊಂಡೊಡ್ಡಿ ನಿಂದರ್ ೧೩

ವ॥ ಅಂತು ಬಂದು ಸಂಧಿಸಿ ನಿಂದ ಮೂವತ್ತಿರ್ವರುಂ ದೇವನಾಯಕರ ಚಿತ್ತೋ
ತ್ಸಾಹಮತ್ತಳಗಮಾಗೆ

---

1 ಕಿ (ಅಇಉ) 2 ಗೆ (ಅಇಉ) 3 ಮಾ (ಅಇಉ)

## ಪೃಥ್ವೀವೃತ್ತ

ಜಗತ್ರಿತಯಚಿತ್ತವಲ್ಲಭನ ವರ್ಧನೋತ್ಸಾಹದೊಳ್
ನಿಗುಂಬಿಸೆ ಮನೋಮುದಂ ಕಿಱುಪಿ ಬೊಬ್ಬೆಗೊಂಡಿರ್ದ[1]ಲಂ[1]
ತಗುಳ್ದೊದಱಿ ಸಾರ್ದು ಲಗ್ಗೆವೊಱ[3]ವೊಯ್ದು ತ[2]ಳ್ಪೆ[2]ಕ್ಕೆಯಿಂ
ನೆಗಳ್ಚಿದುದು ದೇವಲೋಕದ ವಿಲೋಕನಾನಂದಮಂ ೧೪

ವ॥ ಅಂತು ನಿರಂತರ ಪ್ರಕ್ಷುಭಿತೋದಯವಾಹಿನೀವ್ಯೂಹಲಕ್ಷ್ಮೀಸಮಾಜಂ ಪರಸ್ಪರ ಪ್ರಣಯದಿನಪ್ಪಿಕೊಂಡಂತಿರೊಪ್ಪಮಾದ ಸಂಘಟ್ಟನ ವಿಘಟನ ಪಟುಪಟಹ[3]ಲಟಹ[3] ಗಂಭೀರಭಂಭಾರವ ಶಂಖಶೃಂಗದುಂದುಭಿಮೃದಂಗಜಯಘಂಟಾಮುರಜಿ ಕಹಳೋತ್ತಾಳ ಕೋಳಾಹಲಂ ಮೆಱೆಯೆ ದೇವೇಂದ್ರವೃಂದಮೊಂದೆ ಪಂತಿಯಿಂ ತಿಂತಿಣಿವಡೆದು ಅಯೋಧ್ಯಾಮುಖರ್ಮಾಗಿ ತಳರ್ದು ಬರ್ಪಾಗಳ್

ಉಲಿವ ವರೂಥಿನೀರವದ ಬಲ್ಲುಲಿ ಬಗ್ಗಿಪ ದೇವಚಾರಣಾ
ವಲಿಗಳ ಕೆಯ್ಯಕೋಲ್ ನಿಲಿಸಲಾಱದ ಕಲ್ಪಜವಾಹಿನೀ ಮಹಾ
ಜಲಧಿಯ ನಿಚ್ಚೆಯಚ್ಚುಗಳ ಮೆಚ್ಚುಗಳಚ್ಚರಿವಲ್ಲಿಗಲ್ಲಿಗೇಂ
ನಿಲಿಸಿದವೊಲ್ ಬೆಡಂಗಿಯರ ಗೀತದ ವಾದ್ಯದ ನೃತ್ಯದೋಜೆಗಳ್ ೧೫

ಜಿನರಾಜೋದಯಮಿ[4]ಲ್ಲ[4] ಸಗ್ಗದೊಳಗಂತಾ ಪುಣ್ಯಮೆಲ್ಲಿರ್ದುದೊ
ಯ್ಕನೆ ಸಾರ್ಗುಂ ನಮಗೆಂದಲಂಪುವೆರಸಾ ಪೀಯೂಷ ಕಾಸಾರವಾ
ಬನವಾಸೇವ್ಯ ವಿಮಾನವಾ ಸುರವಧೂಶೃಂಗಾರವಾ ಪೌರಮೆಂ
ಬಿನಿತುಂ ಮುನ್ನಮೆ ಬಂದುವೆಂದು ಪುರಮಂ ವೃಂದಾರಕರ್ ನೋಡಿದರ್ ೧೬

ವ॥ ಅಂತು ನೋಡುತ್ತುಂ ಬಂದು ಅಯೋಧ್ಯಾಪುರಮಹೋತ್ಸವಲಕ್ಷ್ಮೀಮನಂ ಬಗೆ ಪೊಕ್ಕು ರಾಜಾಧಿರಾಜರಾಜಮಂದಿರದ ಮುಂದನೇಕಾನೀಕಿನಿನಿಕಾಯ ವಿಮಾನಯಾನವಾಹನವ್ಯೂಹಂ ತೇನತೇನ[5]ಮಟ್ಟುವರಿದಂ[5]ತೆ ಘಟ್ಟಿಸಿ ನಿಲೆ ತತ್ಪುರೋಭಾಗ[6]ದಲ್ಲಿ[6]

ಇಱಿಪಿ ಮದೇಭದಿಂ ಪೆಱ[7]ಗ[7]ನೇಱಿದಳಂ ವಿವಿಧಾರ್ಚನಂಗಳಂ
ಬಱಿಯೊಳೆ ತಂ[8]ದ[8] ಮಾಂಗಲಿಕಧಾರಿಣಿಯರ್ ನಿಜವಾಹನಂಗಳಿಂ
ದಿಱಿ[9]ದೊಡವೋಗೆ ಪೋಗು[9] ಬಿಜಯಂಗೆಯಿಸೆಂದು ಪುಲೋಮಜಾತೆಯಂ
ಕಱಿಪಿದನಿಂದ್ರನಿರ್ದು ಮಹಿಪಾಲಗೃಹ ಪ್ರಘಾಣಾಂತರಾಳದೊಳ್ ೧೭

---

1 ದುಂ (ಅಇಉ) 2 ಳ (ಅಇಉಎ) 3 (ಎ) ಪ್ರತಿಯಲ್ಲಿಲ್ಲ 4 ಲ್ಲಿ (ಅಇಉ) 5 ಮೊಟ್ಟುವರೆಂಬಂ (ಅಇಉ) 6 ದೊಳ್ (ಉ) 7 ಗಿ (ಉ) 8 ದು (ಅಇಉ) 9 ದಳವೋಗೆಪೋಗೆ (ಎ)

ವ॥ [1]ಅಂತು ಬೆಸಸಲೊಡಂ[1]

ಇದಿರ್ವಂದೆಱಗಿದ ಸಂಭವ
ಸದನದ ದೌವಾರಿ[2]ಕಾಕರ ಸ್ಕಂ[2]ಧಸಮಾ
[3]ಸ್ಪಂ[3]ದವಾಮಹಸ್ತೆ ಪೊಕ್ಕಳ್
ತ್ರಿದಶೋತ್ತಮೆ ರೂಪುಗಱಿ[3]ದು ಜನನೀಗೃಹಮಂ ೧೮

ವ॥ ಅಂತು ಪುಗಲೊಡಂ ಮಗಮಗಿಸಿ ನೆಗೆವ ದಿವ್ಯದ್ರವ್ಯಧೂಪಕಲಾಪಸೌರಭ ಸಾರದಿಂ ಸುರಭಿವಿಮಾನಮಿರ್ಪಂತಿರ್ದ ಸೂತಿಕಾನಿಕೇತನದೊಳ್ ಮಂಗಳವಸದನಮ ನಂಗೀಕರಿಸಿದಂಗಪರಿಮಳ [4]ಮಂಗಳಾಚಾರ[4]ಮೆಸೆಯೆ ಕಪ್ಪುರದ ಲೆಪ್ಪದ ದೇವತೆಯಂತೆ [5]ಕಣ್ಗೆ[5]ದಿರ್ದ ಜಿನೇಂದ್ರಜನನಿಯಂ ಹರ್ಷಾಶ್ರು [6]ಪಿಹಿತ[6]ಲೋಚನಮರೀಚಿನವೀ ನಾಭಿಷೇಚನಮನೊಡರ್ಚೆ ನೀಡುಮಚ್ಚರಿವಟ್ಟು ನೋಡಿ

ಮಿಱುಗುವ ಕಾಯಕಾಂತಿ ಗೃಹದೀಪಕಲಾಪದ ರಶ್ಮಿಜಾಲಮಂ
ಮಱೆಯಿಸೆ ಸೋಂಕಿಲೊಳ್ ತೊಳಗುತಿರ್ದ ಜಿನೇಂದ್ರನ ಪೆತ್ತ ತಾಯ್ಗೆ ತಾ
ನೆಱಗಿದಳಿಂದ್ರಕಾಂತೆ ಶುಭರತ್ನಮನಾಂತ ನಿಧಾನಲಕ್ಷ್ಮಿಗೊ
ಲ್ದೆಱಗುವ ದೀಪವರ್ತಿಯವೊಲಾಗತಕಂಧರೆ ಸಾನುರಾಗದಿಂ ೧೯

ವ॥ ತದನಂತರಂ

ಬಾಲಮೃಗಾಂಕನಂ ಕುಮುದಲಕ್ಷ್ಮಿ ಕುಶೇಶಯಲಕ್ಷ್ಮಿ ತಿಗ್ಮರು
ಗ್ಮಾಲೆಯನಳ್ಕಱಿಂ ಬಳಸುವಂತೊಸೆದಳ್ ಬಲಗೊಂಡನಂತಜಿ
ದ್ಬಾಲನನಾ ಲತಾಂಗಿ ಜನನೀಭುಜಧಾಮ ಸುಧಾವಿಲೋಲಕ
ಲ್ಲೋಲಲತಾವಿಲಂಬಿತ ನವೋರುನವಾಂಕುರ ಕೋಮಲಾಂಗನಂ ೨೦

ಇದು ಚಿತ್ತದ ಚಿಂತಾಮಣಿ
ಇದು ಕಣ್ಗಳ ಕಾಮಧೇನುವಿದು ಸೌಖ್ಯದ ಸಂ
ಪದಮಿದು ಮೂಲೋಕದ ಭಾ
ಗ್ಯದ ಬಾೞ್ಮೆದಲೆಂದು ನೋಡಿದಳ್ ಜಿನಶಿಶುವಂ ೨೧

ಕಡೆಗೋಡಿವರಿವ ಕಾಂತಿಯ
ಕಡಲೊಳಗಣ ಮಣಿವೊಲೆಸೆವ ಶಿಶುವಂ ಶಚಿ ಕಂ
ಡೊಡೆಯರ ತೊಡೆವಂ ತೊಟ್ಟನೆ
ಬಡವಂ ಕಂಡಂತಿರೆತ್ತಲಣ್ಮದೆ ನಿಂದಳ್ ೨೨

---

1 (ಎ) ಪ್ರತಿಯಲ್ಲಿಲ್ಲ 2 ಕಿಂಕರಂ ಸಂ (ಅಇಉ) 3 ಸ್ಯ (ಅಇಉ) 4 ವಿಲಾಸ (ಅಇಉ) 5 ಕೈಗೈ (ಅಇಉ) 6 ಪರಿಹಿತ (ಅಇಉ)

ವ॥ ಅಂತು ನಿಂದು ಕಲ್ಯಾಣೋದ್ಯೋಗವಿಲಂಬನಭೀತಿ ಕಲಿತನವಮಂ ಕೈಗೆಮಾಡೆ

ತಳಿರ್ಗಳ್ ಪುಣ್ಯಮಹೀಜದ
ಫಳಮಂ ತಳೆವಂತೆ ಕೆಂದಳಂ ತಳೆಯಲೊಡಂ
ಪುಳಕಾಂಕುರಮೊಗೆದೊತ್ತುವ
ನಳಿ ತೋಳ್ಗಳಿನಂಜುತೆತ್ತಿದಳ್ ಬಾಲಕನಂ ೨೩

ಮಾ[1]ಯಾ[1] ನಿದ್ರೆಯನಿಟ್ಟಳ್
ತಾಯಲರ್ಗಣ್ಗಳ್ಗೆ ಸೋಂಕಿಲೊಳ್ ತಂದಿಟ್ಟಳ್
ಮಾಯಾಶಿಶುವಂ ತ್ರಿಜಗ
ಜ್ಜ್ಯಾಯನನಾಸೂತಿಭವನದಿಂ ಬಱಿಕೊಯ್ದಳ್ ೨೪

ಸುರಪನತಮುಕುಟಮಣಿಘೃಣಿ
ನೆರಸಿದಿಗೊಂಡುವು ಶಚಿಯ ಭುಜೋದಿತಜಿನಭಾ
ಸ್ಕರನಂ ದಿವಿಜರ ಜಯಜಯ
ಪರಮೇಶ್ವರ ನಂದ ನಂದ ವರ್ಧಸ್ವರಮಂ ೨೫

ದಿಕ್ಕಿನೊಳಂ ವಿಯತ್ತಲದೊಳಂ ಗಿಡಿದಂತಿರೆ ನಿಂದ ದೇವಲೋ
ಕಕ್ಕತಿ ವಿಸ್ಮಯಂ ನೆಗಱೆ ನೋಡುವ ಕಣ್ಗಮೃತಾಂಜನಂಬೊಲ
ಣ್ಪೊಕ್ಕುದನಂತಜಿಜ್ಜಿನಸುಧಾಂಶುವ ಮೆಯ್ಸಿರಿ ಮೂಱುಲೋಕಮಂ
ತೆಕ್ಕನೆ ತೀವಲಾರ್ಪ ಪರಮಾತ್ಮನ ಶಕ್ತಿ[2]ಗೆ[2]ದಾವ ಕೌತುಕಂ ೨೬

ಕೆಳದಿಯರಾಂತ ಬೆಳ್ಗೊಡೆಯೆ ಬೆಳ್ನೊರೆ ಬೀಸುವ ಚಾಮರಂಗಳು
ಚ್ಚಳಿಸುವ ತುಂತುರಾಗೆ ಸುರಕೋಟಿಯ ಕಪ್ಪುರೆಗೊಂಡು ಕಾಣ್ಬ ಕ
ಣ್ಗಳ ಬೆಳಗೆಂಬ ಪಾಲ್ಗಡಲೊಳರ್ಭಕನಂ ತಳೆದಿಂದುಲೇಖೆಯುಂ
ತಳೆದ ತರಂಗಲಕ್ಷ್ಮಿ ನಡೆತರ್ಪವೊಲಿಂದ್ರನ ಕಾಂತೆಯೊಪ್ಪಿದಳ್ ೨೭

ವ॥ ಅಂತು ಸಾರ್ಕೆಗೆ ವರಲೊಡಂ

ಎಱಗಿದ ಕೊಂಬೆಬಲ್ಪ ಕಿವಿ ತಗ್ಗಿದುರೋಮಣಿವಾಯು ಕುಂಭನೊಳ್
ನಿಱಿಸಿದ ಪುಷ್ಕರಂ ನೆಗಪ್ಪ ಕಿಂಕರಣಂ ಬೆರಸಿಂದ್ರವಂದಿತಂ
ಗೆಱಗಿದ ದಿವ್ಯದಂತಿ ಮಡಿದಿತ್ತ ಪದಾಗ್ರಮಗೇಱ ಮೂಜಗ
ಕ್ಕೆಱಯನನಾ ಪುಲೋಮಸುತೆ ರಾಗದೆ ತನ್ನೆ ಱೆಯಂಗೆ ನೀಡಿದಳ್ ೨೮

---

1 ಯದ (ಅಇಉ) 2 ಗ (ಅಇಉ)

ಪರಮೇಶ್ವರನಂ ನೀಡುವ
ಸುರೇಂದ್ರವಲ್ಲಭೆ ಸುರೇಂದ್ರದಂತಿಯ ಕೆಲದೊಳ್
ಪರಿಭವಿಸಲ್ಕೆನಾರ್ತಳೆ
ಶರದದ ಬೆಳ್ಮುಗಿಲನಡರ್ದ ವಿದ್ಯುಲ್ಲತೆಯಂ ೨೯

ಮಣಿಮುದ್ರಾಜ್ಯೋತ್ಸ್ನೆ ಪೂವಂ ಕೆದಱೆ ತಳಿಯೆ ಹಾರಾಂಶುಗಳ್ ಸೇಸೆಯಂ ಕಂ
ಕಣಝಂಕಾರಂ ಕರಂ ಮಂಗಲಮನೆಸಗೆ ಶೀತಾಂಶುವಂ ಸಾಂಧ್ಯಲಕ್ಷ್ಮೀ
ಪ್ರಣಯಂ ಕೈಕೊಳ್ವವೊಲ್ಸಂದಿಸೆ ಕರತಲರಾಗಂ ತ್ರಿಲೋಕೈಕಚೂಡಾ
ಮಣಿಯಂ ಪೌಲೋಮಿ ತಂದಿತ್ತೊಡೆ ಕುಲಿಶಧರಂ ರಾಗದಿಂದೆತ್ತಿಕೊಂಡಂ ೩೦

ಅಂತೆತ್ತಿಕೊಂಡು ಕಣ್ಣಿನಿ
ತುಂ ತಣ್ಣನೆ ತಣಿಯೆ ನೋಡಿ ನಿರ್ವೃತಿಲಕ್ಷ್ಮೀ
ಕಾಂತನ ಕೇಸಡಿಗಳನಿಂ
ದ್ರಂ ತಳೆದಂ ಮಕುಟದೊಡನೆ ತಳಿರ್ವಾಸಿಗಮಂ ೩೧

ವ|| ಅನಂತರಮನಂತದಿವ್ಯದ್ರವ್ಯಪರಿಪೂರಿತಗಂಗಾಂಬುಶಿಂಜಿತಮುಮಂ ಚಿತಾಂಚಲಪಂಚರತ್ನವಿಲಸಿತಸವಿಾಚೀನ ಚೀನಾಂಬರಾಚ್ಛಾದಿತಮುಮಪ್ಪ ನಿಜಪರ್ಯಂಕವಿಷ್ಟರದೊಳಧಿಷ್ಠಿತಂ ಮಾಡಿದಾಗಳ್

ದೇವರ ದೇವಂ ನೆಗಟ್ದೈ
ರಾವತಪೂರ್ವಾಸನಾಧಿರೂಢಂ ಮೆಱೆದಂ
ದೇವೇಂದ್ರನಂಕದೊಳ್ ಹೈ
ಮಾವನಿಧರ ಪುಷ್ಯರಾಗಮಣಿಶಿಖರದವೊಲ್ ೩೨

ಮಂಡಳಿಪ ಕಂಕಣಚ್ಛವಿ
ಪಾಂಡುಚ್ಛತ್ರಕ್ಕೆ ವಿಲಸನಮಂ ಕುಡೆ ಜಗತೀ
ಮಂಡನಮೂರ್ತಿಗೆ ಮಾಣಿಕ
ದಂಡದ ಕೊಡೆವಿಡಿದನಾಗಳೀಶಾನೇಂದ್ರಂ ೩೩

ಪರಮೇಶ್ವರನಡಿದಳಿರೊಳ್
[1]ಕಿ[1]ರೀಟರುಚಿ ಕೆದಱೆ ಪೂಗಳಂ ತನ್ಮೌರಷುಂ
ಕರಿಯಗಜಂ ಬಿಳಿಯಾನೆಗೆ
ಹರಿನೀಲದ ಪಕ್ಕಿಸಾರೆಯಾಗಿಕ್ಕೆಲದೊಳ್ ೩೪

1 ಕಿ (ಅಷಲು)

ಅರುಣಾಂಭೋಜವನಂಗಳೊಳ್ ಕುಳಿರ್ವ ಹಂಸೀಮಾಲೆವೋಲ್ ಚಾಮರಂ
ಕರಕಂಕೆಲ್ಲಿದಳಂಗಳೊಳ್ ಪೊಳೆಯೆ ಕೊಂಕಿಂ ಬಿಂಕವಿಂಬಾಗೆ ಸಿಂ
ಧುರವೊಳ್ ಪಿಂಚೆಯುಮಂ ಮಲಂಗಿ ಜಿನನಾಥಂಗಿಕ್ಕಿದರ್ ಚಾರುಚಾ
ಮರಮಂ ನಿಂದು ಸನತ್ಕುಮಾರನುಮತಕ್ಯೋತ್ಸಾಹಿ ಮಾಹೇಂದ್ರನುಂ ೩೫

ಆಗಳ್ ತುಂಗಮೃದಂಗತಾಳಜಯಘಂಟಾಘಂಟಿಕಾಶಂಖಭಂ
ಭಾಗಂಭೀರಮಹಾರವಂ ಭುವನಮಂ ನಾದಾತ್ಮಕಂ ಮಾಡೆ ದಿ
ಗ್ಭಾಗಂ ಪಲ್ಲಟಮಾಗೆ ಪಿಂಗಿಸುವವೋಲ್ ಕೈ ನೀಡಿ ಸೈನ್ಯಂಗಳಂ
ಪೋಗಲ್ವೇಟ್ಟಿಮರಾದ್ರಿಗಭ್ರಗಜಮಂ ಜಂಭಾರಿ ಬಿಟ್ಟಿ[1]ಕ್ಕಿದಂ ೩೬

ಸುರನಿಕುರುಂಬಮಯೋಧ್ಯಾ
ಪುರದಿಂ ನೆಗೆದಮರಗಿರಿಗೆ ನಡೆಯಿಟ್ಟುದು ಸು
ಟ್ಟುರೆಗಾಳಿಗೆ ಸುಯ್ಯಾಣದ
ತೆರೆಯಂ ಹೊತ್ತೆತ್ತಿ ಬಿಚ್ಚಿದಂತಿರೆ ನಭದೊಳ್ ೩೭

ವ॥ ಆಗಳ್

ಜಿನಜನ್ಮೋತ್ಸವಮಂ ಮನಂದಣಿಯೆ ನೋಡಲ್ ಗೊಂದಣಂಬೆತ್ತುದಾ
ನನಮುಂ ತಾನೆನೆ ಮೂಱು ನಾಲ್ಕು ಘಟಿ[2]ಯಂ ದೇವೇಂದ್ರನಂತೇಱಿ ಬ
ರ್ಪನೊಪೇಟಿ[3]ಂದೆನೆ ದೇವಕೋಟಿ ನೆಗಟಲ್ಕಾಡಿತ್ತು ಕೋಡಾಳಿಗ
ಟ್ಟನ ತಟ್ಟಿಂದೆನೆ ಹಸ್ತಿ ಪೆತ್ತುದು ಮಹಾವೈಕುರ್ವಣೋತ್ಸಾಹಮಂ ೩೮

ವ॥ ಅದೆಂ[3]ತೆಂದೊಡೆ[3]

ವದನಂ ಕೋಡೆಂಟಱಿಂ ವಾಸವರದನಿಗೆ ಮೂವತ್ತೆರಟ್ಪೊಗೊಳಂಗಳ್
ರದನಕ್ಕೊಂದೊಂದು ನೀರೇಜಿನಿ ಕೊಳಕೊಳದೋರೊಂದು ಮೂವತ್ತೆರಟ್ಪಿ
ತ್ರದರಲ್ಮೂವತ್ತೆರ[4]ಟ್ರುಲ್ಲತೆಗೆ[4]ಸಟಿಸಟಿಯೊಳ್ ನರ್ತಿಪರ್ ದೇವಿಯರ್ ಸೋಂ
ಕವೆ ಮೂವತ್ತಿರ್ವರೇನದ್ಭುತಮಯಮೊ ಜಿನೇಂದ್ರಾಭಿಷೇಕಪ್ರಯಾಣಂ ೩೯

ಸುರಿವ ನಮೇರುಭೂರುಹದ ಪೂಮಟಿಯುಂ ಶತಕೋಟಿನರ್ತಕೀ
ತರುಣಿಯರಿಕ್ಕುತಿರ್ಪ ಕುಸುಮಾಂಜಲಿಯುಂ ಪಟವಾಸಚೂರ್ಣದೊಳ್
ಪೊರೆವೆರ[5]ಟ್ಟಿಯೊಳ್ ಕುಸುಮಕುಟ್ಟಿಮಮಾದೊಡದಂ ಸುಮೇರುಮು
ಟ್ಟಿರಿಸಿದುದಿಂದ್ರನಾಜ್ಞೆ ಮೆಱೆವಂತಿರೆ ಸೇನೆ ವಿಲಾಸಯಾನಮಂ ೪೦

---

1 ದ್ದಿ (ಅಇಉ) 2 ಟ (ಅಇ) 3 ತೆನೆ (ಅಇಉ) 4 ಟ್ರುಲ್ಲಗಗ (ಅಇಉ)
5 ಟ್ಪಿ (ಅಇಉ)

ವ॥ ಅಂತು ನಡೆಗೊಳಲೊಡಂ

ನವಲಾವಣ್ಯರಸಂ ತುಳುಂಕೆ ಕುಚಕೋಕಪ್ರೀತಿ ತಳ್ಪೊಯ್ಯೆ ವ
ಕ್ತ್ರವನೇ[1]ಜಂ ಅ[1]ಲರ್ದೊಪ್ಪೆ ಕೊಂಕೆ ಭುಜವೀಚೀ ಸಂಕುಲಂ ನೇತ್ರಕೈ
ರವಮುಜ್ಜೃಂಭಿಸೆ ಬರ್ಪ ಮೆಯ್ಸಿರಿ ಕರಂ ಚೆಲ್ವಾಗೆ ಮುಂದಪ್ಸರೋ
ನಿವಹಂ ಮಾಡಿದುದಿಂದ್ರನಚ್ಚಿಗೆ ನಭಃಕಾಸಾರಮಂ ಸಾರಮಂ ೪೧

ಸುರತರುಣೀಚಳಾಳಕಪ್ರಗೋದ್ಭವರೇಣು[2]ತಟೀ[2]ಲ್ಲತಾಂತ ಸುಂ
ದರಮಕರಂದರೇಣು ಘನಸಾರಸಪ್ರೋಜ್ಜ್ವಲರೇಣು ಧೂಪದೊಳ್
ಪೊರೆದಿರೆ ಧೂಳಿಯಂತೆ ತರಲಾರ್ತುದಮರ್ತ್ಯರ ಚಿತ್ತವೃತ್ತಿಗಂ
ಬರತಲಯಾನಮಲ್ಲದವನೀತಲಯಾನಮಿದೆಂಬ ಶಂಕೆಯಂ ೪೨

ವ॥ ಅದಲ್ಲದೆಯುಂ

ಇದು ತಾಂ ಭಾವನದೇವಭಕ್ತಿಯಿದು ವಾನವ್ಯಂತರೋಪಾಸ್ತಿ ಮ
ತ್ತಿದು ದಲ್ ಜ್ಯೋತಿಷದೇವಪೂಜೆಯಿದು ಕಲ್ಪಾವಾಸ ಸತ್ಕಾರಮೆಂ
ದು ದಿವೌಕರ್ ನಿಲಿಸುತ್ತದೇಂ ಮೆಱೆ[3]ದರೋ ನಿಶ್ಶ್ರೇಯಸಶ್ರೀವಧೂ
ಮದನಂಗರ್ಚನ[3]ಪೂಜನ[3]ಸ್ತುತಿಕಥಾನೀರಾಜನೋತ್ಸಾಹಮಂ ೪೩

ವ॥ ಅದಲ್ಲದೆಯುಂ

ಎರಡುಂ ಕನ್ನಸದಿಂ ತಗುಳ್ದು ಚಮರಂ ವೈರೋಚನಂ ನಾಗ್ರತ
ಸ್ಸರ ರೇರೇ ನ ಚ ಪಾರ್ಶ್ವತಸ್ಸರ ನ ಹೋ ಪಾಶ್ಚಾತ್ಯ ಪಾಶ್ಚಾತ್ಯತ
ಸ್ಸರಯೆಂದೊಡ್ಡಿನ ಮುಂತು ಪಿಂತು ಕೆಲನಂ ತಿರ್ದುತ್ತೆ ತಮ್ಮಿರ್ವರುಂ
ಮುರಜಂ ಬಾಯ್ತುರೆ ದೇವಸೇನೆ ನಡೆದತ್ತೋರಂತೆ ನೂಲ್ವೊಯ್ದುವೊಲ್ ೪೪

ವ॥ ಅಂತು ಮೆಱೆವ ದೇವಗಮನಂ ಪುಟ್ಟುವೆಡೆಯೊಳದೃಷ್ಟಪೂರ್ವರಪ್ಪ ಚಮರ ವೈರೋಚನ ಭಾವನೇಂದ್ರರ್ಗೆ ಸೌಧರ್ಮೇಂದ್ರಂ ಕಣ್ಬೊಲಸಾದ ಪೊಂಬೆಟ್ಟದ ಸಿತಂಬ ಚತುಷ್ಟಯಾಡಂಬರವಿಲಾಸಮನಿಂತೆಂದು ಪೊಗೞ್ದಂ :—

ಮೇರುಮಹೀಧರಂಗೆ ಕಟಿಸೂತ್ರದ ಪಟ್ಟಿಗೆಯಂತಿರೌರಸೀ
ಹಾರಲತಾಳಿಯಂತಿರೆ ತಗುಳ್ಚಿದ ಕಂಠಿಕೆಯಂತಿರುನ್ನತೋ
ಚ್ಚಾರುಕಿರೀಟದಂತಿರೆಸೆದಿರ್ಪುವು ಮೇಖಲೆ ಕೊಡೆ ನಾಲ್ಕು ವಿ
ಸ್ತಾರಮನಾಳ್ದ ಪತ್ಯಕದಧಿತ್ಯಕದಂತರದಂತರಾಳ[4]ದಾ[4] ೪೫

---

1 ಜ (ಅಇ) ಜಮ (ಎ) 2 ಪತ (ಅಇಉ) 3 ಮೆಂಬವೊಲ್ (ಅಇಉ)
4 ದೊಳ್ (ಎ)

ಜಿನಮಹಿಮಂ ಸುರಾಸುರರಕೃತ್ರಿಮಚೈತ್ಯಗೃಹಂಗಳೊಳ್ ಪಳ
ಚ್ಚನೆ ಸಮೆದರ್ಚನಾಗರುವ ಧೂಪದ ಧೂಮದೆ ದೇವಕಲ್ಪನಂ
ದನಮನಿತುಂ ತಮಾಲವನಮಾಲೆವೊಲಾ[1]ಯ್ತಿ[1]ದು ಭದ್ರದೊ[2]ಳ್ಪು[2] ನಂ
ದನದ ಬೆಡಂಗು ಸೌಮನಸದಾಕೃತಿ ಪಾಂಡುಕದೊಂದು ಕೌತುಕಂ ೪೬

ವ|| ಅಂತು ಸುಟ್ಟಿಸಿ ತೋಱುವ ಬೆರಲ್ಗುಡಿ[3]ಯುಂ ಮುಟ್ಟ[3] ಬಣ್ಣಿಸುವ ನುಣ್ನುಡಿ[4]ಯುಂ[4] ಪಿಂದುೞಿಯೆ ಮುಂದುವರಿದು :—

ರಯದಿಂ ಪಿಂದಡಿ ಭದ್ರನಂದನಯುಗಕ್ಕಾಗಿರ್ಪಿನಂ ಮುಂದಣಾ
ಫ್ರಿಯುಗಂ ಸೌಮನಸಕ್ಕೆ ಪಾಂಡುಕತಲಕ್ಕೆಯ್ದಿತ್ತು ಕೈಕೊಂಡ ವಿ
ಕ್ರಿಯೆಯಿಂ ಕಾಯಬಲಂ ಸುಮೇರುಗಿರಿಗಾಯ್ತೇರಂಡಲಂ ಬಂದು ಬೆ
ಳ್ಳಿಯ ಬೆಟ್ಟಂ ಪೊಸಪೊನ್ನಬೆಟ್ಟನಡರ್ವಂತಾಯ್ತಿಂದ್ರನೈರಾವತಂ ೪೭

ವ|| ಆಗಳ್
ಪಾಂಡುಕಶಿಲಾತಲೋಪರಿ
ಮಂಡಪ ಲಂಬೂಷಲಂಬವನ್ದನಮಾಲಾ
ಮಂಡನ ಲತಾಂತಪರಿಮಳ
ಮಂಡಳಿತ ಮದಾಳಿಗೀತ ಮಂದಸಮೀರಂ ೪೮

ಇದಿರ್ವಂದೊಯ್ಯನೆ ದೇವಸೇನೆಯ ನಭೋಯಾನಶ್ರಮಂ ಪಿಂಗೆ ತೀ
ಡಿದುದಂತೀಜ[3] ಬೞಿಕ್ಕೆ ಪಾಂಡುಕಶಿಲಾಪಟ್ಟಾಂತದದ್ರೀಂದ್ರಮೂ
ರ್ಧದೊ[5]ಳರ್ಧೇ[5]ದುವಿಯತ್ತಳಭ್ರಮರದೊಳ್ ಬೇಸತ್ತು ಮಂದಾರ ಷಂ
ಡದ ಸುಚ್ಛಾಯೆಗಳೊಳ್ ಬೞಲ್ದೊಱಗಿದಂತೇಂ ಚೆಲ್ವುವೆತ್ತಿರ್ದುದೋ ೪೯

ಅನಿತು ನೆಗೞ್ತೆವೆತ್ತ ಪರಮೋತ್ಸವದೊಳ್ ಲವಲೀತಮಾಲನಂ
ದನಕಬರೀಭರಂ ಮೆಱೆಯೆ ಮೇರುಮಹೀಧರನಚ್ಚಮಲ್ಲಿಕಾ
ಘನಕುಸುಮಂಗಳಂ ನಡುವೆ ಸಂಪಗೆದೀವಿ ತುಱುಂಬಿ ನಿಂದಳೆಂ
ಬಿನಮೆಸೆದತ್ತು ಪಾಂಡುಕಶಿಲಾತಳಮಧ್ಯದ ಸಿಂಹವಿಷ್ಟರಂ ೫೦

ವ|| ಅಂತು ಪೆಱೆಯ ನಡುವಣ ಕಱೆಯಂತೆ ಮೆಱೆವ ಸಿಂಹವಿಷ್ಟರಮನಲಂಕರಿಸುವಿನೆಗಮಷ್ಟಯೋಜನೋತ್ಸೇಧಮುಂ ಶತಯೋಜನಾಯಾಮಮುಂ ಶತಯೋಜನ ವಿಸ್ತಾರಮುಮಾದ ಚಂದ್ರಕಾಂತಶಿಲಾಪಟ್ಟಕಮೆ ಘಟ್ಟಿಸಿದ ಕುಟ್ಟಿಮತಲಮಾಗೆ

1 ಯ್ತು (ಅಇಉ) 2 ಳಸು (ಅಇಉ) 3 ಯಿಂ ಮುಂದು (ಅಇಉ) 4 ಯಿಂ (ಅಇಉ) 5 ಳರ್ದಿಂ (ಅಇಉ)

ಹರಿ ಪೇೞ್ದಿಂ ವಿಶ್ವಕರ್ಮಂ ಸಮೆದನದಱ ವಸ್ತೂತ್ಕರಂ ಸ್ವರ್ಗಪೂಜ್ಯಂ
ನರರಿನ್ನೇವಣ್ಣಿಪರ್ ಪುತ್ತಳಿಗಳದಱ ಕಂಬಂಗಳೊಳ್ ಪಾಡಲುಂ ಬಿ
ತ್ತರದಿಂ ನಿಂದಾಡಲುಂ ಮಂಗಳಪರಿಕರಮಂ ನೀಡಲುಂ ಮಜ್ಜನಾಂಭೋ
ಭರಮಂ ಕೈಮಾಡಲುಂ ಬಂದಪುದೊಡನೊಡನಿಂದ್ರಾಣಿ ಕೈಕೊಳ್ವ ಸೂೞೊಳ್ ೫೧

ಸುತ್ತಿ ನಡೆನೋೞ್ಪ ದೇವರ
ವೊತ್ತಂ [1]ಕ[1]ಣ್ಮಲೆಯೆ ಘುಸೃಣಮಲಯಜರಸಮಂ
ಬಿತ್ತರದಿಂ ಕಱ[3]ದಪು[2]ವೆಳೆ[2]
ಮುತ್ತಿನ ಮಾಣಿಕದ ಲಂಬಣಂ ನುಣ್ಬೆಳಗಂ ೫೨

ಅಂದು ವೃಷಭಾದಿಜಿನರ್ಗೆ ಪು
ರಂದರನೊಡರಿಸಿದ ಸೂಚಿಯಾನಕ್ರಮದಿಂ
ಚಂದೋಗಂ ಪೆ[3]ಡೆ[3] ಚಂ[4]ದಂ[4]
ತಂದುದು ಜಿನಮಜ್ಜನಕ್ಕೆ ಜಿನಮಜ್ಜನಮಂ ೫೩

ವ॥ ಎಂದು ಪೊಗೞ್ತೆಗಳುಂಬಮುಂ [5]ತುಂಬ[5]ಮುಮಾದ ಮಜ್ಜನಮಂಡಪದ ತೋರಣದ್ವಾರೋಪಕಂಠದೊಳ್ ನಿಂದು ಮಂಗಳಾಚಾರಚಾರುಸಂಗೀತ[6]ಕವಾ[6]ರಣೋದೀರಿತ ಮಾಂಗಲ್ಯ ಪಟಹಪಟಹಪ್ರಧ್ವಾನಮೆಸೆಯೆ ರತ್ನಮಂಡಪಪಾಂಡುಕಶಿಲಾಮಧ್ಯಾಧ್ಯಾಸಿತ ಹೈಮಸಾಮಜಾರಿವಿಷ್ಟರದೊಳ್ ದೇವಾದಿದೇವನಂ ದೇವರಾಜಂ ಪೂರ್ವಾಭಿಮುಖನಾಗಿ ಬಿಜಯಂಗೆಯ್ಸಿ ಬೞಕ್ಕೆ

ಹರಿಯಂ ಶಿಖಿಯಂ ಯಮನಂ
ನಿರುತಿಯ[7]ನಪ್ಪ[7]ತಿಯನನಿಳನಂ [8]ಧನದನನೀ[8]
ಶ್ವರನನವರವರ ದೆಸೆಯೊಳ್
ಪರಿವಾರಕಲತ್ರಪುತ್ರಶಸ್ತ್ರಸಮೇತಂ ೫೪

ಇರಿಸಿ ಚತುರ್ನಿಕಾಯಸುರಸೈನಿಕರಂ ಕರೆದಂಗರಕ್ಷರಾ
ಗಿರಿಸಿ ವಿಶೇಷವಸ್ತುಪರಿಚರ್ಯೆಗೆವೇೞ್ದು ಬೞಿಂದಿಂದ್ರರಂ ಪುರಂ
ದರನಮೃತಾಂಶುಕಾಂತ ನವರತ್ನಸುವರ್ಣಘಟಂಗಳಿಂದಮು
ರ್ಚ್ಚರಸನಿರವೇೞ್ದು ಸಿ[9]ತ್ತೆ[9]ರದಿನಬ್ಧಿವರಂತರಲೆಂದು ದುಗ್ಧಮಂ ೫೫

---

1 ತ (ಎ) 2 ವಿದೆ (ಅಇಉ) 3 ಡಿ (ಎ) 4 ದನ (ಅಇಉ) 5 ತುಜ್ಜ (ಎ) 6 ವಾ (ಇಉ) 7 ನಃಪ (ಅಇ) 8 ವಿತ್ತಾಧೀ (ಅಇ) 9 ತ್ತ (ಅಇಉ)

ಹಾರಿವಡೆದೆಸೆದುದಮರರ
ನೇರಾಣಿಯು ಪೊಂಗಡಂಗಳೆರಡುಂ ತರದಿಂ
ವಾರಿಧಿಯನೆಯ್ದೆ ಮೊಗೆಯಲ್
ಮೇರುಮಹೀಧರಮೆ ತೋ[1]ಳ್ಗ[1]ಳಂ ನೀಡಿದವೊಲ್ ೫೬

ವ || ತದನಂತರಂ

ಪದಪದ್ಮಾಂಜಲಿ ಸಂಪುಟಂ ಸಮರುಜುಸ್ಥಾನಕ್ಕೆ ಚೆಲ್ವಾಗೆ ವ
ಕ್ತ್ರದೊಳೋಂಕಾರಪುರಸ್ಸರಂ ನೆಗೞ್ದ ಮಂತ್ರಂ ದೇವತೂರ್ಯಪ್ರಣಾ
ದದಿನೆಂಟುಂ ದೆಸೆಗ[2]ಳ್ಕಿಮು[2]ಳ್ವಡೆ ಜಿನೇಂದ್ರಂಗಿಂದ್ರರೆತ್ತಿರ್ದರ್ಘ್ಯಮೆ
ತ್ತಿದ ದರ್ಭಾಕ್ಷತಪುಷ್ಪಚಂದನದಳಂ ಭದ್ರಂ ಶುಭಂ ಮಂಗಳಂ ೫೭

ಮೊದಲೊಳ್ ಸೌಧರ್ಮೇಶಾ
ನದಿವಸ್ಪತಿಗಳ್ ಪೊಣರ್ಚಿದರ್ಚನೆಯೊಳ್ ಪೆ
ರ್ಚಿದ ಧೂಪಧೂಮದಿಂ ನೀ
ಲದ ಪರ್ವತಮಾಯ್ತು ಕನಕಪರ್ವತಮನಿತುಂ ೫೮

ವ || ಅನಂತರಮನಂತನಾಥನಿಂ ಸನಾಥಮಾದ ಸಿಂಹಪೀಠೋಭಯಕಕ್ಷನಿಕ್ಷಿಪ್ತ ಮಣಿವಿಷ್ಟರಂಗಳೊಳ್ ತ್ರಿವಿಷ್ಟಪಾಧಿಷ್ಠಾಯಕರಿರ್ಬರುಂ ಕನಕಕಮಲಸೂತ್ರ ಯಂತ್ರಿತಮುಂ ಮುಕ್ತಾಫಲಾಕ್ಷತಲಕ್ಷಿತಮುಂ ಪಾರಿಜಾತಪಲ್ಲವೋಲ್ಲಸಿತಮುಂ ಸಂತಾನ ಲತಾಂತಕಾಂತಮುಮಪ್ಪ ಚಂದ್ರಕಾಂತಕಲಶಂಗಳನುತ್ತರದಕ್ಷಿಣಾಭಿಮುಖರಾಗಿ ನಿಟಿಲ ತಟಘಟಿತಕರಪುಟಪಟಲ ಸುರಪರಿಷತ್ಪ್ರಳಯಜಯಜಯಜಯಾ ಪ್ರಕ್ಷೋಭಮಂತ ರಿಕ್ಷಮಂ ಪೊತ್ತೆತ್ತುವಿನೆಗಮೆತ್ತಿಕೊಂಡು

ಆ ದಿವಿಜಾಧಿಪರ್ ಸುರಿವ ಪಂಚಮವಾರ್ಧಿಯ ಪಾಲ್ ವಿಲೋಚನಾ
ಹ್ಲಾದಿ ಮುಸುಂಕೆ ಚಂದ್ರಿಕೆ ಮುಸುಂಕಿದ ಮಾಣಿಕಜೋತಿವೊಲ್ ಸಿತಾಂ
ಭೋದಮೆಟಿಲ್ದ ಮೇರುವಿನ ಗೈರಿಕಶೃಂಗದವೊಲ್ ಸುಧಾಂಶುವಂ
ಭೇದಿಸಿ ನಿಂದ ಮಂಗಳನವೊಲ್ ಮೆಱೆದಂ ಭುವನೈಕಮಂಗಳಂ ೫೯

ಹರಿನೀಲೋಪಲಕುಂಭಮಂಬುದಚಯಂ ಗಂಭೀರಭೇರೀಮೃದಂ
ಗರವಂ ಗರ್ಜಿತಮುಧ್ವಕಂಕಣಮಣಿ ಪ್ರದ್ಯೋತಿವಿದ್ಯುಲ್ಲತಾ
ಜ್ಝರಮೆಂತಂತಿರೆ ತೀರ್ಥಕೃತ್ಪರಮಸಾರಕ್ಷೇತ್ರದೊಳ್ ಭೋರೆನು
ತ್ತಿರೆ ಪರ್ಜನ್ಯನಿಯೋಜ್ಯಮೇಂ ಕಱೆದುದೋ ಹಸ್ತಂ ಪಯಃಪೂರಮಂ ೬೦

---

1 ಳ್ವ (ಇಉಎ) 2 ಳ್ಕಿ ವು (ಅಇಉ), ಳಿಮು (ಎ)

ನೆರೆದ ಸುರಾಸುರಪ್ರಜದ ನೋಡುವ [1]ಕಣ್ಗಳ್[1] ಪುಣ್ಯಪುಂಜಮಾ
ಪರಿಸಿದುದೆಟ್ದಿ ಪಾಂಡುಕಶಿಲಾತಳಕಾಂತಿ ಕಪಲ್ದು ಮೇಲೆ ಪಂ
ಜರಿಸಿದುದಪ್ಪಿಕೊಂಡುದಮೃತಾಂಗನೆಯ[2]ೞ್ಕ[2]ಱುರ್ಕೆಯೆಂಬಿನಂ
ಸುರಿವ ಪಯಃಪ್ಲವಂ ಮೆಱೆದುದಾ ಜಿನಪುಂಗವನಂಗವಟ್ಟದೊಳ್ ೬೧

ಶಿರದೊಳ್ ಸೂಸಿದ ಸೇಸೆಯಂತೆ ಕೊರಲೊಳ್ ಮುಕ್ತಾಫಲಶ್ರೇಣಿಯಂ
ತುರದೊಳ್ ಚಂದನಚರ್ಚೆಯಂತೆ ಕಟಿಯೊಳ್ ತಳ್ತುಟ್ಟ ಬೆಳ್ವಟ್ಟೆಯಂ
ತೆರಡುಂ ತೋಳೆಡೆಯೊಳ್ ಮೃಣಾಳವಳಯಶ್ರೀಯಂತೆ ಚೆಲ್ವಾಯ್ತು ಮಂ
ದರಧಾರಾಗತಿಯಿಂ ಜಿನೇಂದ್ರನಭಿಷೇಕಸ್ನಿಗ್ಧದುಗ್ಧಪ್ಲವಂ ೬೨

ವ|| ಅಂತುಮಲ್ಲದೆಯುಂ

ಸುರಿವ ಘಟಾಳಿ ತೀವುವ ಘಟಾಳಿ ಮರಳ್ವ ಘಟಾಳಿ ಹಾರಿಯೊ
ಳ್ವರಿವ ಘಟಾಳಿ ಸಾಗರದ ಮೇರುವಿನಂತರದೊಳ್ ನಿರಂತರಂ
ತಿರುಗೆ ಜಿನೇಂದ್ರ ಮಜ್ಜನಮೃಷಾಮೃತದಿಂ ನವರತ್ನಮಾಲೆಯಂ
ತಿರಿಪುವ ಲೀಲೆಯಾದುದಮರೇಂದ್ರರ ಹಸ್ತಸಹಸ್ರಶಾಖೆಗಳ್ ೬೩

ವ|| ಆ ಮಹಾಭಿಷವಣಾಂತರದೊಳ್

ಪಸುಳೆಗೆ ತಕ್ಕ ಮಜ್ಜನಮಿದಲ್ತು ಪುರಂದರನಷ್ಟಯೋಜನ
ಪ್ರಸರದ ಕುಂಭಕೋಟಿಗಳಿನಂಬುಧಿಯಂ ಬಱಿಕೆಯ್ದನೆಂದು ಶಂ
ಕಿಸುವಮರರ್ಕಳೇಱಿದ ವಿಮಾನಮೆ ಗಾಳಿಯ ತೂಳದಂತಿರಾ
ಗುಸಿರ್ವುಸಿರಿಂದೆ ನಂಬಿದರಮರ್ತ್ಯರನಂತವೀರ್ಯಮಂ ೬೪

ಪದಪದ್ಮಾನತನಾಗಿ ಬಾೞ್ವೊಡೆನಗೆಂದುಂ ಕುಂದುಕುಂದೆಂಬುದಾ
ಗದು ತಾನೆಂದೊಲವಿಂ ನಖಪ್ರಕರಮಂ ಸಾರ್ದಿಂದುವಂ ಪೊರ್ದಿ ನಿಂ
ದುದು ಬೆಳ್ದಿಂಗಳ ಪೂರಮೆಂಬ ತೆಱದಿಂ ಶ್ರೀಪಾದಪೀಠೋಪಕಂ
ಠದೊಳೊಪ್ಪಿರ್ದುದನಂತನಾಥನಭಿಷೇಕಸ್ನಿಗ್ಧದುಗ್ಧಪ್ಲವಂ ೬೫

ವ|| ಅಂತುಮಲ್ಲದೆಯುಂ

ಭೋರೆಂದು [3] ಕವಿದು [3] ಸವನ
ಕ್ಷೀರಂ ನಾಲ್ದೆಸೆಯಿನಿೞಿದು ಪರಿದುದು ದಿವಿಜರ್
ಮೇರುಮಹೀಧರಮಲ್ಲದು
ತಾರಮಹೀಧರಮಿದೆಂದು ಪೊಲಗಿಡುವಿನೆಗಂ ೬೬

---

1 ಕಂಗಳ್ (ಅಇ) 2 ಕ್ಕ (ಅಇ) 3 ಸುರಿವ (ಅಇಉ)

ಪಿರಿದು ಪರಕಲಿಸಿ ಮೇರುವ
ನರುಹನ ಮಜ್ಜನಪಯಃ ಪ್ಲವಂ ಮುಸುಕಲೊಡಂ
ಮರನೆನಿತೊಳವನಿತ್ತುಂ ಪಾ
ಲ್ಮರನಾದುವು ಧರೆಯೊಳುಂತೆ ಪಾಲ್ಮರನೊಳವೇ ೬೭

ಮೇಗೆ ನೆಗೆವಮೃತಪೂರದಿ
ನೀಗಳ್ ಬಿಳಿಯಾನೆಯಾದುದೆನಿಸಿದುದು ಬಟಿ
ಕ್ಕೇಗೇಳ್ದಪೆ ಕರ್ಮಕ್ಷಯ
ಭಾಗಿಯ ಸುರಕರಿಯ ಪಿರಿಯ ಸಿರಿಯುತ್ಸವಮಂ ೬೮

ಮುತ್ತಿನ ಲಂಬಣಂ ಪೊಳೆವ ಕುಂಭತಲಕ್ಕೆನೆ ಬಿಂದುಮಾಲೆಯುಂ
ಪೊತ್ತುದು ಪಾಲಧಾರೆಗಳನೊಟ್ಟಿದ ಬಾಲಮೃಣಾಳಮೆಂದು ಕೈ
ಗುತ್ತಿದುದೆಲ್ಲಿ ಮಂದರದ ಕಂದರದುಜ್ವಲಫೇನಪಿಂಡಮಂ
[1]ಬಿತ್ತಗೆ[1] ಮಾಡಿ ಪೊಯ್ಯು[2]ದ[2]ಪಹಸ್ತದಿನಿಂದ್ರನ ಗಂಧಸಿಂಧುರಂ ೬೯

ವ|| ಅಂತುಮಲ್ಲದೆ

ಉತ್ಸಾಹವೃತ್ತ

ಕಂದರಂಗಳಿಡುವಿನೆಡೆಗಳೊಳ್ ಕವಲ್ತು ನಿಲ್ತು ಭೋ
ರೆಂದು ಪಾಯ್ವ ಪಾಲ ಪೊನಲೆ ನೊರೆಯ ಪಿಂಡಲೊಗೆದುವಾ
ಮಂದರಂ ತ್ರಿಲೋಕನಾಥನಭಿಷವೋತ್ಸವಕ್ಕೆ ಪೂ
ರ್ಣೇಂದುಮಂಡಲಂಗಳಿಂದಮಿಂಡೆಯಾಡಿತೆಂಬಿನಂ ೭೦

ಮಾಡಿದನಿಂದ್ರನೆನ್ನೊಳಭಿಷೇಕಮನೀ ಪರಮೇಶ್ವರಂಗೆ ಕೈ
ಗೂಡಿದುದೆನ್ನ ಭೀಷ್ಟಮೆನುತುಂ ದೆಸೆ ದೇವತೆಗಳ್ಗೆ ಜೊಂಪಮಿ
ಟ್ಟಾಡಿದುದಿಂದ್ರಶೈಲಮೆನೆ ಬಂದಿೞಿತಂದುದು ರತ್ನಮೇಖಲಾ
ಲೋಡಿತಫೇನಪುಲ್ಲಪರಿಷಜ್ಜಿತಮಜ್ಜನನಿರ್ಝರಪ್ಲವಂ ೭೧

ವ|| ಮತ್ತಂ ವಿಡೂರ [3]ಘಟಂ[3]ಗಳ ಬಿಡುವಿನಿಂ ಘೃತಾಭಿಷೇಕಮನತಿ[4]ಶಯಿ[4]ಸುವಂತೆಯುಂ ನೊರೆ ತೆರಳಿ ಸುರಿವ ಮೌಕ್ತಿಕಕುಂಭದಿಂದಧಿವಸನಮನಧಿಕರಿಸುವಂತೆಯುಂ ಮಾಣಿಕದ ಕಲಶದ ಶೋಣಾಂಶುಪಟಲದಿಂದಿಕ್ಷುರಸಂಗಳಿಂ ಮಿಸಿಸುವಂತೆಯುಂ

---

1 ಭತ್ತಗೆ (ಎ) 2 ದು (ಅಇಉ) 3 ರಜಂಗಳ ಕೊಡಂ (ಅಇಉ)
4 ಸಂತೈ (ಅಇಉ)

ಪುಷ್ಯರಾಗಘಟರಾಗಘಟೆಯಿಂ ಚೂತರಸಮುಜ್ಜನಮನುಜ್ಜೀವಿಸುವಂತೆಯುಂ ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಟಸೇರ ಪ್ರೊನಲೊಳ್ ಮುಳುಗಿಸುವಂತೆಯುಂ ನೀಲದ ಕಡಾರದ ಕಾಲಿಮಕಾಂತಿಯಿಂ ಮಲಯರುಹಜಲಮಿಳಿತ ಮೃಗಮದಾಭ್ಯಂಗನಮನಂಗೀಕರಿಸುವಂತೆಯುಂ ನಿರ್ವಾಣಪದವೀ ಸಾರ್ವಭೌಮಂಗೆ ಗೀರ್ವಾಣನಾಥರಿರ್ವರುಮಭಿಷೇಕವಿಭವಮನಭಿನಯಿಸುತ್ತಮಿರ್ದು

ತಳಸಾರ್ದುದು ಪಾಲ್ಗಡಲೀ
ಮಳರಹಿತನ ಮಜ್ಜನಕ್ಕೆ ಸಲಿಲಂ ಕಲಿಲಂ
ಗಳಿವಾದುವೆಂದು ದೇವ
ರ್ಕಳನಿಂದ್ರಂ ಹಸ್ತಸಂಜ್ಞೆಯಿಂ ಬಾರಿಸಿದಂ ೭೨

ವ || ಆ ಸಮಯದೊಳ್

[1]ತೆಳ್ಪಳ್ಳನಾ[1]ದ ಪಾಲ್ಗಡ
ಲೞಳ್ದಿ[2]ರೆಯೊಳ್ ಮಸುಳ ಮಸುಳ್[3]ನೆ[3]ಸೆದುವು ಮಣಿಗಳ್
ಬೆಳ್ದಿಂಗಳ ಪೊರೆ[4]ವೊ[4]ರೆಯೊಳ್
[5]ದಳ್ದಳಿ[5]ಸದೆ [6]ಮಿನುಕು[6]ತಿರ್ಪ ತಾರಾಳಿಯವೊಲ್ ೭೩

[7]ಕೆರೆಕೆರೆದು ವೊ[7]ಗೆಯೆ ಮಾಣಿಕ
ವರಲೆಲ್ಲಂ ಬೆದಱಿ ತಾಯ ಬಸಿಱಂ ಪುಗುವಂ
ತಿರೆ ಪೊಕ್ಕುವು ರತ್ನಘಟೋ
ದರಮಂ ಜಿನಜನ್ಮ ಸವನಮೇನಚ್ಚರಿಯೋ ೭೪

ವ || ಅಂತು[8]ಮಲ್ಲದೆಯುಂ[8]

ಪಂಚಮಜಲಧಿಯ ಪಾಲ್ಗಡ
ಲಂ[9]ಚಿರಮಾದೊಡೆ ಬಱಿಕ್ಕೆ ತೀರ್ಥಜಲಂಗಳ್
ಪಿಂಚಿ[10]ದುವಿ[10]ಲ್ಲೆಂಬಂತಿರೆ
ಮುಂಚಿದರಲ್ಲಲ್ಲಿಗೆಯ್ದಿ ವೊಗೆಯಲ್ಡಿವಿಜರ್ ೭೫

1 ತಳ್ದಿಳ್ಳಮಾ (ಅಇಉ) 2 ಳ್ದ (ಅಇಉ) 3 ದೆ (ಅಇಉ) ವೊ 4 ಪೊ (ಎ) 5 ಗಳ್ದಳಿ (ಅಇಉ) 6 ವೆಸಗು (ಎ) 7 ಕರೆಗೆರೆದು (ಅಇ) ಕರೆಗರೆದುಸೆ (ಎ) 8 (ಎ) ಯಲ್ಲಿಲ್ಲ 9 ಲ್ಕೊಗೆದ (ಅಇಉ) 10 ದರ್ಗ (ಅಇಉ)

ವ || ಅಂತು ತಂದು ವೃಂದಾರಕವೃಂದಮುವಟಯಿಸುವಾಗಳ್

ಗಗನಾಸ್ಫಾಟಿಕಕುಂಭಸಂಭೃತ ಸರಸ್ಸೊಸ್ರೀತಸ್ವಿನೀದಿವ್ಯವಾ
ರಿಗಳಿಂದುದ್ಗತದೇವದೇಹ ಸುರಭಿಶ್ರೀವಾಸಿತಾಚ್ಛಾಚ್ಛಶೋ
ಭೆಗಳಿಂ ನಾಕಜನಾಥರಿರ್ವರುಮಮೂರ್ತಧ್ಯಾನ[1]ಸಾ[1]ರಸ್ಯಮಂ
ಜಗದಾತ್ಮಂಗೆ ನಿವೇದಿಪಂತೆಸಗಿದರ್ ಗಂಧೋದಕ ಸ್ನಾನಮಂ ೭೬

ಪರಮೌದಾರಿಕದಿವ್ಯದೇಹಸಹಜಾಮೋದಂಗಳಿಂದಂ ಸರೋ
ವರಗಂಗಾದಿನದೀಜಲಕ್ಕೆ ಮೆಱೆ[2]ಗುಂ[2] ಗಂಧೋದಕಾಖ್ಯಾನಮಾ
ಸಿರಿಗಂಪಾ ಘನಸಾರಮಾಸುರಭಿನವ್ಯದ್ರವ್ಯಮೇಕೀ ಜಗ
ದ್ಗುರು ಗಂಧೋದಕಮೊಂದೆ ಮುಕ್ತಿಕಮೆಯುದ್ವಾಹಕ್ಕೆ ಹಸ್ತೋದಕಂ ೭೭

ಉಗಿಬಗಿಯಾಗಿ ಬಾಗಿ ಕೊಳಲೆಂದು ಕಡಂಗುವಶೇಷದೇವಕೋ
ಟಿಗಳವಗಾಹಮಿರ್ಪಿನಮನುತ್ತರಸೌರಭಲುಬ್ಧಭೃಂಗಮಾ
ಲೆಗಳೊಡವಾಯೆ ಗಂಧಜಲವಾಹಿನಿ ಕಾಱ್ಪುರಮಾದ ಗಂಗೆಯುಂ
ಜಗುನೆಯುಮೆಂಬಿನಂ ಮೆಱೆದುದಾನಗಮಾವನಮಾಗೆ ಪಾವನಂ ೭೮

ನಾದೇಯ[3]ವಾರಿ[3] ದಿವ್ಯಾ
ಮೋದಂ ತಳ್ವೊಯ್ದು ಪೊಂಗೆ ಕಂಪಾಯ್ತೆಂಬಂ
ತಾದುದು ಸುವರ್ಣಗಿರಿ ಗಂ
ಧೋದಕದಿಂ ತ್ರಿಭುವನೈಕಚೂಡಾಮಣಿಯಾ ೭೯

ವ || ತದನಂತರಂ

ದೇವಾಂಗ[4]ದಿಂದೆ ತೊಡೆದಳ್[4]
ದೇವಾಂಗನೆ ರತ್ನಮುಕುರಮಂ ತೊಡೆವವೊಲಾ
ದೇವಾಂಗಮನೊಲ್ದೆಱಗುವ
ದೇವಾಂಗವಿಭೂಷಣಾಂಶು ಮಾರ್ಪೊಳೆವಿನೆಗಂ ೮೦

ವ || ಅನಂತರಮಭಿಷವಣಮಣಿಸಿಂಹಾಸನದಿಂದಲಂಕರಣವಿಷ್ಟರಮಂ ವಿಷ್ಟಪತ್ರಯಾಲಂಕಾರದಿಂದಮಲಂಕರಿಸಿ

---

1 ಸ್ವಾ (ಉ) 2 ದುಂ (ಅಇಉ) 3 ಮಾಗಿ (ಅ) ವಾಗಿ (ಇ ಉ)
4 ದೆ ದೇವೇಂದ್ರನ (ಅಇಉ)

ತೊಡವಿಂಗೆ ತೊಡವು ರತ್ನದ
ಬಿಡುವಿಂಗೆಸೆವೊಪ್ಪಸಲಗೆ ಕಾಂತಿಗೆ ಕೈಗ
ನ್ನಡಿ ತೀರ್ಥಕರಕುಮಾರನ
ಬೆಡಂಗು ಬೆಳ್ಮಾಡಿದಪುದಲಂಕರಿಸುವರಂ ೮೧

ವ॥ ಎಂದಚ್ಚರಿವಟ್ಟು ಮೆಚ್ಚಿ ಪೊಗಟ್ದು ಪರಮೌದಾರಿಕದಿವ್ಯಶರೀರ ಸೌಂದರ್ಯಮನೊಡನೆ ಬಿಡೌಜನಂಗನೆ ಮಂಗಳಪ್ರಸಾದನಮಂ ಜಗನ್ನಾಥನಿಂ ಸನಾಥಂ ಮಾಡಿದಾಗಳ್

ಅರಳಿಲೆ ಮಾಂಗಾಯ್ ಕಿವಿಯೊಳ್
ಕೊರಲೊಳ್ ತಳತಳಿಸೆ ಪಾರಿಜಾತ ಕುಜಾತಂ
ಕರದೊಳೆ ಕೈವಂದಂತಿರೆ
ಪರಮನ [1]ಪೊಸ[1] ಬಾಲಭಾವಮೇನೊಪ್ಪಿದುದೋ ೮೨

ದುರಿತ ಮದಗಜದ ಬಿದುವಂ
ಬಿರಿಯಿಱುವುದನಱಿಪುವಂತೆ ಕೇಸರಿನಖರಾಂ
ಕುರಮೆಸೆದುದು ಕುಲಿಶದಳ
ಸ್ಫುರಿತಂ ಕೊರಲೊಳ್ ಕುಮಾರಕಂಠೀರವನಾ ೮೩

ಕಡಗದ ಗೆಜ್ಜೆಯ ಕಂಕಣ
ದುಡೆವಣಿಯ ಬೆಡಂಗು ಸಕಲಮಂಗಳವಧು ಕಾ
ಲ್ವಿಡಿದಪ್ಪಿಕೊಂಡು ಕೆಯ್ಯಂ
ಪಿಡಿದವೊಲೆಸೆದುದು ಜಿನಂಗೆ ಮೌಕ್ತಿಕಖಚಿತಂ ೮೪

ಅತಿಶಯಮೆಂದೂರ್ವಶಿ ರಂ
ಭೆ ತಿಲೋತ್ತಮೆ ಮಂಜುಘೋಷೆ ಮೇನಕೆವೆರಸಾ
ರತಿಯೆತ್ತಿದಳಭವನ ದಿ
ವ್ಯತನುಗೆ ಶಚಿ ನೋಡೆ ನೋಡೆ ವಿಸ್ಮಯದಿಂದಂ ೮೫

ಅಷ್ಟವಿಧಕರ್ಮವೈರಿಯ
ನಷ್ಟವಿಧಾರ್ಚನೆಗಳಿಂದಮರ್ಚಿಸಿ ಭರದಿಂ
ಸಾಷ್ಟಾಂಗವೆಱಗಿ ಬೞಿಯಮ
ಭೀಷ್ಟಸ್ತುತಿಗೆಯ್ವಂ ತ್ರಿಭಂಗಿಭಣಿತೆಯಿನಿಂದ್ರಂ ೮೬

1 (ಎ) ಪ್ರತಿಯಲ್ಲಿಲ್ಲ.

ವ|| ಸಮನಂತರಂ

ಅಲರ್ದ ಸರೋಜಷಂಡಮೆಳನೇಸಱನರ್ತಿಯಿನೆತ್ತಿದಂತೆ ಕ
ಣ್ಮಲರ್ವಿನಮೆಯ್ದೆ [1]ತಣ್ಮಲರ್ವಿ[1]ನಂ ನಡೆನೋಡಿ ಕಿರೀಟಲಕ್ಷ್ಮಿಯುಂ
ನಲಿನಲಿದಾಡುವಂತೆ ತಲೆದೂಗಿ ನಿಜಾಂ[2]ಕ[2]ದೊಳಿಂದಿರಂ ಜಗ
ತ್ತಿಲಕನನಿಟ್ಟು ಮೇರುನಗದಿಂ ತಳರ್ದಂ ವೃಧಿರೂಢಸಿಂಧುರಂ ೮೭

ಸಾರಣೆ ಮಾಣ್ದ ವೀಣೆಯವೊಲಾದುದು ಸಂದಣಿ ಪಿಂಗೆ ಪಿಂದೆ ತ
ನ್ಮೇರುಮಹೀಧರಂ ಬರೆದು ಬರ್ಚಿಸಿದಂತೆಡೆಯೊಳ್ ಪ್ರಯಾಣದಿಂ
ಮಾರುತಮಾರ್ಗಮೊಪ್ಪಿದುದು ನೋಡುವ ಕಣ್ಮಲರೆಂಬ ತುಂಬಿಗ
ಳ್ಗಾಗರಮೆಯಾಯ್ತು ಮುಂದೆ ಪರಮೋತ್ಸವಕಾರಣಮುದ್ಧ್ವತೋರಣಂ ೮೮

ಪರಮಾರಾಧ್ಯನ ಕಾಯಕಾಂಚನರುಚಿವ್ಯಾಸಕ್ತಿಯಿಂ ಕಣ್ಣ ಮೆ
ಯ್ಸಿರಿ[3]ಹೊನ್ನಾ[3]ವರೆ [4]ಹೊತ[4]ವೊಲ್ ಮಱ[3]ವಿನಂ ದೇವಾಂಗನಾಚಾರುಚಾ
ಮರವೃಂದೋ[5]ದ್ಗ[5]ತಮಂದಮಾರುತಚಲದ್ಗಂಧೋದಭಾರಾ[6]ಳಕಾಂ[6]
ಕುರನೆಟ್ಟಿಂದನಯೋಧ್ಯೆಗುತ್ಸವದಿನಿಂದ್ರಾಣೀಮನೋವಲ್ಲಭಂ ೮೯

ವ|| ಅಂತು ಬಂದಾ ಪುರಗೋಪುರಾಂತರಾಳದೊಳನೇ[7]ಕನಾಕಿ[7]ನಿಕಾಯಮಂ ನಿಲಿಸಿ ಕಲ್ಪಾಮರೇಂದ್ರಸಮಾಜಂ ಬೆರಸು ರಾಜಮಂದಿರಮಂ ಪೊಕ್ಕು ಕರುಮಾಡಕ್ಕೆ ಪರಭಾಗಮಾಗೆ ತನ್ನ ಬೆಸದಿಂ ಮುನ್ನಮೆ ಸಮೆದ ಸಾತ್ವಿಕಭಾವದಂತೆ ಸಮುಜ್ಜೃಂಭಿತ ಸ್ತಂಭಮುಮನರ್ಘ್ಯರತ್ನದಂತೆ ರಂಗರಮಣೀಯಮುಮಂ ಗಾಂಧರ್ವದಂತೆ ವಿತಾನವಿಶೇಷ ಮುಂ ಶೃಂಗಾರಾಂಗದಂತಿರಾಲಂಬನವಿಡಂಬಮುಂ ರತ್ನಾಕರದಂತಿರುಪಾಂತ ಪ್ರವಾಳ ಮುಂ ವಿಯತ್ತಳದಂತೆ ಚಿತ್ರಾಭಿರಾಮಮುಮಂ ಸೇನಾಪ್ರತಾನದಂತೆ ಪತ್ರಸಂಕೀರ್ಣಮುಂ ವಿರಹಿಣೀಹೃದಯದಂತಿರುತ್ಕಲಿಕಾಕಲಿತಮುಂ ದೇವತೋಪಾಸ್ತಿಯಂತೆ ವಂದನಮಾ ಲಾಭಿನಂದಿತಮುಮಾದ ಮಣಿಮಂಡಪದ ಮಧ್ಯವೇದಿಕೆಯ ಸಿಂಹಾಸನದೊಳ್ ಜಿನ ಸಿಂಹಕಿಶೋರಕನನಿರಿಸಿ ಮಾಂಗಳಿಕಪರಿಕರಂಬೆರಸು ತನಗಿದಿರೆಳ್ದ ಸಿಂಹಸೇನಮಹಾರಾಜ ನುಮಂ ಜಯಶ್ಯಾಮಾ ಮಹಾದೇವಿಯುಮನಭಿನಂದಿತಚಾಟುಚಾತುರ್ಯದಿಂ ಸಂತೋ ಷಂಬಡಿಸಿ ಮಂದರಾಚಳಚೂಳಿಕಾಚರಿತಜನ್ಮಾಭಿಷವಣ ಕಲ್ಯಾಣಮನವರ್ಗೆ ವಿದಿತಂ ಮಾಡಿ ಸಿಂಹಾಸನೋಭಯಪಾರ್ಶ್ವಪ್ರದೇಶದೊಳ್ ದೇವಾದಿದೇವಪದರಾಜೀವಸೇವಾ ವಿಲಾಸದಿನಿರ್ದಲ್ಲಿ

---

1 ತಣ್ಣಲೆ ವಿ (ಅಇ) ತಣ್ಮಲೆವಿ (ಉ) 2 ಗ (ಅಇಉ) 3 ಪೊಂದಾ (ಅಇಉ) 4 ಪೂ (ಅಇಉ) 5 ದ್ಧ (ಅ) 6 ನಲಾಂ (ಎ) 7 ಕನಾಕ (ಅಇಉ), ಕಾಗಿರೆ ನಿನಾದೆ (ಎ)

ಪಡೆವಂ ಲೋಕಮನೀಜಗದ್ಗುರು ದಯಾಲೋಕಾಮೃತಾಸಾರದಿಂ
ಕಿಡೆ ಕರ್ಮಾನಳನಾ ಜವಂಜವಿಗಳೆಲ್ಲಂ ಸೌಖ್ಯಜನ್ಮಂಗಳಂ
ಪಡೆವನ್ನಂ ನೆಗಳ್ದೀ ಮಹಾಮಹಿಮನಂ ತಾಯ್ತುಂದೆವಿರ್ ಪುಣ್ಯದಿಂ
ಪಡೆದಿರ್ ನಿಮ್ಮ ಮಹತ್ವಮಿಾ ತ್ರಿಭುವನಪ್ರೋತ್ತುಂಸಿಕಾಭೂಷಣಂ ೯೦

ವ || ಎಂದಿಂದ್ರನಭಿವಂದಿಸಲೊಡಂ

ಪರಮಸುಖಾಮೃತಂ ನಯನನಿಮ್ನಗೆಯಂ ಕರೆಗಣ್ಮವಂತಿರು
ಬ್ಬರಿಸೆ ಮುದಶ್ರುಪೂರಮಮರೇಂದ್ರವಚೋಮಲಯಾನಿಲಂ ನವಾಂ
ಕುರಮನೊಡರ್ಚಿದಂತೆ ಪುಲಕಾಂಕುರಮಂ ತನುವಲ್ಲಿ ತಾ[1]ಳ್ದಿ[1] ಮಾ
ತರಪಿತರರ್ ಕುಮಾರಮುಖದರ್ಶನದಿಂ ಪಡೆದರ್ ಪ್ರಮೋದಮಂ ೯೧

ವ || ಆಗಳ್

ತಾಳದ ವಾದ್ಯದ ನೃತ್ಯದ
ಚಾಳಿಪ ಪಂಚಮದ ಮಂಗಳಾಚಾರದ ಸ
ಮ್ಮೇಳದಿನಮೃತಪಯಃಕ
ಲ್ಲೋಳಿನಿಯೊಳ್ ಮುಳುಗಿಸಿತ್ತು ಸುರನರಸಭೆಯಂ ೯೨

ಗತಿಗೆ[2]ಟ್ಟಿ[2]ಡುವ ಸೊ[3]ಕ್ಕನಿ[3]ಕ್ಕಿದಪುದಾಸಂಗೀತಕಂ ದೇವನೂ
ರ್ಜಿತಪುಣ್ಯೋದಯಮೆಂಬುದಪ್ರ[4]ಮಿತವಾ[4]ತಂ ರಾಗಿ ಮತ್ತಂತರಂ
ಗತರಂಗಂ ನೆಲೆವೆರ್ಚಿ ಮಾಣ್ಬನೆ ಮಿನೇಯಂ ಕಟ್ಟೆದುಟ್ಟಿಟ್ಟ ದೇ
ವತರಂ ಮಂಡಿಸಿಕೊಂಡ ಗೆಜ್ಜೆ ಮಿಗೆ ರಂಗಂಬೊಕ್ಕನಾಖಂಡಲಂ ೯೩

ಪಿಡಿದ ಜವನಿಕೆಯ ಮಱೆಯೊಳ್
ಕು[5]ಡು[5]ಮಿಂಚಿನ ಬಳ್ಳಿಮುಗಿಲ ತೆ[6]ಳ್ಪೊ[6]ರೆಯೊಳ್ ಕ
ಣ್ಗೆಡಱು[7]ವೊಲಡರೆ ತೋರ್ದುವು[7]
ತೊಡವಿನ ಬಿಡುವುಂ ಬಿಡೌಜನಂಗಚ್ಛವಿಯುಂ ೯೪

---

1 ಳ್ದ (ಅಇಉ) 2 ದ್ದಾ (ಎ) 3 ಕ್ಕಿ (ಅಇಉ) 4 ತಿಮುದೂ (ಎ)
5 ಡಿ (ಅ ಇ) ಡ (ಉ) 6 ಜ್ಪೊ (ಅ ಇ ಉ) 7 ವೊಲ್ ಧರೆ ಪೊಡರ್ದುವು
(ಅಇಉ)

ತನು [1]ಋಜು[1]ಭಾವದೊಳ್ ಮೆಱೆಯೆ ರೂಪಿನ ಮೇಗಣರೇಖೆ ಡಾಳದೊಳ್
ನನೆಕೊನೆವೋಗೆ ಬಂದು ಕುಸುಮಾಂಜಳಿಯಂ ಬಳವೈರಿ ಸೂಸೆ ಪೂ
ವಿನ ಮಱೆಗಳ್ ಜಿನಾರ್ಭಕನ ಪಾದನಖಚ್ಛಲದಿಂದೆ ನಿಂದು ಚಂ
ದ್ರನ ಬೞಿಸಂದ ತಾರಗೆಯೊಳೋರಗೆಯಾದುವು ನೃತ್ಯರಂಗದೊಳ್ ೯೫

ಪ್ರಣಯಾಲಂಬ ವಿಧಾಯಿ[2] ವರ್ತನವಿಧಂ ಕರ್ಣಾಮೃತಂ ಘರ್ಘರೀ
ಕ್ವಣಿತಂ ಕೌತುಕಹೇತು ಚಿತ್ರನಟನಂ ಕೈವಾರವಾರಂದಮ
ಲ್ಲಣಕಂ ಗೀತದ ಮಾತಮಾನುಷಮದೇಂ ಪಂಚಾಂಗವೊಪ್ಪಿತ್ತೊ ಪೇ
ರಣಿ ಸಂಕ್ರಂದನನಲ್ಲದಿಲ್ಲೆನಿಸಿದತ್ತಾತಾಂಡವಾಡಂಬರಂ ೯೬

ನಯನಾನಂದಮನಿತ್ತುದಿಂದ್ರನಟನಪ್ರಾಗಲ್ಭ್ಯದಿಂ ಕೂಡೆ ಚಾ
ರಿಯೊಳುಲ್ಲಾಳದ ಬೇಗದೊಳ್ ಕರಣವೈಷಮ್ಯಂಗಳೊಳ್ ದೇವಕಾಂ
ತೆಯರಲ್ಲಾಡದೆ ಸಂದ ಸೆಳ್ಳುಗುರ ಸೂಚೀನರ್ತನಂ ಬಾಹುಶೋ
ಭೆಯ ಜಕ್ಕಂದೊಱವಂಶಮಂಡಲದ ಲಾಸ್ಯಂ ತನ್ನ ಮೆಯ್ಯುದ್ದ[3]ಮಂ[3] ೯೭

ವ|| ಅಂತುಮಲ್ಲದೆ

ನಿಂದ ಭರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟೆ ಲಯಕ್ಕೆ ದಿಗ್ಗಜಂ
ಪಿಂದಡಿಯಿಟ್ಟು ಬೆರ್ಚುತಿರೆ ಪಿಂದೆಸೆಗಳ್ ತಡಮಾ[4]ಗೆ[4] ತಾಂಡವಾ
ನಂದದಿನಾಡುವಲ್ಲಿ ಹರಿ ನೀಡಿದ ತೋಳ್ಗಳೊಳಾಡಿದತ್ತು ಜ
ಕ್ಕಂದೊಱವಂ ಭ್ರುಮದ್ಭ್ರಮರದಿಂದಮರಪ್ರಮುದಾಕದಂಬಕಂ ೯೮

ಅದನೇವೇೞ್ವೆನಾಜಿನೇಂದ್ರನುಹಿಮಾನಷ್ಟಂಭಮಂ ಮೂಱು ಲೋ
ಕದೊಳಂ ಪುಟ್ಟಲೊಡಂ ಮಹೋತ್ಸವರಸಂ ತಳ್ಪಂಕಗುಟ್ಟಿತ್ತು ತೀ
ರ್ದುದು ದುಗ್ಧಾಂಬುಧಿ ಮೇರು ಪೀಠಮೆನೆ ಮಿಂದಂ ಚೆಣ್ಣನಿಂದ್ರಾಣಿ ಪಾ
ಡಿದಳೆೞ್ದಾಡಿದನಿಂದ್ರನಿಂದ್ರರೆ ಗಡಂ ಕೈವಾರಮಂ ಮಾಡಿದರ್ ೯೯

ವ|| ಅಂತು ಲೋಕಾಶ್ಚರ್ಯಮುಮಪೂರ್ವರಸಮಾಧುರ್ಯಮುಮಾಗೆ ವೃತ್ರವೈರಿ ನೃತ್ಯವಿಲಾಸಮಂ ಮೆಱೆದನಂತರಮನಂತದುರಿತವಿಜಯಿಯಪ್ಪುದಱನನಂತಜಿತ್ತುಮನಂತಚತುಷ್ಟಯಸ್ವರೂಪನಪ್ಪುದರಿನನಂತನಾಥನುಮೆಂಬ ಪರಮ ವಚನಶ್ರುತಪೂರ್ವಂಗಳಂ ಸಕಲಮಂಗಳಂಗಳಂ ಪೆಸರ್ಗೊಂಡೆತ್ತಿ ಸಲಪುವ ಧಾತ್ರೀನಿಯೋಗಕ್ಕಮರ್ತ್ಯಮಹತ್ತರಿಕೆಯರುಮಂ ಡಿಂಭಕ್ರೀಡಾತಿರಂಭಕ್ಕೆ ತಕ್ಕ ವೃಂದಾರಕದಾರಕರುಮಂ ನಿಯೋಜಿಸಿ ತದೀಯ ಪಿತೃದ್ವಂದ್ವಮಂ ಪೂಜಿಸಿ

1 ಭುಜ (ಅಇಉ) 2 ನ (ಅಇಉ) 3 ತಂ (ಎ) 4 ಡೆ (ಅಇಉ)

ದಿವಿಜೇಂದ್ರೇಭದ ಬೆಂಗೆವಂದು ವಿನಯಪ್ರಾಧಾನ್ಯವಾಕ್ಯೋಕ್ತಿಯಿಂ
ಭವನೇಂದ್ರಾದ್ಯಮ[1]ರೇಂದ್ರರಂ[1] ಕಳಿಪಿ ಕಲ್ಯಾಣಕ್ರಿಯಾಕಾರಕ
ಸ್ವವಿವೇಕಂ ಕೃತಕೃತ್ಯಭಾವಮೆರ್ದೆಯೊಳ್ ತಳ್ಪೊಯ್ದಿನಂ ಪೊಕ್ಕನು
ತ್ಸವದಿಂ ಬಂದಮರಾವತೀನಗರಮಂ ಸಾಹಿತ್ಯರತ್ನಾಕರಂ ೧೦೦

## ಗದ್ಯ

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತನಾಥಪುರಾಣದೊಳ್
ಜನ್ಮಾಭಿಷೇಕವರ್ಣನಂ ಪಂಚಮಾಶ್ವಾಸಂ

---

1 ರರ್ಕಳುಂ (೨)

# ಷಷ್ಠಾಶ್ವಾಸಂ

ಶ್ರೀ ಧಾತ್ರಿಯಾದವೋಲಮ
ರೀಧಾತ್ರಿಯರಮೃತರಸದೆ ಬಳೆಯಿಸೆಯವ್ಯಾ
ಬಾಧಂ ಮತಿಶ್ರುತಾವಧಿ
ಬೋಧಂ ಬಳೆದಂ ವಿನೇಯಜನಮುಖತಿಲಕಂ ೧

ವದನವನರುಹದ ಪದಪ
ದ್ಮದ ಕರಸರಸಿಜದ ಚೆಲ್ವು ತನುರೋಚಿಃ ಪೂ
ರದೊಳಲರೆ ಪೊನ್ನ ನೀರ್ ತೀ
ವಿದ ಪೂಗೊಳ[1]ದಂ[1]ತೆ ಮೆಱೆದನುತ್ತಾನಶಯಂ ೨

ಪರಮಪವಿತ್ರನಂ ಪರುಷವೇಧಿಯ ತೊಟ್ಟಿಲೊಳಿಟ್ಟು ನಚ್ಚಿನ
ಚ್ಚರಿಯರನಂ[2]ತ[2] ಜೋ ಅನಘ ಜೋ ವದನದ್ವಿಪಸಿಂಹ ಜೋ ಚರಾ
ಚರಪರಮೇಷ್ಠಿ ಜೋ ಭುವನ ಭೂಷಣ ಜೋ ಜಗದಾತ್ಮ ಜೋ ಜರಾ
ಮರಣವಿದೂರ ಜೋ ಎನುತೆ ಜೋಗುಳಮಂ ಶ್ರುತಿಗೂಡಿ ಪಾಡಿದರ್ ೩

ಮಾಣಿಕದ ತಿಂಗಣಿಯಂ
ಮಾಣದೆ ಕಣ್ಬೆಳಗು [3]ಬಳಸೆ[3] ಮುತ್ತಿನ ಸುತ್ತಂ
ಮಾಣಿಕದ ಮೇಲೆ ಮಕ್ಕಳ
ಮಾಣಿಕಮಡಿಗಡಿಗೆ ತೊಟ್ಟಿಲೊಳ್ ಪುಟ್ಟಿಸುಗುಂ ೪

ಪೊಡೆ ಮಗುೞ್ವಿಡೆಯೊಳ್ ಪೊಕ್ಕುೞಿ
ಕುಡಿಸುೞಿಯಂ ವಳಿಯಿನೆಸೆದು ತೆಳ್ವೊಡೆ ಕಡುಚೆ
ಲ್ವಡೆದುದು ಬೋಧಾಮೃತದೊ
ಳ್ಗಡಲಾನನ ಶಶಿಯಿನುರ್ಬಿದಂತರ್ಭಕನಾ ೫

ಪಡೆದ ಪಿತೃದ್ವಯಕ್ಕೆ ಕಡುಸಂತಸಮಂ ಪಡೆಯಲ್ ವಿಬೋಧಮಂ
ಮಡಗಿ ನೆಗೞ್ಚಿ ಮುದ್ದುತನಮಂ ಪರಮೇಶ್ವರನಿತ್ತಲಿತ್ತಲೆಂ
ದೊಡೆ ಮೊಗನೋಡಿ ನಕ್ಕನಡರ್ದಂ ಜನನೀಘನಜಂಘೆಯಂ ತೊದ
ಳ್ನುಡಿನುಡಿದಂ ತಳರ್ನಡೆಗಳಂ ನಡೆದಂ ಚಿಟುಕಿಟ್ಟೊಡಾಡಿದಂ ೬

---

1 ನಂ (ಅಇಉ)   2 ಗ (ಅಇಉ)   3 ಬೆಳಗೆ (ಅಇಉ)

ಸ್ಮೇರಮುಖಂ ತೀರ್ಥಕರಕು
ಮಾರಂ ಮುದ್ದಾಟದಿಂದಮೆಲ್ಲರ ಕೆಯ್ಗೆ
ಯ್ಗೇರಂತೆ ಬಂದನನಿತುಂ
ತಾರಾಳಿಗೆ ಬರ್ಪ ತರುಣಹರಿಣಾಂಕನವೊಲ್ ೭

ತೊದಳಿಸದ ತೊದಳ್ ಕೊಂಕಿ
ಲ್ಲದ ದಟ್ಟಡಿ ರಾಗವಿಲ್ಲದೊಳ್ನಗೆ ಕಿಸುರಿ
ಲ್ಲದ ಮುದ್ದಾಟಂ ಮುಳಿಸಿ
ಲ್ಲದ ಕಾಟಂ ಬಾಲಭಾವಮಚ್ಚರಿ ಜಿನನಾ ೮

ಒಳಗಱಿಯದೆ ತನು ತಾನೆಂ
ಬಳಿಕರೆ ಬಹಿರಾತ್ಮರೆಂದು ನಗುವಂತಿರ್ದಂ
ಪಳಿಕಿನ ಭಿತ್ತಿಗಳೊಳ್ ಮಾ
ರ್ಪೊಳಿಪಂ ತಾನೆಂದು ತೆಗೆದು ನಗುವ ಕುಮಾರಂ ೯

ವ|| ಅಂತು ಮೆಱೆದು ಕರಣಜಾಳ ಜಾಡಿಕಾಱ ಶೈಶವಪ್ರಾವೃಷೇಣ್ಯಮೋಸರಿಸಲೊಡಂ ಮತಿಶ್ರುತಾವಧಿಬೋಧಪ್ರದ್ಯೋತನಪ್ರಭಾವದಿಂ ಸಹಪಾಂಸುಕ್ರೀಡಿತರಾದಮರಕುಮಾರರೊಳ್ ಕುಮಾರಶೇಖರಂ ಛಂದೋವಿಚ್ಛಿತ್ತಿಯೊಳ್ ಜಾತಿಷಟ್ಪ್ರತ್ಯಯಾದಿ ಪ್ರಸ್ತಾರವ್ಯಾಪ್ತಿಯುಮಂ ಅಲಂಕಾರದೊಳ್ ಶಬ್ದಾರ್ಥ ಜಾತಿದ್ರವ್ಯಕ್ರಿಯಾಗುಣ ಪ್ರಪಂಚಮುಖಮಂ ಅಭಿಧಾನಕೋಶದೊಳೇಕಾನೇಕಾರ್ಥಾವ್ಯಯಲಿಂಗಪ್ರಸಂಗಮುಮಂ ಕಾಮತಂತ್ರದೊಳ್ ನಾಯಕನಾಯಿಕಾಭೇದಭಿನ್ನಕಲಾಕೌಶಲಮುಮಂ ಭಾರತಿಕವಿದ್ಯೆಯೊಳ್ ತೂರ್ಯ[1]ತ್ರಿ[1]ತಯ ಮಾಧುರ್ಯಮಾನಭಾವಭಂಗಿಯುಮಂ ನೀತಿಶಾಸ್ತ್ರದೊಳ್ ಧರ್ಮಾರ್ಥಕಾಮೋಪಲಬ್ಧಿತಾತ್ಪರ್ಯಮುಮಂ ಪ್ರತ್ಯೇಕಮಭಿವ್ಯಂಜನಮುಂ ಮಾಳ್ಪನಂತುಮಲ್ಲದೆಯುಂ

ಇದು ಶಬ್ದಾಗಮನಿರ್ಣಯಂ ನಿಗಮಮಿಾಪಾಂಗರ್ಥಶಾಸ್ತ್ರಕ್ಕೆ ಕಾ
ವ್ಯದ ಭೇದಂಗಳನಿತ್ತು ನಾಟಕರಸಂ ಭಾವಂಗಳೀಯಂದಮಿಂ
ತಿದು ಮರ್ಮಂ ಕಲೆಗಾಗಮಾನ್ವಯಮಿಜೇಂಬಾಮ್ನಾಯದಿಂ ದಾರಕ
ತ್ರಿದಶರ್ ಪ್ರಶ್ನೆಕರಾಗೆ ತಾಂ ತಿಳಿಪುವಂ ತ್ರಿಜ್ಞಾನರತ್ನಾಕರಂ ೧೦

1 (ಎ) ಪ್ರತಿಯಲ್ಲಿಲ್ಲ

ವ|| ಮತ್ತಂ ಪರ್ಜನ್ಯ ವಿಸರ್ಜಿತ [1]ಮಜ್ಜ[1]ನಿಕ [2]ನಿಸರ್ಜಿತ[2] ಮರುತ್ತರಂಗಿಣೀ ಘನರಸಾಭ್ಯಂ[3]ಗ[3]ನದೊಳಂ ಸುಮನೋಮಹಾನಸಿಕ ಪರಿಕಲ್ಪಿತ ದೇವಾನ್ನಪಾನ ಸೇವನಾ ಸಾತತ್ಯದೊಳಂ ಗೀರ್ವಾಣಕಾಮಿನೀಕರಕಿಸಲಯಾಗತಹರಿಚಂದನಪಂಕಪಾರಿಜಾತಪ್ರಸವ ದೇವಾಂಗವಸನಸಾರಹಾರಭೂಷಾವಿಶೇಷದೊಳಂ ವೃಂದಾರಕದಾರಕವಿಪ್ರಯಾವಿಲಸಿತ ಮಲ್ಲಮೇಷಮಹಿಷಕುಕ್ಕುಟಪಿಂಜಯಾವಕನಿಕಾಯವಿಚಿತ್ರವಿನೋದದೊಳಂ ಪರಿವರ್ಧಿತಕರನಾದತಾರುಣ್ಯಪ್ರಾಗ್ಭಾವದೊಳ್

ಪರಮನ ಪೋಲ್ವೆಗೆ ಬರ್ಪಂ
ತಿರೆ ತ[4]ಮ್ಮೊ[4]ಳ್ ಬಾದುಗುಟ್ಟಿ ಸುರಡಿಂಭರ್ ಬಿ
ತ್ತರಿಸಿದ ವಿಕ್ರಿಯೆ [5]ಪೋಲ್ವಂ[5]
ತಿರೆ ಸಹಜಾತಿಶಯ[6]ದಶಕದಿಂದಂ ಪೋ[6]ಲ್ವರ್ ೧೧

ತಕ್ಕು ತಗುಳ್ದು ಕಾಯ್ದೊದವೆ ಕೋಟ್ಕಳ ತಳ್ಕಱಯಿಂದೆ ಕೆಂಡಮ
ಲ್ಲೊ[7]ಕ್ಕಿ[7]ರೆ ತೇನತೇನಮುವತಂಬಿ ಗುಣಂ ತಿಗುಣಂಗಳೊಲ್ ಮೊಗಂ
ಬೊಕ್ಕ ಗಜಂಗಳಂ ನಿಜಭುಜಾರ್ಗಳಮುಗ್ಗಳಿಯಾಗೆ ಸಾರ್ಚಿ ಕೈ
ಯಿಕ್ಕಿಸಿ ಪಿಂಗಿಪಂ ಪಿಡಿದು ಪಿಂಗಿಸುವಂತಿರೆ ಜಂತ್ರದಾನೆಯಂ ೧೨

ಕಿಚ್ಚು ಕಿಡಿಯಾಗಿ ತಾಗುವ
ಮಚ್ಚರದನಿಮೇಷಯುಗಳದ ಕಡುಪುಂ
ಪೊಚ್ಚಱುಮರ್ಬಿಗೆ ತೊಟ್ಟನೆ
[8]ಪಚ್ಚೆ[8]ಕ್ಕುವನಡ್ಡಮಿಕ್ಕಿ ಕರಕಿಸಲಯಮಂ ೧೩

ಸರಸಿಜತಂತು ಕಿಂಶುಕದ ಕುಟ್ಮಲವೇಱದ ಕೆಯ್ಯೊಳಂಕುಶಂ
ಪೊರೆಜೆಗಳಾಗೆ ನೀಡಿ ಬಿದುವಂ ಸುರದಾರಕರಾನೆಯಾದೊಡ
[9]ಗ್ಗ[9]ರಿಣೆ ಮೃಣಾ[10]ಳ[10]ವಾರಣಿ ಲತಾವಳಿ [11]ಕು[11]ಟ್ಟುವ ನಿಂತಿದಾಪೊರ್ ಮೇಣ್
ಕರುಣವೊ ದಂತಿಸಾಹಸದೊಳಾನಱಯೆಂ ಪೊಗಟಲ್ ಕುಮಾರನಾ ೧೪

ತೆಗೆಯದೆ ಕಾಯ್ದು ಚಮ್ಮಟಿಗೆ[12]ಯಂ[12] ದನಿ[13]ದನಿಕ್ಕೈಕಡು[13]ಪಾಗೆ ರಾಘೆಯಂ
ಬಿಗಿಯದೆ [14]ನಟ್ಟು[14]ಬೀಸಿದೊಡೆ ಪಟ್ಟು ಪೊರಳ್ದಡಿ ನಟ್ಟಿವಾಜಿ ಮೈ
ದೆಗೆದೊಡೆ ತಿಟ್ಟವಿಟ್ಟವೊಲೊಡಂಬಡೆ ತೋಱಸಿ ಮೆಚ್ಚಿ ದಾರಕರ್
ಬಗೆ ಹೆಯಮಾದವೊಲ್ ಬಱಕೆ ಮೆಚ್ಚಿಸುವರ್ ಲುಳಿಯೊಳ್ ಕುಮಾರನಂ ೧೫

---

1 ಮಾರ್ಜ (ಎ) 2 ನಿರ್ಜರೀಸಜ್ಜಿತ (ಎ) 3 ಜ (ಎ) 4 ನೊ (ಅಇಉ) 5 ಯೊಳ್ಪಂ (ಅಇಉ) 6 ದಿಂದೆ ಸೊಬಗಂಸೊ (ಅಇಉ) 7 ಕ್ಕ (ಅಇಉ) 8 ಪರ್ಚ (ಅಇಉ) 9 ಬ್ಬ (ಅಇಉ) 10 ಣ (ಅಇಉ) 11 ಕ (ಅಇಉ) 12 ಯಿಂ (ಅಇಉ) 13 ಯಿಕ್ಕುವ (ಅಇಉ) 14 ಬೀಸಿ (ಅಇಉ).

ವ॥ ಅದಲ್ಲದೆಯುಂ

ಪರವೌದಾರಿಕದೇಹಜಾತಿಶಯವಿರ್ಪ್ಪೈದುಂತು ನಿಸ್ವೇದಸೀ
ಕರ[1]ವಾ[1]ಕ್ಷೀರಸಿತಾಶ್ರುಜಂ ಕುಲಿಶನಾರಾಚಾದಿನಿರ್ಭೇದ್ಯನು
ದ್ಧುರವೀರ್ಯಂ ವಿಮಲಂ ಸುಲಕ್ಷಣಯುತಂ ಸೌಗಂಧಿಕಂ ಮೋಹನಾ
ಕರ[2]ವಾದರ್ಪಿತ[2] ಶತ್ರುಲೋಕಹಿತಭಾಷಂ ದೇವ[3]ಚಕ್ರೇಶನೊಳ್[3] ೧೬

ವ॥ [4]ಅದಲ್ಲದೆಯುಂ[4]

ಇದು ಸಂದೇಹಮೆ ದೇಹದೊಳ್ ಚರಮದೇಹಂಗುಂಟು ಶೀತಕ್ಕೆ ಕೋ
ಡದ ವಾತಕ್ಕಲುಗಾಡದಾತಪದ ಕೋಳಿಂ ಕಾಯದುಗ್ರಾಗ್ನಿ ಪ
ತ್ತಿದೊಡಂ ಬೇಯದ ಕಂಟಕಾಮಯಸಮೂಹಂ ತೋಱದೊಂಬತ್ತು ಭೇ
ದದ ನಂ[5]ಜೇ[5]ಱದ ಮುಪ್ಪುಬಾರದ ಯುವತ್ವಂ ತೀರದುತ್ಕರ್ಷಣಂ ೧೭

ವಿದಲಿತಪುಷ್ಪಸೌರಭದಿನಚ್ಯುತಕಲ್ಪದ ಶುಕ್ಲಲೇಶ್ಯೆ ಲೆ
ಪ್ಪದ ಕರುವಜ್ರದಂಡದ ಬಲಂ ಪೊಳೆವುದ್ಗತ ತಿಗ್ಮರೋಚಿ ಬ
ಣ್ಣದ ರುಚಿ ಮಿಂಚುಮಿಂಚು ಪೆಱಿಕಣ್ದೆಱವಾಗಿರೆ ಮೂವತಬ್ದಲ
ಕ್ಷದ ಪರಮಾಯುವೊ[6]ಯ್ದ[6] ರಸಚಿತ್ರದವೊಲ್ ಮೆಱೆವಂ ಕುಮಾರಕಂ ೧೮

[7]ಪ[7]ಡೆದರೊ ಪುಷ್ಯರಾಗ[8]ದಳ[8]ದಿಂ ಕಡೆಯಾಣೆಯ ಪೊನ್ನಪುಟ್ಟೆಯಿಂ
ಕಡೆದರೊ ಬಾಲಭಾನುಕರದಿಂ ಕರುವಿಟ್ಟರೊ ಬಳ್ಳಿಮಿಂಚಿನೊ
ಳ್ಗ್ಗಡಿಯನೆ ಕೊಂಡು ಕಂಡರಣೆಗೆಯ್ದರೊ ಪೇೞಿನೆ ಕ[9]ಣ್ಗೆಸಂದು ಕ್ಕೈ[9]
ಯ್ಪಿಡಿವುದು ಚಿತ್ರಮಂ ನುತಶತಾರ್ಧಧನುಸ್ತನು ಶಾಂತಿಕಾಂತನಾ ೧೯

ತರುಣೀಲೋಕಾವಲೋಕಭ್ರಮಿತಮಧುಕರಂ ಬಂಧುಗೋತ್ರಾನುರಾಗಾ
ಕರಲೀಲಾಪಲ್ಲವಂ ಮಾತರಪಿತರಹೃದಾನಂದಮಂದಸ್ಮಿತಪ್ರ
ಸ್ಫುರಿತಪ್ರತ್ಯುದ್ಗಮಂ ಜನ್ಮನದ ದೆಸೆಗದೇಂ ಬಂದನೋ ಪಾರಿಜಾತಾಂ
ಕುರಮಿಂದ್ರೋದ್ಯಾನದೊಳ್ ಬೆಳ್ವ[10]ನೆ[10] ಬಳೆದು ಕೆಯ್ವಂದವೊಲ್ ತೀರ್ಥನಾಥಂ ೨೦

---

1 ಸಾ (ಅಇಉ) 2 ನಾದಂಪಿತ್ಯ (ಅಇಉ) 3 ಚಂದ್ರಾಧಿಪಂ (ಅಇಉ)
4 ಅಂತುಮಲ್ಲದೆ (ಎ) 5 ಜೂ (ಅಇಉ) 6 ಲ್ದ (ಅಇಉ) 7 ಕ (ಎ)
8 ಚಯ (ಇ) 9 ಣ್ಣೊಳುಳ್ಕಿ (ಅಇಉ) 10 ಮೆ (ಅಇಉ)

ನನೆಯಂ ಬಗ್ಗಳಿಗೋಲ್ ಮಲ್ಲಿದೆಗಳಂ ಕಣ್ಬೇಟದೊಳ್ ಬೆಂದು ಪೂ
ವಿನ ಪಾಸಿಂ ತಳಿರ್ವಾಸುಗಳ್ಗೆ ತಳಿರ್ವಾಸಿಂದೆತ್ತಿ ನೀರ್ವಾಸುಗ
ಳ್ಗನಿತುಂ ಪಾಸುಗಳಿಂದೆ ತಣ್ಬಸಲೆಗಾಳೀಜಾಲಮೊಯ್ದಿಕ್ಕೆ ಕಾ
ಮಿನಿಯರ್ ಕೂಡೆ ಪೊರಳ್ವರೀಕ್ಷಿಸಲೊಡಂ ಸಾಹಿತ್ಯಸರ್ವಜ್ಞನಂ ೨೧

ವನಿತಾವಶ್ಯಾಂಜನಂ ಹೃತ್ಕುಮುದನಯನನೀರೇಜನೀಮೋಹನಂ ಕೋ
ರನ ರೂಪೀ ರೂಪೆ ಸಾಲ್ಗುಂ ಜಗಮನೆಱಗಿಸಲ್ ವ್ಯರ್ಥಮಿಾಕ್ಕೈದುವೆಂದಾ
ತನಗಿನ್ನೆಂತೆಂದೊ ಮೇಣಾನಱಿಯೆನಭವನಾಕಾರಮಂ ಕಾಣ್ಬುದುಂ ಕ
ರ್ಬಿನ ಬಿಲ್ಲಂ ಪೂವಿನಂಬಂ ರತಿಯ ವದನಮಂ ನೋಡಿ ಸು[1]ಯ್ವಂ[1] ಮನೋಜಂ ೨೨

ವ|| ಅಂತು ನನೆಗಣೆಗಳ ಕೂರ್ಪುಮಂ ಕರ್ಬಿನ ಬಿಲ್ಲ ಪೊಡರ್ಪುಮಂ ಮಲಯ ಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲಮುಮಂ ಮಕರಕೇತನ ಪೆಂಪುನಂ ರತಿಯ ಸೋಂಕಿನ ಸೊಂಪುಮಂ ದರ್ಪಕನ ದರ್ಪಂಬೆರಸೆಟಿಕುಳಿಕೊಂಡು ಗಂಡೇಱದ ಗಂಡಗಾಡಿ ರೂಡಿವಡೆಯೆ ತೀವಿದ ತಿಂಗಳ ಬೆಳಗಿನೊಳಗೆ ತೇಂಕುವ ರಾಕಾ[2]ಶಶಾಂಕ[2]ನಂತೆ ಶಾಂತನುಂ ನಿರ್ವಿಕಾರನುಂ ನಿರೀಹಿತನುಂ ನಿರ್ಮಲನುಮಾಗಿ ಲೋಕಾವಲೋಕನಂಗಳ ಪುಣ್ಯಪುಂಜವೆನಿಸಿ ರಂಜಿಸುವ ಕುಮಾರನಾಕಾರಮಂ ನೋಡಿ

ಬಳೆದಂ ಜವ್ವನಮಾಯ್ತು ಪೋಯ್ತೆಳವೆಯೊಳ್ ಸಪ್ತಾರ್ಥಲಕ್ಷಾಬ್ದಮಂ
ಗುಳಿಸಂಗಂ ಕುಲಕನ್ಯಕಾಜನದೊಳಾಗಲ್ವೇಟ್ಕುಮುಂತಿಲ್ಲ ಮ
ತ್ಕುಳ[3]ವಿ[3]ಸ್ತಾರಮಿದರ್ಕೊಡಂಬಡಿಪೊಡೀತಂ ವೀತರಾಗಂ ವಿನಿ
ಶ್ಚಳನೆಂಬಂತನಿತಾಯ್ತು ಸಿಂಹನರನಾಥಂಗಂ ಜಯಶ್ಯಾಮೆಗಂ ೨೩

ವ|| ಅಂತಲ್ಲದೊಡಂ

ಜಿನನಂ ಸೋಲಿಪ ಪೆಂಡಿರಾರ್ ಪರಮನಂ ತೋಳ್ಸತ್ತಿನೊಳ್ ಕಾವ ಕಾ
ಮಿನಿಯಾರ್ ದೇವರ ದೇವನಂಕತಲದೊಳ್ ಮಾದೇವಿಯಾಗೊಪ್ಪುವಂ
ಗನೆಯಾರ್ ಕೇ[4]ಳ್ದ[4]ಡೆಯಿಲ್ಲ ಕಂಡ ಕುಱುಪಿಲ್ಲಂತಪ್ಪ ಪೆಣ್ಣಂ ಕುಮಾ
ರನೊಡಂಬಟ್ಟೊಡಮೆಂದ ಭೂಪತಿಗದೋರ್ವಂ ಸೈನಿಕಾಗ್ರೇಸರಂ ೨೪

ವ|| ಸಿಂಹಾಸನತುಳಾತುಳಿತಮಾದ ಭದ್ರಾಸನದೊಳಿರ್ದ ಭದ್ರಬಳನೆಂಬಂ ಸಂಘಟಿತಕರಪಲ್ಲವನಾಗಳಿಂತೆಂದಂ

1 ಯ್ದುಂ (ಎ) 2 ಸುಧಾಕರ (ಎ) 3 ನಿ (ಅಇಉ)
4 ಳ್ವಿ (ಎ)

ದೇವನ ಜಾತೋತ್ಸವದೊಳ್
ತಾವೆಲ್ಲಂ ಬಂದರಂದು ಕಿಱುಗೂಸು ಭವ
ದ್ದೇವರನ ಕೀರ್ತಿಶೇಖರ
ದೇವನ ಸುತೆ ರತ್ನಮಾಲೆ ದೇವರುಮಱಿವಿರ್ ೨೫

ದೇವರ ಬೆಸದಿಂ ಶೇಖರ
ದೇವನ ದಿಗ್ವಿಜಯಕ್ಕೆ ಪಡಿಬಲಂ ನಡೆದಿದರ್ಾ
ನೀವಧುವಂ ಕಂಡೆಂ ದೇವರ
ದೇವನ ಮಾದೇವಿಯಾಗಲಾಕೆಯೆ ತಕ್ಕಳ್ ೨೬

ಕಣ್ಗಳ ಬೆಳ್ಪಿಂಗಳಕದ
ನುಣ್ಗರ್ಪಿಂಗಧರದಲದ ಕೆಂಪಿಂಗಾವಂ
ಕಾಣ್ಗೆಮ ಕಂಡ ಬಳಿಕ್ಕೀ
ಪೆಣ್ಗೀವು[1]ದೆ[1] ರತ್ನಮಾಲೆವೆಸರೆನ್ನದಿರಂ ೨೭

ಸುರನರಖಚರೋರಗಸುಂ
ದರಿಯರ್ಗಾತರುಣಿಯಂಗಲತಿಕೆಯ ಲಾವ
ಣ್ಯರಸ ಪ್ರವಾಹಲವಮುಂ
ದೊರೆಕೊಳ್ವೊಡೆ ನಿನ್ನ ಪಾದದಾಣೆಡಲ[2]ನ್ಮೆಂ[2] ೨೮

ತೀವಿದ ಯೌವನಭರಮುಂ
ಲಾವಣ್ಯರಸಂ ತುಱುಂಕೆ ನಯ[3]ಮ[3]ಳಿಬಳಿವೊಂ
ದಾವುದುವೆಳವೆಳ್ದಿಂಗಳ
ಭಾವಿಸಿದ ಸುಧಾಂಶುಕೇಳಿಯಂ ಮಱೆಯಿಸಿದಳ್ ೨೯

ಮಱೆದರೊ ಮೇಣಂಬಿಕೆಯರು
ಮಱೆದೆನ್ನಯ ಬಿನ್ನಪಕ್ಕೆ ಮನ್ನಿಸಿ ದಯೆಯಿಂ
ತೆಱಪಂ ಕೊಟ್ಟರೊ ಮೇಣೆಂ
ದಱೆಯೆಂ ತಾಮಱಿಯೆ ಚೆಲ್ವೆ ಕನ್ಯಾರತ್ನಂ ೩೦

ವ॥ ಎಂದು ಜಗಜ್ಜನನಿಯಮಿತನುಳ್ಳದನೆ ನುಡಿದೊನಾದೊಡಮಾಕನ್ನೆಗೀ ವರ್ಣನಮನಿಪ್ಪನ್ನ ವಾಸ್ತವಮಾಪದಾರ್ಥಮುಂ ತಾವಕೀನಮಿನ್ನುತ್ತರಮಿಲ್ಲುತ್ತರೋತ್ತರಂ ಮಾಟ್ಪುದೆನಲೊಡಂ ಭೂವಲ್ಲಭಂ ನಿರತಿಶಯಾನುರಾಗನಿರ್ಭರಚಿತ್ತಂ ನಿಶ್ಚಿತಾಲೋಚನನಾಗಿ

1 ದು (ಎ) 2 ಜ್ಞೆ (ಎ) 3 ಬ (ಎ)

ದೇವಿಂಗ ಎಂಶಮೆಂಬುದು
ಯೌವನರತ್ನಕ್ಕೆ ರೋಹಣಾಚಲಮಿದು ಸಂ
ಭಾವಿತಮೇನುಂಗುರದೊಳ್
ಕೇವಣಿಸಿದ ರತ್ನವಾಯ್ತು ಚಿಂತಾರತ್ನಂ ೩೧

ವ॥ ಎಂದು ಕೀರ್ತಿಶೇಖರಧರಾರಮಣಂಗೆ ಹಸ್ತಾರ್ಕನಂತೆ ಕನ್ಯಾಸಮನ್ವಿತಂ ಬರ್ಪಂತು ಬಟಿಯಟ್ಟೆ ಬಟಿಯಂ ನಿಜವಲ್ಲಭೆವೆರಸು ಕುಮಾರಶೇಖರನಿರ್ದ ಕಳಾವಿಲಾಸ ಭವನಕ್ಕೆ ಬಂದು ತನ್ನ ಬರವಿಂಗೆ ತದಾತ್ವಿಕ ಪ್ರಸಂಗಮಂ ಪರಿಹರಿಸಿರ್ದ ಪರಮೇಶ್ವರನ ನೃಗೇಶ್ವರಾಸನೋಪಾಂತಕಾಂತಕನಕಮಣಿಪೀಠಮನಲಂಕರಿಸಿ ತತ್ಸಮಯ ಸಮು ಚಿತಾನುನಯಭಾವಂ ಸಂಭಾವನೆವಡೆಯೆ ಮೆಲ್ಲನೆ ಪೊರ್ದಿ ಸಿಂಹಸೇನಮಹಾರಾಜಂ ದೇವರಾಜಾರಾಧ್ಯಂಗಿಂತೆಂದಂ

ಇದು ರತ್ನಾಕರಮೆಂಬ ಪೆಂಪುದಧಿಗಾ[1]ಯ್ತಾಕೌಸ್ತುಭಶ್ಲಾಘ್ಯ[1]ರ
ತ್ನದ ರೂಢೋದಯದಿಂದೇ ನಿನ್ನುದಯದಿಂದೆಮ್ಮೊಳ್ ಜಗದ್ಗೌರವಂ
ವಿದಿತಂ ತಾನೆನಿಸಿತ್ತು ಸಲ್ಗೆ ನುಡಿಯಲ್ವೇಟ್ಟಿತ್ತಿದಂ ವಿಶ್ವಲೋ
ಕದಯಾವಲ್ಲಭ ಕೇಳ್ದು ಮನ್ನಿಸು ಮದೀಯಸ್ವಾಂತಿಕೋದಂತಮಂ ೩೨

ವಿಮಲಾಧೀಶ್ವರ [2]ತೀರ್ಥ[2]ಸಂತತಿಲತಾವ್ಯುಚ್ಛೇದಮಾದಲ್ಲಿ ಧ
ರ್ಮಮುಖಂಗಂಡುದು ದೇವ ನಿನ್ನುದಯದಿಂದೀಲೋಕಮಿಕ್ಷ್ವಾಕುವಂ
ಶಮುಮಾದಿಪ್ರಭುವಿಂದಮಿಂದುವರೆಗಂ ಸಂದಿರ್ದುದೀ ಕ್ಷಾತ್ರಧ
ರ್ಮಮುಮಂ ಧರ್ಮಮುಮಂ ಸಮುದ್ಧರಿಸು ನೀಂ ತ್ರೈಲೋಕ್ಯ[3]ರಕ್ಷಾ[3]ಮಣೀ ೩೩

ಅದು ಕಾರಣದಿಂ ಮಾಡುವ
ಮದುವೆಗೊಡಂಬಡುವುದೆಮ್ಮ ನೋಡುವ ಕಣ್ಗಂ
ಪದೆವ ಮನಕ್ಕಂ ಮಾಟ್ಪುದು
ಮುದಮಂ ಧರೆಗುಭಯಭವಹಿತಂ ಪ್ರಭುಚರಿ[4]ತಾ[4] ೩೪

ವ॥ ಅಂತು ಬಿನ್ನವಿಸಲೊಡಮನಂತನಾಥನಂತರ್ಗತದೊಳಿಂತೆಂ[5]ದು ಭಾವಿಸಿದಂ[5]

ತವಿಸಲ್ವೇಟ್ಪುದು ಜನ್ಮ
ಕ್ಕವಶಿಷ್ಟಾನಿಷ್ಟ[6]ಯೋಗ[6]ಮುಂ " ಭವಿತವ್ಯಂ
ಭವತಿ " ಎನಿಪ್ಪುದು ದಿಟಮಿಂ
ದಿವರ ದುರಾಗ್ರಹಮನಿಂತು ಮನ್ನಿಸಿ ಕಳೆವೆಂ ೩೫

1 ಯ್ತತ್ಯುಜ್ಜ್ವಲಾನರ್ಘ್ಯ (ಅಇಉ) 2 ಧರ್ಮ (ಅ) 3 ಚೂಡಾ (ಅಇಉ)
4 ತಂ (ಎ) 5 ದಂ (ಅಇಉ) 6 ಭೋ (ಎ)

ವ|| ಎಂದು

ಪರಿಭಾವಿಸೆ ಬಟಿಯಂ ದೇ
ವರ ದೇವನ ಮೊಗದೊಳೊಗೆಯೆ ನಗೆಯ ಮುಗುಳ್ ಕ
ಣ್ಬರಿ ನೆಲಸಿ ಕೆಟ್ಟುದೇನೆಂ
ದರ[1]ಲೆ ಬೆರಲ್[1] ತಿಳಿದರಭವನನುಮತಿಯನವರ್ ೩೬

ವ|| ಅಂತು ತಿಳಿದ ಮಾತಾಪಿತರರ್ ಮನದ ಕೊನೆಯೊಳನುರಾಗಘಟ್ಟಿಕಿಯಿಂ ಗುಡಿಗಟ್ಟಿದ ಸಮನಂತ[2]ರಂ[2]

ಅಮರೇಂದ್ರಂಗಮರೀಮಹತ್ತರಿಯರಿಂ ಪೇೞ್ದಟ್ಟೆ ವೈವಾಹಿಕೋ
ದ್ಯಮಮಂ ತಾಂ ಮಯವಿಶ್ವಕರ್ಮಸಹಿತಂ ದೇವೇಂದ್ರನಿಂದ್ರಾಣಿ ದಿ
ವ್ಯಮನೋಹಾರಿಣಿಯರ್ ಸಮಂತು ಬರೆ ಬಂದೊಡ್ಡೈಸಿದರ್ ನೇತ್ರಹಾ
ರಿಮನಃ ಕೌತುಕಮಪ್ಪಿನಂ ಜಗತಿಜಾತೋದ್ವಾಹಮಂ ಗೇಹಮಂ ೩೭

ವ|| ಅದಲ್ಲದೆಯುಮಿತ್ತಲ್

ಅಂತಟ್ಟೆ ರಾಯಭಾರಿ ದಿ
ನಾಂತರಮೆಡಗೆಯ್ಯದೆಯ್ದೆ ಪದ್ಮಪುರಕ್ಕಾ
ಸಂ[3]ತೋಷ[3] ಪರಮಸೀಮೋ
ದಂತಮನೋಲಗದೊಳವನಿಪತಿಗಱಿಪಲೊಡಂ ೩೮

ಪರಮಶರೀರನಾಪರಮನಂಬುಜಮಂಬುವಿನಲ್ಲಿ ಪುಟ್ಟಿಯುಂ
ಪೊರೆಯದವೊಲ್ ಭವಾನುಭವಸೌಖ್ಯಪರಾಙ್ಮುಖನೆಂತು ಮಾಟ್ಕುಮೆಂ
ದರಸಿಯುಮಾಪ್ತರುಂ [4]ಕೆಳೆಯರುಂ[4] ಪರಿವಾರಮುಮುಳ್ಕಿ ಕೀರ್ತಿಶೇ
ಖರನಿದನೆಂದನೆಲ್ಲರ ಮನಸ್ತಮಮಂ ದಶನಾಂಶು ಗೆಲ್ವಿನಂ ೩೯

ಜಿನ[5]ರಾಜಂ[5] ತೊರೆದಿಂದೆ ದೀಕ್ಷೆಗೊಳಲೀಪ್ರೋ ಕೆಟ್ಟೆನಾಂ ತೀರ್ಥನಾ
ಥನ ಕೆಯ್ಯಂ ಪಿಡಿ[6]ವೊಂ[6]ದು ಪುಣ್ಯಮಿಱಿದತ್ತೇಕಕ್ಷಣಂ ದೇವದೇ
ವನ ಮಾದೇವಿಯೆನಿಪ್ಪ ಪೆಂಪು ಕಿಱಿದಲ್ತೇ ವೈಭವಕ್ಕೆನ್ನ ನಂ
ದನೆ ನೋಂತಳ್ ನಡೆನೋೞ್ಪ ಭಾಗ್ಯಮೆನಗಾಯ್ತೀ ಪಾವನೋದ್ವಾಹಮಂ ೪೦

---

1 ಲ್ಪಿರಳ್ (ಎ) 2 ರದೊಳ್ (ಎ) 3 ತಸದ ತೋಷದ (ಇಉ)
4 ಸಚಿವರುಂ (ಎ) 5 ನಾಥ (ಅಇಉ) 6 ದೊಂ (ಉ)

ಎಂದು[illegible]ಘು ತನ್ನಯ
ನಂದನೆಯೊಡವರೆ ಸಮಸ್ತರಾಜನ್ಯಕಮೆ
ಟ್ರಿಂದಂ ಸಿರಿಯೊಡವರ್ಪರ
ವಿಂದಾಕರನಂತಯೋಧ್ಯೆಗುತ್ಸವದಿಂದಂ ೪೧

ವ॥ ಅನ್ನೆಗಂ ಮುನ್ನ[1]ಮೆ[1] ಸಮೆದ ವಿವಾಹಗೇಹಂ ದೆಸೆದೆಸೆಯೊಳೆಸೆವ ಕಸೆಯ ವಟ್ಟೆಗಳ ವಂದನಮಾಲೆಗಳ ಕೆಂದಳಿರ ಗೊಂದ[2]ಣ[2]ಮೆಂಬ ಹಸ್ತವಿನ್ಯಾಸದೊಳಂ ಮುತ್ತಿನ ಲಂಬಣದ ನೀಲದ ಬುಂಬುಕದ[3]ಡಾಳದ[3] ಮೇಳಾಪಕಮೆಂಬ ಲೋಲಲೋಚನ ವಿಕಾಸ ವಿಲಾಸದೊಳಂ ಪವಳದ ಕಂಬದ ಮರಕತದ[4]ಳಿಗಳ[4] ಬ[5]ಳ್ವ[5]ಳಿಕೆಯೆಂಬ ನಳಿತೋಳ ಕೊಂ[6]ಕಿ[6]ನ ಬಿಂಕದೊಳಂ ಮಂಗಳಾಚಾರಗೀತಾತೋದ್ಯಲಯಮಾನಂಗಳಿಂ ತ್ರಿಭುವನಾ ಭರಣಶೋಭಾವನಕ್ಕಾನೆ ಸೋವತಮಾದೆನೆಂದು ನಲಿದು ನಾಟಕಮಾಡುವಂತಿರ್ದುದು ಮತ್ತಂ ಚತುರ್ಭದ್ರಮಾದ ಭದ್ರಶಾಲೆಗಳ ಕೋಣ[7]ವಿಕೋಣ[7]ದ ಮಾಣಿಕ್ಯದೊಡಲ ಸಂಚಂ ಮೆಱೆವ ಚುಂಚುಲೋವೆಯ ದಲವಿಲಸನದೊಳಂ ಕನ್ನಡಿಯ ಕಳಸದ ಬಣ್ಣವುರ ದಾರತಿಗಳೆಡೆಗೆಡೆ[8]ಗು[8]ಡಿಸಿದ ಪಂಚರತ್ನದ ಕದಿರ ಪೊದಱೆತೊಳ್ ಪುದುಂಗೊಳಿಸಿ ನೆಗೆವ ಜಾಗದ ಪಡಲಿಗೆಗಳ ಅಗೆಯ ತುಱುಗಲಿಂ ಕೇಸರದ ದೇಸೆಯನಪ್ಪುಕೆಯ್ವ ಮಧ್ಯವೇದೀ ಕರ್ಣಿಕಾಸಮುನ್ನತಿಯೊಳಂ ಸರ್ವತೋಭದ್ರಪ್ರಾಸಾ[9]ದಕಂದಳ[9]ಮಾನಂದರಸದಿಂದಮ ಲರ್ದಂತಿರ್ದುದು ಮತ್ತಂ ಸಾರಣೆಯ ಕಾ[10]ರುಣೆ[10]ಯ ರಂಗವಲಿಯ ಪೂವಲಿಯಕೇಸರ ದೊಳ್ ಸಂದಣಿಗೊಳ್ವಮರರಮಣಿಯರ ಕಾಲ್ದುಡುಗೆಯ ಮೇಲ್ದುಡುಗೆಯ ರವದ ಸಡ ಗರದೊಳಂ ನಮೇರುಮಂದಾರಪಾರಿಜಾತಪ್ರಸೂನಮಾಲಾ[11]ಜಾ[11]ಲದ ಕದಂಬಗಂಪಿನ ಪೊಂಪುಳಿಯೊಳಮನಂತನಾಥನ ಬೆಂಬಿಡಿದು ಬಂದಚ್ಯುತಕಲ್ಪದ ಪುಷ್ಪೋತ್ತರವಿಮಾನ ಮನವನವನಿತಲಕ್ಕವತರಿಸಿದಂತಿರ್ದುದು ಅಂತುಮಲ್ಲದೆಯುಂ

ಕಡುಚೆಲ್ವಿನ ಮಂಡಪಂ
ನಡೆನೋಡಲ್ ಬಂದು ಬಾಗಿಲೊಳ್ ಪುತ್ತಳಿಯಂ
ಪಡಿಯಱತಿಯರೆಂದರೆಬರ್
ನುಡಿಯಿಸೆ ನುಡಿಯದೊಡೆ ನಾಣ್ಚಿ ನೆಲನಂ ನೋಳ್ಪರ್ ೪೨

---

1 ನ್ನೆ (ಉ) 2 ಳ (ಉ) 3 (ಅ ಇ ಉ) ಗಳಲ್ಲಿ ಇಲ್ಲ 4 ಮದ್ದಳೆ (ಅ ಇ ಉ) 5 ಳಿವ (ಅ ಇ ಉ) 6 ಬಿ (ಅ ಇ ಉ) 7 ವಿತಾನ (ಅ ಇ ಉ) 8 ಗೆ (ಅ ಇ ಉ) 9 ದಂಗಳು (ಅ) ದಂಗಳ (ಇ ಉ) 10 ರುಳಿ (ಅ ಇ ಉ) 11 ಬಾ (ಎ)

ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ಕೆಱೆದಳ್ಕೆ [illegible]
ದೆಱಗುವುವಲ್ಲಿ [1]ಚಂಚುಗಳ ಲೋವೆಗಳೊಳ್[1] ಕಡೆ[2]ಯಿಕ್ಕಿ[2] ಸಾರಸ[illegible]
ಕಿಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆಯಂ ಪಿಕಂ
ನಿಱು[3]ದಳಿರ್ಗೆತ್ತು ಲಂಬಣದ ಮುತ್ತುಗಳಂ ಮಱಿಗೆತ್ತು ಚಾತಕಂ ೪೩

ಅದಱ ವಿತಾನಚೀನರಸಚಿತ್ರಕದಂಬಕಮಿಂದ್ರನೀಲರ
ತ್ನದ ನೆಲಗಟ್ಟನೊಳ್ ಮೆಱೆದು ಮಾರ್ಪೊಳೆಯುತ್ತಿರೆ ಕಂಡು ಕುಂತಲಂ
ಕೆದಱೆ ಕುಚಂ ಕದಕ್ಕದಿಸೆ ತೆಕ್ಕೆ ನಿತಂಬವಿದೊಂದು ದೂಳಿಚಿ
ತ್ರದ ಖಣಮೆಂದು ಮೆ[3]ಯ್ಯೆ[3]ರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್ ೪೪

ಕಳಶದ ಮೇಲೆ ಕನ್ನಡಿ ತಗುಳ್ಚಿ ಕೆಲಂಬಿಡಿದಿರ್ದ ವೇದಿಕಾ
ವಿಳಸಿತಮಂಡಪಂ ಸ್ಫಟಿಕಭಿತ್ತಿಯೊಳಚ್ಚೆಱದಂತೆ ತೋಱೆ ಪೊಂ
ಗಳಸದ ಬಾಯ್ಗೆ ತಂದು ತಳಿರಂ ಮಣಿವೇದಿಕೆಗೆತ್ತು ಭಿತ್ತಿಯಂ
ಬಳಸಿ ಮಹತ್ತರಾಮರಿಯರಂ ನಗಿಪರ್ ಕೆಲರಲ್ಲಿ ಮುಗ್ಧೆಯರ್ ೪೫

ಅನಿಮಿಷವಧು ಕತ್ತುರಿಗದ
ಡಿನ ಚಳಯಂಗೊಟ್ಟಲ್ಲಿ ಸೆಳ್ಳುಗುರ್ಗಳ ತೆ
ಳ್ಪನೆ ತಿಳಿದ ಕಾಂತಿ ಕುಸುಮಿಸು
ವಿನೆಗಂ ಕಡೆಗಣ್ಣ ಕಾಂತಿ ಧವಳಿಸುವಿನೆಗಂ ೪೬

ತಾರೆಗ[4]ಳಂ[4] ತತ್ತಿಗಳಂ
ಕಾರಿರುಳೊಳ್ ಕಱೆವ ಗಗನಲಕ್ಷ್ಮಿಯೊಲೊರ್ವಳ್
ಸೌರಾಂಗನೆ ಹರಿನೀಲದ
ತೇರೊಳ್ ಚಂದನದ ಬಿಂದುಮಾಲೆಯನಿಟ್ಟಳ್ ೪೭

ಮಂಗಳಕೇತುವಿರಾಜಿತ
ಮಂಗೀಕೃತನೀಲಭಾನು ತ[5]ಮ[5]ಸಂ ಪರಿಷ
ತ್ಸಂಗತಬುಧಗುರುಕವಿರಾ
ಜಂ ಗ[6]ದಿತ[6] ನವಗ್ರ[7]ಹಂ[7]ತಮುದ್ವಾಹಗೃಹಂ ೪೮

---

1 ಚುಂಚಲೋವೆಯೊಳ್ (ಎ) 2 ದಪಚ್ಚೆ (ಎ) 3 ಯ್ಯ (ಎ)
4 ಳ (ಎ) 5 ದು (ಎ) 6 ತಿ (ಅಇಉ) ಡಿತ (ಎ) 7 ಹಪರೀಹ (ಅಇಉ)

ವ॥ ಅಂತು ...ವಿಲಾಸಮಾದ ಪರಿಣಯನಭವನಭದ್ರಶಾಲಾಭ್ಯಂತರ್ವಲಯಜ ಮಂಗಳ...ತನಮಂಡಪಂಗಳೊಳಿಂದ್ರಾಣಿಯುಮಿಂದ್ರಮಹತ್ತರಿಯರುಮಿತ್ತ ರತ್ನ ...ಲೆಯುಮನತ್ತಲಮರೇಂದ್ರನುಮಖಿಲದಿಕ್ಪಾಲಕರುಮ[1]ಪ್ಸರೆ[1]ಯರುಮನಂತನಾಥನು ಮನಾಶ್ಚರ್ಯಮಳಂಕೆಗೊಳ್ವಿನಮಲಂಕರಿಸಿದಾಗಳ್

ಉರದೊಳ್ ಸಂತತಮಿರ್ಪ ಲಕ್ಷ್ಮಿಯ ಮುಖಸ್ಮೇರ ಪ್ರಭಾಪೂರದಂ
ತಿರೆ ಹಾರಂ ಭುಜದೊಳ್ ಜಯಾಂಗನೆಯ ಗಾಢಾ[2]ಶ್ಲಿಷ್ಟ[2]ವೈಚಿತ್ರ್ಯದಂ
ತಿರೆ ಕೇಯೂರಕಮಾಸ್ಯದೊಳ್ ನಲಿವ ವಾಣೀಕೇಕರಾಲೋಕದಂ
ತಿರೆ ಕರ್ಣಾಭರಣಂ ಬೆಡಂಗಮರ್ದುದಾಕಲ್ಪಂ ಜಗನ್ನಾಥನಾ ೪೯

ಪದೆದೊದವೆ ವೀರಸಿರಿಯ
ಪ್ಪಿದ ತೋಳ್ಸತ್ತೆನಿಪ ರನ್ನವಟ್ಟೆಯ ರುಕ್ಪಂ
ಜದ ಮಂಜರಿವೊಲ್ ರಂಜಿಸಿ
ದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ ೫೦

ವ॥ ಮತ್ತಮುತ್ತಂಸಾವತಂಸಗ್ರೈವೇಯ[3]ಕಾಲಂಬನಾಂಗದ[3]ಕೇಯೂರಹಾರ ಕಂಕಣಕಟಿಸೂತ್ರನೂತ್ನರತ್ನರಶ್ಮಿಸಂಕರಮೆಂಬ ಚಿತ್ರಭಿತ್ತಿ ಪರಭಾಗಂಬಡೆಯೆ ಕಡೆ ಯಿಕ್ಕಿದನೆನಿಪ್ಪ ದೇಸೆಯ ವಿಲಾಸಮಾಸರಮಾಗೆ

ಗಗನಾಭಾಗಕ್ಕೆ ಪೀತಾಂ[4]ಬುದಪರಿಪಿಹಿತಕ್ಕೈಂದ್ರ[4]ಬಾಣಾಸನಂ ಸು
ತ್ತುಗೆದಂತಾಯ್ತಾ ಜಗನ್ನಾಥನ ಪಿರಿಯುರದೊಳ್ ಸಂದಿಸಿರ್ದಿಂದಿರಾಕಾಂ
ತೆಗುಡಲ್ ಪೊಂಬಟ್ಟೆಯುಂ ಬಿರ್ಚಿದ ರುಚಿ ಮಿಗೆ ಜಂಭಾರಿ ತಂದಿಕ್ಕಿದಾಜಾ
ನುಗಮಿಂದ್ರಚ್ಛಂದಹಾರಂ ಮರಕತಮಯಮಾಲೀಢದಂಭೋಳಿಜಾಳಂ ೫೧

ವ॥ ಅನ್ನೆಗಮಿತ್ತಲ್

ನಯನಾನಂದದ [5]ಬಾಳ್ಕೊ[5]ದಲ್ ಹೃದಯರಾಗಕ್ಕಾಗರಂ ಕಾಮ[6]ಸೃ
ಷ್ಟಿ[6]ಯ ನವ್ಯಾಭಿ[7]ನಿಯೋ[7]ಗಮೆಂಬ [8]ಕು[8]ತಕಂ ಕೈಗೊಳ್ವಿನಂ ರತ್ನಮಾ -
ಲೆಯನಿಂದ್ರಾಣಿಯುಮಿಂದ್ರವಾರವನಿತಾಸಂದೋಹಮುಂ ಮಂಡನ
ಕ್ರಿಯೆಯಂ ಮಂಡನಲಕ್ಷ್ಮಿರಾಗಿಸುವವೊಲ್ ಕೆಯ್ಗೆಯ್ದು ಕೆಯ್ಗೆಯ್ಸಿದರ್ ೫೨

1 ಚ್ಚರಸಿ (ಅಇಉ) 2 ಶ್ಲೇಷ (ಎ) 3 ಕಾಂಸಲಂಬನ (ಎ)
4 ಬರವೆಸೆವಸಿತಾನೇಂದ್ರ (ಅಇಉ) 5 ಜಾಣ್ಕೊ (ಅಇಉ) 6 ತೃಪ್ತಿ (ಅಇಉ)
7 ನಯಾಂ (ಅಇಉ) 8 ಕೃ (ಅಇಉ)

ಮದನನ ಮಂತ್ರದೇವತೆಯೆ ಮುತ್ತಿನ ಪುತ್ತಳಿ ಚಂದ್ರಲೇಖಯ...
ಪದವಱಿದೊಪ್ಪವಿಟ್ಟುದೆನೆ ಪಾಂಗಮರ್ದಿಕ್ಕಿದ ಪುಂಜ[1]ಯೋಲ್[1] ಪೂ
ಸಿದ ಹರಿಚಂದನಂ ಮುಡಿದ ಮಲ್ಲಿಗೆ ಕಟ್ಟಿದ ಹಾರಮುಟ್ಟ ಕೌ
ಮುದಿಯ ಕಡಲ್ವೊಲಾದ ದುಗುಲಂ ಬಗೆಗೊಂಡುದು ತಲ್ಲತಾಂಗಿಯಾ ೫೩

ವ ॥ ಅಂತುನ್ಮದನಮದನಮೋಹನಸಾಯಕಂ ಕಂತುವಿನ [2]ಕೆಯ್ಗೊಯ್ದೆ[2] ಕೆಯ್ಗಯ್ದು ಮಂಗಳಾತೋದ್ಯವಾದ್ಯನಿರ್ಘೋಷಂ ಪುಣ್ಯಪಾಠಕರ ಮಾಂಗಳಿಕಪಠನ ಪಟುರವಂಬೆರಸು ದುಂದುಭಿಗಭೀರಧೀರಧ್ವಾನದೊಳ್ ಮುಟುಂಕಿ ತೇಂಕುವಿನಂ ಪ್ರಾಗ್ದಿ[3]ಶಾ[3] ಸಮಭ್ಯುದಿತಸಹಸ್ರಕರನುಂ ಪ್ರತೀಚೀದಿ[4]ಶಾ[4]ಸಮುದ್ಭೂತನೂತನ ಸುಧಾಂಶುಲೇಖಾ ಲಕ್ಷ್ಮಿಯುಂ ನಡೆತರ್ಪಂತೆ

ಪಾಸಿದ ದ[5]ಳಿಂ[5]ಬಮುಗುರ್ಗಳ
ಕೇಸಡಿಗಳ ಚರಣಭೂಷಣಂಗಳ ರುಚಿಯಿಂ
ಬಾಸಣಿಸಿ ಚಿತ್ರಪಟಮಂ
ಪಾಸಿದವೋಲಿರೆ ವಧೂವರರ್ ನಡೆತಂದರ್ ೫೪

ವ ॥ ಬಂದು ಸಮಭ್ಯರ್ಚಿತಾಷ್ಟಮಂಗಲಕಲಾಪಮುಮಾಲಂಬಿತಭೃಂಗಾರ ಕಲಶದರ್ಪಣಸ್ವಸ್ತಿಕವಿಸ್ತಾರಮುಂ ಚತುರ್ಭದ್ರಾಭಿಮುಖನೀಲಮಣಿ ಸೋಪಾನಪಙ್ಕ್ತಿ ಕಾಂತಮುಮಾದ ವೇದಿಕಾಮಧ್ಯದೊಳ್

ಪೊಂಬಟ್ಟೆಯ ಬೋರೆಯದೊಳ್
ತುಂಬಿದ ಬಿಡುಮುತ್ತಿನಕ್ಕಿಯಂ ಮೆಟ್ಟಿರ್ದಂ
ದೇಂ ಬಗೆವುಗಿಸಿದುದೋ ಹೇ
ಮಾಂಬುಜದ ಮರಾಳಮಿಥುನಮಂ ತನ್ಮಿಥುನಂ ೫೫

ವ ॥ ಅಂತು ನಿಲ್ವಲೊಡಂ ಸಕಲಜನದ ಕಳಕಳಮುಂ ನಿಲಿಸಿ ಶುಭಮುಹೂರ್ತ ಪ್ರಸ್ತಾವನೋನ್ಮುಖರಾಗಿರ್ದಾಗಳ್

ಕಿವಿವೇಟಮನಿಱಿಸುತ್ತಿರೆ
ನವವರನಂ ನೋಡುವಪ್ಪುವುತ್ಕಳಿಕೆಯಿನೇಂ
ಯುವತಿಯ ಕಣ್ಣುಂ ಮನಮುಂ
ಜವನಿಕೆಯಂ ಕನ್ನಮಿಕ್ಕಲಡಹಡಿಸಿದುದೋ ೫೬

---

1 ಪೊಳ್ಪ (ಅಇಉ) 2 (ಅಇಉ) ಗಳಲಿಲ್ಲ 3 ಶಾಸನ (ಅಇಉ)
4 ಶಾಸನ (ಅಇಉ) 5 ಣಿಂ (ಎ)

ವ॥ ಸ...ಂತರಂ

ಪರ...ರಾಧ್ಯ ಜಗತ್ರಯಾಧಿಪತಿಯ್ಯೆ ನೀಂ ನಿನ್ನದಲ್ಲನ್ಯಮಿಾ
ಧರೆಯೊಳ್ ನೋಡುವಡಾವುದಿತ್ತೆನೆನಲಾನಾರೆಂದು ನಿಂದಟ್ಟಿಜಿಂ
ತರುಣೀರತ್ನವನೊಪ್ಪುಗೊಟ್ಟು ಜಲಧಾರಾರೇಖೆಯಿಂ ಕೀರ್ತಿಶೇ
ಖರರಾಜಂ ಪಡೆದಂ ಜಿನೇಂದ್ರಪದಪಂಕೇಜಕ್ಕೆ ವಾರ್ನಾಳನುಂ ೫೭

ವ॥ ಅನಂತರಮನಂತನಾಥಂ ಕಲ್ಪಲತೆ[1]ಯೊಳ್ಪು[1]ವಡೆದ ಪಾರಿಜಾತಂ ಸೈಕತದೊಳೆಸೆವಂತೆ ದುಗುಲದಿಂ ಪಾಸಿದ ಪಟ್ಟವಣೆಯ ಪಸೆಯನಲಂಕರಿಸೆ ಸಿಂಹಸೇನ ಮಹಾರಾಜಂ ಬೆರಸು ಮುಂದೆ ನಿಂದು

ಇನನುದಯಮುಪ್ಪಿನಂ ಚಂ
ದ್ರನ ಕೆಲನಂ ನಭದ ಬೆಳಕಮಲ್ಲಲ್ತು ಧರಾ
ವನಮಿನ್ನಿನ್ನುದಯಾಮೃತ
ದೆ ನಿಮಿರ್ಚು ಜಗಜ್ಜನಾಭಿಲಾಷಾಲತೆಯಂ ೫೮

ವ॥ ಎಂದು ಪರಮೇಶ್ವರಂಗಿದಂ ನುಡಿಯುತ್ತುಮಿಟ್ಟ ಮುಕುಟದ ಕಟ್ಟಿದ ಬಾಸಿಗದ ದೆಸೆಗಧಿಷ್ಠಾನಮುಂ ಕಟ್ಟುವಂತೆ ಭಾಳಪಟ್ಟದೊಳ್ ಸಾಮ್ರಾಜ್ಯಪಟ್ಟಮುಂ ನಿಟ್ಟೆಗೊಳಿಸಿದಿಂ ಬಱಿಕ್ಕೆ

ಬಲಗೊಂಡಾನತನಪ್ಪವೊಲ್ ಹುತವಹಂ ದೇವಾಧಿದೇವಂಗೆ ತ
ನ್ನೊಲವಿಂ ಜ್ವಾಲೆಯನಾನುಲೋಮವಿಧಿಯಿಂ ಪ್ರತ್ಯಾನತಂ ಮಾಟ್ಪಿನಂ
ಬಲದಿಂದಂ ಬರೆ ವಾಮೆ ವಾಮುದೆಡೆಗೇಂ ತ್ರೇತಾನಳವ್ಯಾಜದಿಂ
ಬಲಗೊಂಡಂ ಪರಮಾರ್ಥವೇದವಿದುರಂ ರತ್ನತ್ರ[2]ಯಜ್ಯೋತಿಯಂ[2] ೫೯

ವ॥ ಆ ಸಮಯದೊಳ್

ಇನಿಯನನೆಯ್ದೆ ಸಮ್ಮುಖದೊಳೀಕ್ಷಿಸಲಣ್ಮದೆ ಮುಗ್ಧೆ ಪಾರ್ಶ್ವದಿಯಾ
ಯಿನಿ ತೆಱಪಾಗೆ ನೋಟ್ಪ ನಯನೇಂದ್ರಿಯದೊಳ್ ಸಕಲೇಂದ್ರಿಯಂಗಳಂ
ಕೊನೆವೆರಲಂ ತಡಂಗಲಿಸಿದಂಗುಲಿಯೊಳ್ ಸಕಲಾಂಗಮುಂ ಸಲಿ
ಪ್ಪನಿತುವರಂ ಕಡಂಗಿ ಕರೆಗಣ್ಮಿದಳುಣ್ಮಿದ ಘರ್ಮವಾರಿಯಿಂ ೬೦

ವ॥ ಅಂತಮಲ್ಲದೆಯುಂ

---

1 ಯ ತಳ್ಪು (ಎ)   2 ಯಾಲಂಕೃತಂ (ಅಇಉ)

ಪರಮಾರಾಧ್ಯನ ಸಂಭವಾಭಿಷವದೊಳ್ ನಾವಿರ್ವರುಂ ಭೂರಿಭೂ
ಧರವುಂ ಮುಂ ಬಲಗೊಂಡ ಪಾಂಗನಿಟಿಸಲ್ ಸಾಲ್ದಪ್ಪುದಿಂತೀವಧೂ
ವರರಿಂದೀ ಪುಖವಹ್ನಿಯಂ ಬಲದೆಗೊಳ್ವೈಶ್ವರ್ಯಮೆಂದೊರ್ವರೊ
ರ್ವರ ವಕ್ತ್ರಾಬ್ಜಮನಾ ಪುಲೋಮಜೆಯುಮಾದೇವೇಂದ್ರನುಂ ನೋಡಿದರ್ ೬೧

ಪರಿಷದ್ರಾಜಕದಂಬಮಂಬರವಿಭೂಷಾಶ್ಚರ್ಯಸೌಂದರ್ಯದಿಂ
ಪಿರಿದುಂ ಭೇದಿಸಲಾರ್ತುದಿಲ್ಲಱಿದುದಾಗಳ್ ವೇದಿಕಾಭ್ಯರ್ಣದೊಳ್
ಸುರಕಾಂತಾವಲಿಗೀವ ಬಾಯಿನದೆ ಕೈವಾಗಿಂದವಿಂದ್ರಾಣಿಯಂ
ನರನಾರೀತತಿಗೀವ ಬಾಯಿನದೆ ಕೈವಾಗಿಂ ಜಯಶ್ಯಾಮೆಯಂ ೬೨

ಸವಿಲಾಸಂ ಮೆಱೆದತ್ತು ಬಾಜಿಸುವ ಮಾಂಗಲ್ಯಾನಕಂ ಮಾಣದೆ
ತ್ತುವ ನೀರಾಜನಮೋದುವ[1]ಕ್ಕರಿಗ[1]ವೃಂದಕ್ಕಂ ಮೊಗಂ ನೋಡದಿ
ಕ್ಕುವ ಚಾಗಂ ಕರೆದೀವ ಬಾಯಿನಮುಲಂಪಿಂ ಮಾಟ್ಪ ದಾನಂ ತೆ[2]ಮು[2]
ಳ್ಚುವ ದೇವೇಂದ್ರನರೇಂದ್ರಹೇಮಮಣಿಭೂಷಾಚ್ಛಾದಪಾದಾರ್ಚನಂ ೬೩

ಅಂತು ಪರಿಪೂರ್ಣವೈಭವ
ಸಂತಸದಿಂ ರತ್ನಮಾಲೆ ಪೇರುರದೊಳ್ ಚೆ
ಲ್ವಂ ತಳೆಯೆ ಸೋಲ್ತು ಪೊರ್ದಿದ
ನಂತೇಶ್ವರನಾಥನುಂ ಸ್ವಯಂವರನಾದಂ ೬೪

ಅರಸಂ ಮನ್ನಿಸೆ ರತ್ನಮಾಲೆ ಮಹಿಷೀಸಂಪತ್ಪ್ರಭಾಶಾಲೆ ರಾ
ಗರಸಾಂಭೋಧಿತರಂಗಮಾಲೆ ಹೃದಯಾಲೋಕದ್ವಯಿಲೀಲೆ ಪೇ
ರುರದೊಳ್ ಲಕ್ಷ್ಮಿಗೆ ತೋಳೊಳಗ್ಗದ ಜಯಶ್ರೀಗಾಸ್ಯದೊಳ್ ವಾಣಿಗು
ರ್ವರಿಯೊಳ್ ರಾಜ್ಯರಮಾನಿತಂಬಿನಿಗೆ ತಾಂ ಪೆತ್ತಳ್ ಸಪತ್ನೀತ್ವಮುಂ ೬೫

ವ॥ ಅಂತು ರಾಜವಲ್ಲಭಾಕರಿಣಿಗಂ ಮನೋವಲ್ಲಭಾಕರೇಣುಗಂ ಜೋಳಿಗಟ್ಟಿನಾಲಾನಸ್ತಂಭಮಾದ ಭುವನಮೂಲಸ್ತಂಭನಭೂರಿಭುಜಶಾಖೆಗಳಂ ಜನಾನುರಾಗದಿಂ ಪಲ್ಲವಿಸಿ ಕೀರ್ತಿಪ್ರಸರದಿಂ ಕುಸುಮಿಸಿ ಸನ್ಮಾನದಾನದಿಂ ಫಲಿತಮಾಗಿ ವಿಶ್ವಂಭರಾವಲಯಮುಂ ಶೀತಲಚ್ಛಾಯಾಚ್ಛನ್ನಮಾಗಿ ಮಾಡಲೊಡಂ

---

1 ಕ್ಷರಿಕ (ಅಇಉ) 2 ರ (ಅಇಉ)

ಪದವಟಿಯ... ...ಳ್ದಯನಿತುಂ ಲಯಮಾದುದಕೃಷ್ಟಪಚ್ಯಮಾ
ದುದ... ...ರ ರತ್ನಹೇಮಖನಿಯಾದುದಗಾವಳಿ ಕಲ್ಪವೃಕ್ಷಮಾ
ದುದು ತರುಷಂಡಮೋಷಧಿ ರಸಾಯನಮಾದುದೇಂ ನೃಪಾಲಮಾ
ತ್ರದ ನವರಾಜ್ಯಮೇ ಪರಮದ್ವೈವತರಾಜ್ಯಮದಕ್ಕಿದೊಪ್ಪದೇ ೬೬

ಚರರಿಂ ಹೇರಿಗರಿಂ ಸ್ವಕೀಯಪರಕೀಯಪ್ರಾಜ್ಯ[1]ಮಂ[1] ರಾಜ್ಯಮಂ
ಪರಿಕಿಪ್ಪಂತುಟಿ ತನ್ನದೇಶಜನಮಾಪ್ತಂ ಸ್ವಾಮಿಯೆಂದಱ್ಕಱಿಂ
ದರಿಭೂಪರ್ ಮದಮಂ ಬಿಸುಟ್ಟು ಪರಮಾರಾಧ್ಯಂ ಜಗದ್ಬಂಧುವೆಂ
ದಿರೆ ಭೂಕಾಂತೆಯನಂತರಂಗಬಹಿರಂಗಾ[2]ಸಕ್ತಿ[2]ಯಂ ಮಾಡಿದಂ ೬೭

ಅವಿನೀತರ್ಗುಱ[3] ಕಾಯ್ದು ನಿಗ್ರಹಮಲಂಪಿಂದಂ ವಿನೀತರ್ಗೆ ಮಾ
ಡುವ ತಾತ್ಪರ್ಯದನುಗ್ರಹಂ ನೃಪನೊ[3]ಳ್ಲಂತಾದೊಡಂ ಭೂತಳೋ
ತ್ಸವಮಾತಂಗತ[4]ಸೀಮ[4]ಮಾವ ನೆವದಿಂ ಕೂರ್ತಪ್ಪುದರ್ಕಂಗೆ ಪ
ದ್ಮವನಂ ಶೀತಕರಂಗೆ ಕೈರವವನಂ ಚೈತ್ರಂಗೆ ಲೀಲಾವನಂ ೬೮

ವ|| ಅಂತು ಸಕಲಜನಾನಂದಮಾದ ರಾಜ್ಯಲೀಲೆಯಿಂ ಸ್ವಾರಾಜ್ಯ ಪೂಜ್ಯಾರಾಧ್ಯನಿರೆ

ಪರಮಂ ಸಾಮ್ರಾಜ್ಯರಾಜ್ಯಪ್ರಮದೆಗೆ ಮೊಗಮಿತ್ತಿರ್ದನಾರ್ಹಂತ್ಯಲಕ್ಷ್ಮೀ
ಪರಮೈಶ್ವರ್ಯಕ್ಕೆ ಪೊಕ್ಕಿಂ ಬಟಿಕೆ ಬಗೆವರಾರೆನ್ನನೆಂದಾತ್ರಿಲೋಕೀ
ಗುರುಪಾದಾಂಭೋಜಸೇವಾಸಮಯಮಱಿದು ಬರ್ಪಂತೆ ಬಂದಂ ಮದೋದ್ಯ
ತ್ಪರಪುಷ್ಪಪ್ರಾತಿಹಾರ್ಯಪ್ರಕಟಿತಗಮನೋದ್ಯಾನಕಾಂತಂ ವಸಂತಂ ೬೯

ವ|| ಅಂತು ಬಂದ ಬಸಂತಸಮಯದೊಳ್ ಪಿರಿಯಸಿರಿಗೆ ಕರುವೆನಿಪ ಕರುಮಾಡಕ್ಕ ಪರಭಾಗಮಾದ ವಲ್ಲಭವನದ ನಟ್ಟನಡುವಣ ಕಾದಂಬಿನೀಮಂಡನಮೆಂಬ ದಿಗವಲೋಕನಪ್ರಾಸಾದಮಧ್ಯಭೂಮಿಕಾವೇದಿಕೆಯೊಳ್ [5]ನಗೆಯತನಗಳ್ ಸೌಸವದ ಕಬ್ಬಿಗರ ಕಲಾವತಿಯರ ನರ್ಮಸಚಿವರ ಪರಮಪ್ರಾಸಾದಿತರ ಸುರಭಿಸಮಯೋತ್ಕರ್ಷಚತುರವಚನರಚನಾಪ್ರಸನ್ನಮೆಸೆವಪರಿಮಿತಾಸ್ಥಾಯಿಕೆಯೊಳ್ ರತ್ನಮಾಲಾಮಹಾದೇವಿಯ ವಾಮೇತರಪಯೋಧರಸ್ಪರ್ಶಹರ್ಷಪುಲಕಿತಮಾದ ತನ್ನ ವಿಶಾಲವಕ್ಷಸ್ಥಳಮನಂಗರಾಗಾಮೃತದೆ ಬಳಿದು ನಳನಳಿಸುವ ಸುಖದ ಹರವರಿಯಪ್ಪಿನೆಗಮಾಪಟ್ಟಮಹಾದೇವಿಯ ಮೃಗಮದಚಿತ್ರಿತಮಕರಿಕಾಪತ್ರಕಪೋಲಪಟ್ಟಮೆಂಬಮೃಗಾಂಕಮಂಡಲಮಯೂಖಮಾಲೆಯೊಳ್ ತನ್ನ ನಯನಾಂಚಲಚಕೋರಪಾನೋನ್ಮಾದನಟನ ವಿನೋದಮಸದಳಮೆಸೆವಿನೆಗಮಾ

1 ರ (ಅಇಉ) 2 ರಕ್ತಿ (ಅಇಉ) ಶಕ್ತಿ (ಎ) 3 ಳ (ಅಇಉ) ಳಿ(ಎ)
4 ಶೀತ (ಅಇಉ) ಶೀಮ (ಎ) 5 ನೆಗೆಯತಗಳಸಬ್ಬ ? (ಎ)

ಶುದ್ಧಾಂತಮಾಲಾವಳೌಳಿಮಂಡನೆಯ ದಕ್ಷಿಣಬಾಹುಶಾಖಾವಲಂಬಗಂ ತನ್ನ ರೇಖಾಭಿರಾಮಕಂದರ ಕಾಂಡಪೂಗತರುನಿಗರಣನಾಗಲತಾಧಿರೋಹಣಂಬಡೆವಿನೆಗಂ ಸೆಮಾಗ್ರಮಹಿಷೀ ಭಾಳಲಲಾಮೆಯತರುಣಹರಿಣೀಭಂಗುರಾಪಾಂಗಸುಧಾಮರೀಚಿರೋಚಿಃಕಳಿಕೆಯಿಂ ತನ್ನ ದರಹಾಸಪೇಶಲಸಿತಕಾಂತೋಪಲಂ ಪಾರ್ದೈಸಿ ಪಸರಿಸಿ ನೀರೂಱುವಿನೆಗಮಾ ಚಿತ್ತಾಭಿರಾಮೆಯ ವಾಮಕರಾಂಗುಲಿಕೋರಕಾನ್ವಿತತಾಂಬೂಲದಳವೀಳಿಕಾಖಂಡಮೃಣಾಳಶಕಲಮಂ ತನ್ನ ದಂತಪಙ್ತಿಕಲಹಂಸಕಲಭವೇಟಕದಿನೆಳಸಿ ಕಬಳಂಗೊಳ್ವಿನೆಗಮಾ ಪ್ರಾಣವಲ್ಲಭೆಯಲಲಾಟಪಟ್ಟದೊಳ್ ಚಾಮರದ ಕೋಮಲಪವನ ಪರಿಯಟನದಿಂ ಪರಿಪಾಟಿದಪ್ಪಸುಳಿಗುರುಳೆಂಬ ತುಂಬಿಯ ಬಂಬಲಂ ತನ್ನ ಬೆಳ್ವಿಳಗನುಗುಳ್ವ ಸೆಳ್ಳುಗುರೆಂಬ ಪೊಂಗೇದಗೆಯ ಕುತ್ತುಂಗಱಗಳ್ ಪತ್ತೆಸಾರ್ಚಿ ಪಂತಿಗೊಳಿಸುವಿನೆಗಮಾ ಚರಾಚರಪರಮವಲ್ಲಭಂ ಕಣ್ಗಳಂಗಳಕ್ಕೆ ಬಿರ್ದುವಂದುದ್ಯಾನಲಕ್ಷ್ಮಿಯನಾದರಿಸುತ್ತುಮಿರ್ದನಾ ಸಮಯದೊಳ್

ಅಳವಡೆ ತೊಟ್ಟ ಪೂದುಡಿಗೆ ಕಟ್ಟಿದ ಬಲ್ಮುಗುಳ್ವಿಂಡೆಯಂ ಪದಂ
ಗೊಳಿಸುವ ನಾಯಿಕಾಪ್ರತತಿ ಬಂದುದು ವಾರವಿಲಾಸಿನೀಜನಂ
ಮಳಯಮರುನ್ಮದೋಚ್ಚಳಿತಮಂಗಳಕೇಸರವಾಸಚೂರ್ಣಮಂ
ಜುಳಲತೆಗೊಂದಳಂ ಮಣಿಯೆ ಪಾಡುವ ಚೌಪದಿಯಡ್ಡತಾಣದೊಳ್ ೨೦

ವ|| ಅಂತು ಬಂದು ಸಭಾಶಿರಸ್ಸರೋಜಾಂದೋಳನಮಂ ನೆಗೞ್ಚುವ ಹಿಂದೋಳರಾಗದಿಂ ವಸಂತಸಮಯದೊಳುಲ್ಲಸಿತಜಾತಿಯಾದ ಚತುಷ್ಪದಿಚ್ಛಂದದೊಳ್ ಪಾಡೆ ಚತುರಚತುರ್ಮುಖನ ಜಡುವ ವಾರಸುಂದರೀವೃಂದದೊಳಗೆ ಪರಿಮಳೆಯುಂ ಭ್ರಮರಿಕೆಯುಮೆಂಬ ಮೇಳದ ವಿಳಾಸಿನಿಯರ್ ಪಾದಪೀಠೋಪಕಂಠಕ್ಕೆವಂದು ತಮ್ಮ ವಿರಚಿಸಿದ ಕೈವಂದ ಮಾಕಂದದಂತಿಶುಕವಿನೂತ ಮುಕ್ತಕಂಗಳೊಳಗೆ

ಪದದೊಳ್ ಠಾಯೆಗಳೋರಣಂಬಡೆಯೆ ವಾಕ್ಯಾರ್ಥಕ್ಕೆ ಪಕ್ಕಾಗೆ ರಾ
ಗದ ಮಾಧುರ್ಯಮನುಕ್ರಿಯಾಂಗುಳಿವಿಲಾಸಂ ಭಾವಮಂ ತಾಳ್ದೆ ಕ
ಬ್ಬದ ನಿರ್ವಾಹದ ಮೇಲೆ ಬ್ಬೆಸಿಕೆ ಬೆಡಂಗಂ ಬೀಱೆ ನಿಂದೊರ್ವಳೋ
ದಿದಳಾಂದೋಳದೆ ಪಲ್ಲವಾಧರೆ ವಸಂತೋತ್ಪದ್ಯಮಂ ಗದ್ಯಮಂ ೨೧

ವ|| ಅದೆಂತೆನೆ

ನನೆದೋಱುತ್ತದಿರ್ಗಂತಿ ಮುಂತೆ ಪನೆಗಳ್ ತೋರ್ಪಂತೆ ತೆಂಗಾಳಿ ಕೆಂ
ಗೊನರೊಳ್ ದಟ್ಟಡಿಯಿಟ್ಟುಪೊಳ್ಕಗೆ ಪೊದಟ್ದಿತ್ತಪ್ಪದೊಳ್ ಕೋಕಿಲಂ
ಕೊನರಂ ಕರ್ಚಿ ತೊದಳ್ ನೆರಂಗೆಪೆದುದೆತ್ತಂ ನಂದನಶ್ರೀಯು ನಂ
ದನನಾನಂದನ[1]ನ[1]ನ್ಯಜಂಗಣುಗನಾಯ್ತಿಂತೀ ವಸಂತಾಗಮಂ ೨೨

---

1 ನೆ (ಅಜ್ಞಲು)

ಉಗುರೊತ್ತಿ ೱೋರ್ವಸೊರ್ಕುಂಗೊನರ ಸೊನೆಗೆಯೇವೈಸಿ ಬಾಯ್ದಾರೆಯಸ್ತ್ರಾ
ಽಬ.। ಮುಟ್ಟುತ್ತಿಂಟಿ ಬಾಯಂ ತೆಱಿದು ಪರಭೃತಂ ಕಾಯ್ದು ಕಿಱಿಱ್ಕೊಂಬಿನೊಳ್ಕೈಲ
ಮಿಗೆ[1]ಪೊ[1]ಕ್ಕುರ್ವೇಱಿ[3] ತುಪ್ಪುಳ್ ಮು[2]ಡೆ[2]ಗೆದಱಿ ಕುಳಿರ್ಪೋಪುಗಿಲ್ ಪೋಪುಗಿಲ್ ಪೋ
ಪೋಗಿಲೆಂದಿಮ್ಮಾವಿನೊಳ್ ತಣ್ಮಲೆದುದುಲಿದು ತನ್ನಿಚ್ಛೆಯಿಂದನ್ಯಪುಷ್ಟಂ ೭೩

ತಿಳಿಪಲ್ ವಾಸಂತಿಯಂ ಸಂದಿಸೆ ಪುಗಿಲೆನೆ ಪುಂಸ್ಕೋಕಿಲಂ ಧಾರ್ಷ್ಟ್ಯದಿಂ ಪಿಂ
ದೊಳಪೊಕ್ಕೊಟ್ಟೈಸಿ ಮಲ್ಲೀಮುಕುಳಕಲಿತಭೃಂಗಾವಲೀನೀಲಮುಕ್ತಾ
ಫಳಮಂ ತಂದಿತ್ತು ಪಾದಂಬಿಡಿದು ನೆಗೆವಿನಂ ಕಂಟಕಂ ಚೂತಿಕಾಕೋ
ಮಳೆಯಂ ವಿಶ್ಲಿಷ್ಟದೋಷಂ ಮುಱಿಯೆ ತಿಳಿಪಿದಂ ಪ್ರೇಮಕಾಂತಂ ವಸಂತಂ ೭೪

ಕಳಹಂಸೀರಾಜಗೇಹಂ ಮಧುಪಮದವತೀಪಾನಕೇಳೀಗೃಹಂ ಮಂ
ಗಳಲಕ್ಷ್ಮೀಮಂಡನಾಸ್ಥಾಯಿಕೆ ಮಲಯಮರುದ್ವಾಹಳೀ ಭೂಮಿ ಕೋಕೀ
ಕುಳಸದ್ಮಂ ಕಾಮುಕಾಳೋಕನದವದಹನಂ ಕಾಮಚಕ್ರೇಶಚಾತು
ರ್ಬಳಚಕ್ರಂ ಚೈತ್ರರಾಜಧ್ವಜಚಯಮಲರ್ದುದ್ದಂಡಮಾಯ್ತಬ್ಜಷಂಡಂ ೭೫

ಸ್ಮರಕಾಂತಾಪ್ರೇಯಸೀಸ್ಥಾನಕಘುಸೃಣಲತಾಮಂಟಪಂ ದರ್ಪಕಾಧೀ
ಶ್ವರದಿಗ್ಜೈತ್ರೋತ್ಸವೋತ್ತಂಚಿತಮಣಿಮಯದೂಷ್ಯಂ ಮೃಗೀಭೂತಕಾಮಾ
ತುರದಾವಜ್ವಾಳಿಕಾಮಂಜರಿ ಮಧುಮಧುಪಾನಪ್ರಮತ್ತಾಟವೀಪಿಂ
ಜರಿತಾಸ್ಯಾಡಂಬರಂ ಪೂತೆಸೆದುದಸದಳಂ ಪ್ರೋತ್ಪಲಾಶಂ ಪಲಾಶಂ ೭೬

ಇನಿಯರ ಕಂತುರಾಗರಸಮಂ ದಳವೇಱಿಸುವಂತೆ ಕಾಮದೇ
ವನ ಕರವಾಳ್ಗೆ ಕಾಮಿಹೃದಯಾರುಣವಾರಿಯನೆತ್ತುವಂತೆ ನಂ
ದನವನಲಕ್ಷ್ಮಿಯಂ ಘುಸೃಣದಿಂ ಪೊರೆವಂತೆ ಸುಧಾಂಶು ಸಂಜೆಗೆ
ತ್ತನುವಿಸುವಂತೆ ಕೆಂದಳಿರ ಪೊಂಪುಳಿ ಪಪ್ಪುಕಮಾಯ್ತಶೋಕೆಯೊಳ್ ೭೭

ಎಳಲತೆಯ ಲಾಸ್ಯದಲೆಯೊಳ
ಗಳಿನೀಗೀತಕ್ಕೆ ನಿಂದು ಬಾಜಿಪ ಮಂದಾ
ನಿಳನಟನ ಪೊನ್ನ ತಾಳಂ
ಗಳಿವೆನಿಸಿದುವಲರ್ದ ಕರ್ಣಿಕಾರಪ್ರಸರಂ ೭೮

ಸೊಡಗುರ್ಡಿಯುಗೆಯುಂ ಪಚ್ಚೆಯ
ಪಡಲಗೆಗಳೊಳಡಕಿಲಿಟ್ಟು ರತಿ ಪೊಯ್ದುವೊಲೇಂ
ಜಡಿದುದೊ ಸಂಪಗೆ ನನೆಯಿಂ
ಜಡಿದುದು ಮಧುಲಕ್ಷ್ಮಿ ತೊಟ್ಟ ಪೊಸಪೊಂದೊಡವಂ ೭೯

---

1 ಸೊ (ಎ) 2 ಡ (ಅಇಉ) 3 ಸ (ಅಇಉ)

ಅಳಸುವ ದನಿ ಬಳಸುವ ಮದೆ
ಕೊಳಿಸುವ ಕೋಡೆಱಿಕೆ ಮೆಱೆಯೆ ತಳಿರ್ಗೊಂಬುಗಳೊಳ್
ಗಿಳಿ ಮರಳ್ವರಗಿಳಿ ಪೆಣ್ಗಳಿ
ನೆಳಮಾವಿೞಿಸಿದುದು ರತಿಯ ಜಕ್ಕನ್ನೊದಱಿವಂ ೮೦

ವ॥ ಎಂದೋದಿ ಕೇಳಿಸುತ್ತಾಭ್ರಮರಿಕೆ ಪರಿಮಳಿಗೆ ತೆಱಪುಗುಡಲೊಡಂ ಆ ಕುಂದ ದಳಧವಳದಶನವಿಸರಿ

ಅಳಿ ಗಿಳಿ ಕೋಗಿಲೆ ಕರೆದೊಡೆ
ಎಳವೆಱೆಯಂಕುಶವದಗ್ರಪಲ್ಲವದೆಡೆಯೊಳ್
ಕೊಳಿಸಿ ಬಸಂತನ ಬರವಿಂ
ಗೆಳಮಾವಿನಗಜಮನಿೞಿದು ಸರಿದಂ ಶಿಶಿರಂ ೮೧

ಪೊದೆಗೆದಱಿರ್ದ ಪೂಗಣೆಯ ಕೆಂಗಱಿಯಂತುರಿಗಣ್ಣ ತೆಕ್ಕೆಯಂ
ಮದನಮಹೇಶ್ವರಂ ವಿರಹಿಸಂಹಿತೆಯೊಳ್ ತೆಱೆದಂತೆ ಕೂರ್ತು ಕೂ
ಡಿದ ಹೃದಯಪ್ರಿಯರ್ಗಭಯಹಸ್ತವನೆತ್ತಿಸಿದಂತೆ ಪೂತ ಚೂ
ತದ ಕಿಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು ಬಸಂತಮಾಸದೊಳ್ ೮೨

ಮುಗುಳ್ವಲರ್ಗೊಪ್ಪೆ ಮುಂ ನಿಮಗೆ ನೀಗದ ನೇಸಱಿಗೆಯ್ವೆ ನಮ್ಮ ನಾ
ಲಗೆಗಳನೆಲ್ಲಮಂ ಶಿಶಿರನಯ್ಯೊ ಬಿಸುಟ್ಟನೆ ನಿಮ್ಮ ನೀಂ ಪುಗಲ್
ಪುಗಲವಮೆಂದು ಮೂದಲಿಸಿ ಲೋಧ್ರಿಗೆ ಮೊಲ್ಲಿಗೆ ಸಿಂಧುವಾರಮ
ಲ್ಲಿಗೆ ಕಿಱುಗಣ್ಚಿ ಮೆಟ್ಟಿ ಜಡಿದೂಳ್ದುವು ಕೋಗಿಲೆ ತಲ್ಲತಾಗ್ರಮಂ ೮೩

ಮುಳಿದುೞಿದೋಪರಳ್ಕೈರ್ದೆ ಪುಗುಳ್ತುರಿವಂತೆ ಮುಗುಳ್ತು ಸಂದ ನಾ
ಣೊಳಗು ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡಿ ಪೊ
ಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ವಿರಿವಂತು ಕಂಪು ಕೈ
ಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೊಲ್ ೮೪

ಮಲಯಮರುಚ್ಚಮೂಪತಿಗಲರ್ಗಳ ಸೌರಭದಂಗಚಿತ್ತಮಂ
ಕಲಪಿಕನಾಯಕರ್ಗೆ ಪೊಸಮಾಂಗೊನರಂಗಡಿಸೂಱೆಯಂ ಶುಕಾ
ವಲಿಯ ಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ ಬಸಂತನ
ಗ್ಗಲಿಕೆಗೆ ಬಂದು ಸಂವರಣೆದೋಱಿ ಮನಂಬಡೆದಂ ಮನೋಜನಾ ೮೫

ಅಲರ್ಗಂ [illegible]ಯುವು ನಿನ್ನ ಕೋರಕದಿನೆನ್ನಂ ಚೆನ್ನಬಿಲ್ ನಿನ್ನ ಗೊಂ
[illegible]ಲ ಪೂವಿಂ ತಳೆದತ್ತು ತೋಮರಮನೆನ್ನೊಂದಾಜ್ಞೆ ನಿನ್ನಿಂದ ಸ
ತ್ಫಲಮಾಯ್ತೆಂದು ಮನೋಜರಾಜನ ಪಸಾಯಂಗೊಟ್ಟ ಕೆಂಬಟ್ಟೆಯಂ
ಚಲದಂತಾದುವು ನೀಳ್ದ ಕೆಂದ[1]ಳಿರ್ಗ[1]ಳಂದಂ ಬಂದ ಮಾಕಂದದೊಳ್ ೮೬

ಹರನುರಿಗಣ್ಗೆ ನೀಂ ಸೊನೆಯ ಸೋನೆಯನಾಗಿಸು ಚೂತಕಂಠದೊಳ್
ಗರಲದ ಕರ್ಪನೊತ್ತಿ ಕಳೆ ಚಂದ್ರನು ಪೂಸಿದ ಬೂದಿ ಪಾಱೆ ಮೈ
ಮುರೆವಡೆ ಬೀಸು[2] ಗಂಧವಹ ಕೆಂದಳಿರೊಂದಲಗಿಂ ಕಪರ್ದಿಯೊಳ್
ಬೆರಸು ಬಳಿಕ್ಕೆ ನೀನೆನುತೆ ನೋಡಿದನಂಗಭವಂ ವಸಂತನಂ ೮೭

ಎಳಮಿರ್ಾ ಪಾ[3]ಸು[3]ಗೆ ಸಾರಿ ಕುಟ್ಮಲಕುಲಂ ರಂಗತ್ತರಂಗೋತ್ಕರಂ
ಪಳಕಂ ತಾವೆನೆ ಕಾಮನುಂ ರತಿಯುಮಾಡುತ್ತಿರ್ದಪೊಲ್ ತೀರ ಶೈ
ಳನರೇಖಾವಳಿ ತಳ್ತು ಪೀನಕುಚದಪ್ಪಂ ನಾಭಿದಪ್ಪಂ ವಧೂ
ಪುಳಿನೋದ್ಯತ್ಕಟಿದಪ್ಪಮಾದುವು ಜಲಂ ಕಾಸಾರಷಂಡಂಗಳೊಳ್ ೮೮

ವನಜಲಕೇಳಿಗಿಂಬುಗುಡುವಂತೆ ಪಗಲ್ ತಿರಿದಾದುದೊಯ್ಯನೊ
ಯ್ಯನೆ ಕಿಱಿದಾದುದಂದಿನಿರುಳ್ಗಾಱಿಸುವಂತಿನನಿಂದಗಲ್ದ ಪ
ದ್ಮಿನಿಯ ನಿರೋಧಮಂ ಶಿಶಿರ[4]ನಂ[4] ಮುಳಿದಿಟ್ಟಪಸವ್ಯಗಂಧವಾ
ಹನಕರಚಕ್ರದಂತೆ ಬಡಗಲ್ ನಡೆದತ್ತು ಹಿಮಾಂಶುಮಂಡಲಂ ೮೯

ವ॥ ಅಂತು ಕಿವಿಯ ಸರಿಗೆ ಭಾಜನಭಾಜನೆಯ ಮಾಧುರ್ಯಭರದಿನವತಂಸ ಮೋಸರಮಾದಂತೆ ತಲೆದೂಗುವ ವಿಲಾಸಂ ದೇಸೆವಡೆಯೆ

ಸುಕುಮಾರೋಚಿತಮಾಯ್ತು ರೀತಿ ಮೆಱೆದತ್ತುತ್ಪ್ರೇಕ್ಷೆ ಚೆಲ್ವಾಯ್ತು ರೂ
ಪಕದೊಳ್ ವಕ್ರಿಮೆ ಜಾತಿಯಾಯ್ತು ಸುರಭಿವ್ಯಾವರ್ಣನಂ ಪೇಳ್ದ ಮು
ಕ್ತಕಮಿಂಬಾಯ್ತು ವಿದಗ್ಧಮಾಕವಿತೆಗೀರಾಗಂಗಳೊಳ್ಪೆಯ್ದೆ ಕೌ
ತುಕಮಾಯ್ತೆಂದು ಪಸಾಯಮಿತ್ತು ಪೊಗಟ್ದಂ ವಾಗ್ಭಾಮಿನೀಭೂಷಣಂ ೯೦

ವ॥ ಆ ಪ್ರಸಂಗದೊಳ್ ಪರಿಭೃತನೆಂಬ ಪರಿಹಾಸಕಂ ಸರಭಸದಿನೆಟ್ಟುನಿಂದೀ ಕುಂತಲಕುಟ್ಮಲೆಯರ್ ವಸಂತವಲ್ಲಭನುಪರೋಧದಿಂ ಮಲಯಾನಿಲನೊಡನೆ ತಯ್ತು ವಂದು ಕವಿತೆಯ ನೆವದಿಂ ಪ್ರರೋಚನೆಯುಂ ದೇವರ ಚಿತ್ತಕ್ಕೆ ಬಿತ್ತರಿಸಿದಪ್ಪರೀಕೆಯರಳ ಮಿಂಗಿದುವನ್ನೆಗಮಿತ್ತಲವಧರಿಸಿಮೆಂದು ತೋಱೆ

---

1 ಳಿಂ (ಅ ಎ) 2 ವಡೆಸುತ್ತ (ಅ ಇ ಉ) ವಿಡೆ ಬೀಸು (ಎ)
3 ವು (ಅ ಇ ಉ) 4 ನಿಂ (ಅ)

ತರುಣೀಪಾದಪ್ರಹಾರಕ್ಕಸುಗೆ ಕುರವಕಂ ವಾರನಾರೀಕುಚೋದ್ಯ
ತ್ಪರಿರಂಭಕ್ಕಂಗನಾದೃಕ್ಪದವಿಗೆ ತಿಲಕಂ ಕಾಮಿನೀದುಗ್ಧಗಂಡೂ
ಷರಸಾಸ್ವಾದಕ್ಕೆ ಚಾಂಪೇಯಕಮೆಳಸಿ ಬರಲ್ವೇೞ್ಕು ನಿಮ್ಮಂ ಪಿಕಾರಾ
ವರವಂ ಮಂದಾನಿಲಂ ಬಿನ್ನವಿಸಿ ಕರೆದಪಂ ಸೌರಭಾದರ್ಶಹಸ್ತಂ ೯೧

ವ॥ ಎಂದು ವಕ್ರೋಕ್ತಿಯಿಂ ಬಿನ್ನವಿಸಿ ವನವಿಹರಣವಿನೋದಪ್ರಸ್ತಾವಕ್ಕಭಿಮುಖಂ ಮಾಡಿದಾಗಳ್

ವಸುಧಾಮಂಡಳಮಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ಮುತ್ತಿನೆ
ಕ್ಕಸರಂ ಮಲ್ಲಿಗೆ ಚಂದನಂ ಮೆಱೆವ ಚೆಲ್ವಿಂ ಕಂಪುಸೊಂಪಾದ ಮೆ
ಯ್ವೆಸದಿಂ ಮನ್ಮಥಚಂದ್ರಚೈತ್ರರೆ ವನಕ್ರೀಡಾರ್ಥಮೇಟ್ವಂತಿರೆ
ೞ್ದು ಸಭಾಮಂಡಲದಿಂ ತ್ರಿವಿಷ್ಟಪಸಭಾಮಾಣಿಕ್ಯದೀಪಾಂಕುರಂ ೯೨

ವ॥ ಉದ್ಯಾನವಿನೋದಪ್ರಸ್ಥಾನಭೇರೀಶಂಖಕಾಹಳಾಧ್ವಾನ[1]ನಂ[1] ದಿಶಾಗಗನಮಂಡಪಕ್ಕೆ ಬರೆ ಲಕ್ಷ್ಮೀಮಂಡಪಕ್ಕೆ ಬಂದು ನಿರ್ಯೂಹಪರ್ಯಂಕದೊಳ್ ನಿಂದು

ಹಯಮಂ [2]ನಾಗರಕಾದಿಯಶ್ವತರ[2]ಮಂ ವಿದ್ಯಾವತೀವೃಂದಮಾ
ನೆಯನುರ್ವೀಶತನೂಜರಂದಣಮನಾ ವಾರಾಂಗನಾಶ್ರೇಣಿ ರಾ
ಣಿಯವಾಸಂ ಶಿಬಿಕೌಘಮಂ ಪಿಡಿಯಪಿಂಡಂ ಪೆಂಡವಾಸಂ ನೃಪಾ
ನ್ವಯಚೂಡಾಮಣಿ ಪಟ್ಟಗಂಧಗಜಮಂ ಮುನ್ನೇಱೆ ತಾಮೇಱಿದರ್ ೯೩

ಅರಸಿ ಪೆಱಗೇಱೆ ಮದವ
ತ್ಕರಿಧವಳನನೇಱಿ ಮೆಱೆದನವನಿಪಧವಳಂ
ಶರದಂಬುದಮಂ ರೋಹಿಣಿ
ವೆರಸೇಱಿದ ಚಂದ್ರನಂತೆ ಪೂರ್ವಾಸನದೊಳ್ ೯೪

ವ॥ ಅಂತೆ ತಿರಿಪಿ ರಾಜಾಂಗಣದೊಳ್ ಸಂದಿಸಿ ನಡೆವ ಪಡಿಯಱರ ಪಡೆವಳರಡಪವಳರಗ್ಗವಳರ ಕಬ್ಬಿಗರ ಸ[3]ಬ್ಬ[3]ವರ [4]ಷ[4]ಪ್ಪವರ ಪರಿಹಾಸಕರ ರಾಜರಾಜವಲ್ಲಭರಂದಣದ ಗೊಂದಣಂ ರಣಮಂಡಲದ ಬಾಗಿಲ್ವಾಡದೊಳ್ ತಿಂತಿಣಿಗೊಂಡು ಮುಂತೆ ಪೋಗಿಮಡುವಂತು ದಂತಿರಾಜನಂ ತೊಡರ್ಚಿ ಪಿಡಿದೊಯ್ಯನೊಯ್ಯನೆ ಪೋಗಿಸುಟ್ಟು

1 ದಿಂ (ಅಇ) 2 ನಾಗರಕಾದಿಯಶ್ವರಥ (ಅಇಉ) ರಾಜಕುಮಾರರಶ್ವತರ (ಎ) 3 ವ್ವ (ಅಇಉ) 4 ದ (ಎ)

ಬನಮಾಯ್ತುಂಗಡಿವೀಥಿ ಪೀಲಿದಳೆಯೊಡ್ಡಿಂ [1]ಪಂಕಜಾಸ್ಯಂ[1]ಗಳಿಂ
ವನಜಾತಾಕರಮಾಯ್ತು ವಾರವನಿತಾಪಾಂಗಾಂಶುವಿಂ ಸೌಧಸಾ
ರನಿಕಾಯಂ ಮಧುಮಾಸಮಾಯ್ತು ಪುರಮೆಲ್ಲಂ ಮಲ್ಲಿಕಾಮಾಲೆ ಭಾ
ರ ನಿಜಾಮೋದದಿನೆಂಬಿನಂ ತಳರ್ದನುರ್ವೀಮಂಡಲಾಖಂಡಳಂ ೯೫

ವ॥ ಅಂತು ತಳರ್ದು

ಸಮದೇಭವ್ರಜದಾನವರ್ಷಮಬಲಾಸಂದೋಹನೇತ್ರಾಬ್ಜ ಷಂ
ಡಮನೇಕಧ್ವಜಮೇಘಡಂಬರಚಯಂ ಶುದ್ಧಾಂತಕಾಂತಾಮುಖೇಂ
ದುಮಯೂಖಂ ಚಮರೀಜವೀಜನಬಲಾಕಂ ತಳ್ತು ಕಾರುಂ ಬಸಂ
ತಮುಮುದ್ಯಾನವನಕ್ಕೆ ಬರ್ಪ ತೆಱದಿಂ ಬಂದಂ ಜಗದ್ವಲ್ಲಭಂ ೯೬

ವ॥ ಅಂತು ಬಂದು ನಂದನವನೋಪಾಂತಂಬರಂ ನೀಡಿ [2]ಬಿಟ್ಟೆಕ್ಕಿ[2]ದ ಪಟ್ಟದಾನೆಯಂ ಹೋ ಎಂದಪ್ಪಳಿಸಿ ಕೊಲ್ಲಣಿಗೆಯೊ[3]ಳ್[3]ಲ್ಲನುಲಿದು [4]ಬಂದಣಿಗೆ[4]ಯೆಲ್ಲನನಲ್ಲಿಯೆ ನಿಲವೇೞ್ದು

[5]ತೊ[5]ಡೆಯಿಂದೊತ್ತಿ ಮದಾಂಧಗಂಧಗಜಮಂ ಪಿಂತಿರ್ದ ನಲ್ಲಳ್ಗೆ ಕೈ
ಗುಡುತುಂ ಮೆಲ್ಲನಿೞಿಪ್ಪಿ ಕೈಯಲಗನತ್ತಲ್ ನೀಡಿ ಕುಂಭಾಗ್ರಮಂ
ತೊಡೆಯುತ್ತುಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟೆ ಕೆ
ಯ್ಯೆಡೆಯಿಂ ಲಂಘಿಸಿದಂ ಕೆಲಕ್ಕೆ ಜವದಿಂ ಸಾಹಿತ್ಯರತ್ನಾಕರಂ ೯೭

## ಗದ್ಯ

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ ಮುನೀಂದ್ರ ಪ್ರಸನ್ನಾಂತಃಕರಣ ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ಅನಂತನಾಥ ಪುರಾಣದೊಳ್
ವಸಂತೋದಯವರ್ಣನಂ
ಷಷ್ಠಾಶ್ವಾಸಂ

---

1 ಪುಲ್ಲಿತೊಂಗಲ್ (ಎ) 2 ಗಿಡಿಬಿ (ಎ) 3 ಳೊ (ಎ)
4 ಕೊಲ್ಲಣಿಗೆ (ಅಇಉ) 5 ಎ (ಎ)

# ಸಪ್ತಮಾಶ್ವಾಸಂ

ಶ್ರೀರಮಣಿಯ ನೆಲೆಮೊಲೆಗಳೊ
ಳೋರಗೆಯೆನೆ ನೆಗೆದ ಗಜದ ಬಿದುತಟಮದಕ
ಸ್ತೂರಿ ಪೊರೆದೆಸೆವ ಕರಮನು
ದಾರಂ ತಿಮಿರ್ದಂ ವಿನೇಯಜನಮುಖತಿಲಕಂ ೧

ಕಳಿಕೆಗಳ ಮಿಡಿಯ ತನಿವ
ಣ್ಗಳ ರಸದಿಂ ಸೊರ್ಕಿ ಜಡಿದು ನುಡಿವೆರಸಿ ಮಹೀ
ತಳಪತಿಗವರೋಹಣಮಾಂ
ಗಳಿಕಮನೆಸಗಿದುವು ಪುರುಳಿ ಗಿಳಿ ಕೋಗಿಲೆಗಳ್ ೨

ಸರಸೀರುಹಂಗಳಿಂದಿೞಿವ ಮತ್ತಮರಾಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿೞಿವ ಸೋಗೆಯ ಗೊಂದಣದಂತೆ ಬಂದ ಮಾ
ಮರದೆಳಗೊಂಬಿನಿಂದಿೞಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದಮಂದಣದಿನೇನಿೞಿತಂದರೊ ವಾರನಾರಿಯರ್ ೩

ಪಿರಿಯಂದಣಂಗಳಿಂದಿೞಿ
ವರಸಿಯರ ಪದಾಬ್ಜಶೋಣರುಚಿ ದಂಡಿಗೆಯೊಳ್
ಪೊರೆದು ಕೊನರಿಸಿದುವೊಣಗಿದ
ಮರಂಗಳಂ ಮದನರಾಗರಸಪರಿಣತೆಯಿಂ ೪

ಪೊಂದುಡಿಗೆ ಬೆಡಂಗಡರ್ದೆಳೆ
ಯಿಂದಿರೆರಜವಡರ್ದು ಕನಕಕಮಳದಿನಿೞಿವೊ
ದಿಂದಿರೆಯೆನೆ ಮೆಱೆದಳ್ ಪಿರಿ
ಯಂದಣದಿಂದಿೞಿವ ರಾಯರಾಣಿಯದೊರ್ವಳ್ ೫

ವ ॥ [1]ತದನಂತರಂ[1]

ಅಗೆವೊಯ್ದ ಚಂದ್ರಮಂಡಲ
ದಗೆಗಳವೊಲ್ ಕಾರ ಮುಗಿಲ ಕಿಬ್ಬಿರಿಗಳವೊಲ್
ಸೊಗಯಿಸಿದುವು ಬೆಳ್ಗೊಡೆಗೊಂ
ಬುಗೊಂಬಿನೊಳ್ ಕಂಬಕಂಬದೊಳ್ ಪೆರ್ವಿಡಿಗಳ್ ೬

---

1 ‘ಎ’ ಯಲ್ಲಿಲ್ಲ

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಿಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮಚ್ಚರಂಗಳಂ
ಬಳಯಿಸೆ ಮುತ್ತುವಂತೆ ಬನಮಂ ನಡೆದರ್ಕಳನಾದೆಯರ್ ಸಮು
ಜ್ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್ ೭

ವ॥ ಅಂತು ಬರ್ಪಂ ರಾಣಿವಾಸದ ವಾರನಾರಿಯರ ನರ್ಮಸಚಿವರ ನಡುವೆ ಚಂದ್ರಮುಂದಾನಿಲರ ಗಡಣಂಬೆರಸು ಅನಂಗಜಂಗಮಕಲ್ಪಲತಾ ಪ್ರತಾನಪರೀತನಾದ ವಸಂತವಲ್ಲಭನಂತೆ ವನಮಂ ಪೊಕ್ಕು ಚಿತ್ರಪ್ರೇಯಸೀಹಸ್ತ ಪಲ್ಲವದೆ ಪರಿಷ್ವಂಗಭಂಗುರ ವಾಮಹಸ್ತಪ್ರಕೋಷ್ಠಕಾಂಡಂ ವನನಾಲನಿರ್ದಿಷ್ಟಲವಂಗಲುಂಗನಾರಂಗನಾತುಲುಂಗ ನಕ್ತತಮಾಲನಾಳಿಕೇರಜಂಬೀರಪೂಗಪುನ್ನಾಗಪ್ರತೋಳಿಕಾಮಾಳಿಕೆವಿಡಿದು ನಡೆತರ್ಪೆಡೆ ಯೊಳ್ ಪಾಸಿದ ಪಸೆಯ ಪಸರದಂತಸದಳಮೆಸೆವ ನುಣ್ಬೆಳಂತಿಗೆಮುಟಲ ತಣ್ಬ ಟಿಲೊಳ್ ಮದವಣಿಗತನದ ದೇಸೆಯಿಂ ವಿಲಾಸಂಬಡೆದ ಬಾಲಸಹಕಾರನಂ[1]ದನಂ[1] ವನಪಾಲಂ ನೃಪಾಲಪಾರಿಜಾತನನಿತ್ತುಲವಧರಿಸಿಮೆಂದು ತೋಱಿ

ಪೊಂಬಾಱಿ ಚಾಮರಂ ಚಂ
ದ್ರಂ ಬೆಳ್ಗೊಡೆ ಕೇಳಿಶಿಖರಿ ಸಿಂಹಾಸನಮಾ
ಯ್ತೆಂಬಿನೆಗಮಂಗಜಂ ಮಾ
ವೆಂಬ ಕುಮಾರಂಗೆ ಪಟ್ಟಮಂ ಕಟ್ಟಿಸಿದಂ ೮

ವ॥ ಎಂಬುದುವಿಸಾಸಹಕಾರಕುಮಾರಕನ ಸೌಭಾಗ್ಯಮಂ ಕೊಂಕಿ ನಿಮಿರ್ದ ಕನಲ್ಗುಡಿಗಳೆಂಬ ನಳಿತೋಳ್ಗಳನಪ್ಪಿ ನಿಂದ ಮಲ್ಲಿಕಾವಲ್ಲಭೆಯೊಲವೆ ಪೇಟ್ದಪ್ಪುದೆಂಬ ರಸಿಕರತ್ನಾಕರನ ವಚನರಚನೆ ವಿಚಕಿಲವಿಲಾಸಪ್ರತ್ಯುಜ್ಜೀವನಮಾಗೆ ವಿನೋದವಿಲಾಸ ಕನೆಂಬ ನರ್ಮಸಚಿವನಿಂತೆಂದಂ

ನವಸಹಕಾರನೊಳ್ ನೆರೆದ ಮಲ್ಲಿಗೆ ನಲ್ಲಳ ತಾರಹಾರದಂ
ತೆವೊಲಿರೆ ಮೊಲ್ಲೆ ಮೊಗ್ಗರಿಸೆ ಕಂಪನಲಂಪಿನೊಳೀಂಟಿ ದೂಂಟುವಾ
ಡುವ ಮಱಿದುಂಬಿಮಾಲೆ ತಳಿರೊಳ್ ತಡವಾಯ್ತೆರ್ದೆ ಝಂಕೃತಂ ತುಳುಂ
ಕುವ ನೆವದಿಂದೆ ಜೇವೊಡೆದು ನೋಡಿದನಂಗಜನಿಕ್ಷುಚಾಪಮಂ ೯

ವ॥ ಎಂಬುದುಂ ನಾಗರಕಂ ವಿನೋದವಿಲಾಸಂಗೆ ನೀನೆಂದಂತೆ ದರ್ಪಕನ ದರ್ಪಂ ಬೆಂ[2]ಗಮಿ[2]ತ್ರಲಭಿವ್ಯಂಜಕಮಾದಪ್ಪುದೆಂದು ಸೂಚೀಹಸ್ತದಿಂ ಸೂಚಿಸಿ ತೋಱಿ

1 (ಎ) ಯಲ್ಲಿಲ್ಲ 2 ಗೆಯಿ (ಅಇಉ)

ಮುಗುಳಂ ಪೇಱಿ ಬೞಲ್ವ ಗೊಂಚಲೆಡೆಯೊಳ್ ಪುಷ್ಪಾಸ್ತ್ರಪತ್ರಂಗಳಂ
ತೆಗೆದುತ್ಕೋರಕದೊಳ್ ಮರಲ್ವ ತಳಿರಂ ಕೈವಂದ ಮಾಕಂದ ಶಾ
ಖೆಗಳೀತೋರ್ಪುವೆ ಬೆನ್ನೊಳಾಳಿಸಿದ ತೂಣೀರಾಗ್ರದಿಂ ಬಾಣಮಂ
ತೆಗೆಯಲ್ ನೀಡಿದ ಶಂಬರದ್ವಿಷನ ಹಸ್ತಾಳಾಪವಿಸ್ತಾರಮಂ ೧೦

ವ॥ ಎಂದು ಮಂದಸ್ಮಿತಪ್ರಸಾದಮಂ ಜಗತ್ಪ್ರಸಾಧನನ ಭಂಗುರಾಪಾಂಗದಿಂ ಪಡೆದು ನಡೆಯೆ [1]ಮುಂದೊಂ[1]ದೆಡೆಯೊಳ್ ಕಟ್ಟಿಲೆಯಂ ತಲೆವಿಡಿದು ಕಾಳಮನಾಳಿಗೊಳ್ವ ತಮಾಳಲತೆಯ ಬಾಳ್ಜೊಂಪದ ಬಳಸಿನೊಳಗೆ ಕಂಕೆಲ್ಲಿಯ ಸೋಂಕಿನೊಳಂ ಚಂಪಕದಣ್ಪಿನೊಳಂ ಪೊಂಪುಳಿವಡೆದು ವನವಲ್ಲಭೆಯಧರಪಲ್ಲವಕ್ಕೆ ಕುಸುಮವಿಸರದಿಂ ಪಾಟಳರುಚಿಯಂ ಪಾಟಿಸಲ್ ನೆಱೆವ ಪಾಟಳಿಯಂ ಸಹಕಾರನೆಂಬ ನಾಗರಕಂ ನೋಡಿ

ಪರಭೃತಪಕ್ಷದಿಂ ರತಿಯ ಕಣ್ಮಲರಂ ಮಱೆಗೆಯ್ವನಂಗನೊ
ಲ್ದಿರೆಯೆ ವಸಂತದೂತಿ ಮಱಿದುಂಬಿಗಳಂ ಮಱೆಸನ್ನೆಗೆಯ್ವ ಪಾ
ದರಿಗಲರ್ಗಂಗಳಿಂದೆ ಮಕರಂದಮುದಶ್ರು ತುೞುಂಕೆ ಪಲ್ಲವಂ
ಮುರಿದುವು ತೋಳೊಳಿಂದು ಮಲಯಾನಿಳನಿ ರ್ದಪನೆಂದು ತೋರ್ಪವೋಲ್ ೧೧

ವ॥ ಎಂದು ನಿಂದು ತೋಱಲೊಡಂ ವಿದೂಷಕನರಸಿಂಗೆ ವಿಚಾರಮುಳ್ಳೊಡೀ ದರ್ಪಕನ ತಪ್ಪಿಂಗೆ ರತಿಗೆ ಶಾಸ್ತಿ ಬಾರದೆಂದು ನಗಿಸುತ್ತುಂ ನಡೆದು ಮುಂತೆ ಪನೆಗಂಡು ಕೊಂಡ ಚೂತಲತೆಯ ತಳಿರ್ಗುಡಿಗಳೊಳಂ ಮಾಧವೀಲತೆಯ ನನೆಗುಡಿಗಳೊಳಂ ಮಲ್ಲಿಕಾಲತೆಯ ಮುಗುಳ್ಗುಡಿಗಳೊಳಂ ಚಂಪಕಲತೆಯಲರ್ಗುಡಿಗಳೊಳಂ ಪಿಣಿಲಿಱಿದು ಪೆಣೆದು ಪರ್ವಿ ಪಸರಿಸಿದ ಪೊಂಬಾೞೆಯ ಕಂಬಂಗಳ ತಱುಂಬಿನೊಳ್ ಬಳ್ವಳ ಬೆಳೆದ ಮೃದ್ವೀಕಾಲತೆಯ ಕಾಯಮಾನಂ ಕಾಮನ ರತಿಯ ವಿವಾಹಕ್ಕೆ ಚೈತ್ರನೆಂಬ ಚಿತ್ರಕಂ ಬಣ್ಣಮಿಟ್ಟು ತಿಣ್ಣಂ ಸಮೆದ ಪಸುರ್ವಂದರಂದದಂತಿರೆ ಕಾಂತಮನೋಹರಮಾಗೆ ರಾಜಮನೋಹರಂ ರತ್ನಮಾಲಾಮನೋಹರಿವೆರಸು ಅಲ್ಲಿಗೆ ಬಂದು ಮಂಡಪಕ್ಕೆ ಮಂಡನಮಾದಪ್ಪವಳಿಕಿನ ಪಪ್ಪುಕ ಜಗಲಿಯೊಳ್ ವನವಿನೋದ ಪ್ರಸಂಗ ಚತುರಪ್ರಸಾ ಧನ ಪರಿಜನಪರೀತಂ ಸುಖಾಸೀನನಾಗಿರ್ಪಿನಂ ಇತ್ತ ಲತಾಂತಲತಾಪ್ರತಾನದ ಮೇಲೆ ಮಲಯಮಾರುತನಂಗಭವಜಂಗಮಲತಾವಿತಾನಮಂ ಕೈವೀಸಿದಂತೆ ತಳರ್ವ ತರಳಲೋಚನೆಯ ಪಾದಪಲ್ಲವದ ಕೆಂಪಿನಸೊಂಪು ಪೂಗತರುನಿಕರದ ಸಾಲ್ಗಳೆಡೆಯೆಡೆಯೊಳ್ ಬಯಲ್ದಾವರೆಯ ಬನಮಂ ಪಡೆಯೆಯುಂ ನಖಮಯೂಖಪ್ರಭಾಪ್ರಸರಂ ನಾಳಿಕೇರಮಾಳಿಕಾಮಾರ್ಗದೊಳ್ ತಾವರೆಗಳನಾರಿಗೊಳಿಸೆಯುಂ ತುಳಾಕೋಟಿ [2]ನಳ[2]ಪಂಗಳೊಳ್ ಹಂಸಮಂಡಳಿಗಳಂ ಮುೞುಕುಗೊಳಿಸೆಯುಂ ತೂಗಿ ತೊನೆವ ನಳಿತೋಳ್ಗಳ ಕಂಕಣದ ಝಂಕಾರಂ ಭ್ರಮರಮಾಲೆಯಂ ಭ್ರಮರಿಗೊಳಿಸೆಯುಂ ಅಲರ್ಗುಡಿಗಳ ನೀವೆಮಗೆ ತಮಗೆಂಬ

1 ಮತ್ತೊಂ (ಎ) 2 ಕಳಾ (ಇಉ)

ಕಳರವಂಗಳ್ ಕಳಕಂಠರವಕ್ಕೆ ವಿಕುಂಠತೆಯನೊಡರಿಸೆಯುಂ ಸೋಱುವರಿವಾಗಳ್ ಕಣ್ಗಳೆ ಬೆಳಂತಿಗೆ ಬೆಳ್ಪು ಪರಿಮಳಂ ಪರಿವರಲ್ಗೊಂಚಲ್ಗೆ ದುಕೂಲಚೇಲಮಂ ಬಾಸಣಿಸೆಯುಂ ವಿಳಾಸದಿಂ ಪಾಸುಂ ಪೊಕ್ಕುಂ ಪರಿದು ಕುಸುಮಾಪಚಯ ವ್ಯಾಸಕ್ತೆಯರಾದ ಕುಸುಮ ಸುಕುಮಾರಿಯರೊಳೊರ್ವಳ್ ಸಂದಣಿಸಿ ನಿಮಿರ್ದ ಕೆಂದಳಿರಗೊಂದಣದಾಂದೋಳದಿ ನಂದಂಬಡೆದು ಬಂದ ಮಾಕಂದದ ಮುಂದೆ ನಿಂದು

ಕುಸುಮಶರಾಸನಕ್ಕೆ ನನೆಯಂಬಿನ ತೆಕ್ಕೆಗೆ ಮಿಾನಕೇತನ
ಕ್ಕಸಮಶಿಲೀಮುಖಂಗೆ ರತಿಗೇಳು[1]ಗಿ[1]ವೆಂದರೆಮುಚ್ಚಿದಟ್ಟಿ ಜೋ
ಳಿಸಿ ಕರಪಲ್ಲವಂ ಬಿರುಗೆ ಬಾ[2]ಸಿ[2]ನ ಸೂರ್ ನನೆ ಮೊಗ್ಗೆ ಜಾಗರಲ್
ಪಸರಿಸಿ ಕೊಯ್ದು ಮಲ್ಲಿಗೆಯೊಳರ್ಚಿಸಿದಳ್ ಸಹಕಾರಪಾದಮಂ ೧೨

ವ॥ ಅದಲ್ಲದೆಯುಂ

ಕರತಲರಾಗಮಳ್ಳಿಱಿಯೆ ಸೆಳ್ಳುಗುರಾಳಿಸೆ ಲೋಚನಾಂಶುಗಳ್
ಪರಿದೊಳಪೊಯ್ಯೆ ಪೂದಿಱಿದಳೊರ್ವಳೆ ದಿಗ್ಗನೆಯಿಂದೆ ಬಂದಳೀ
ತರುಣಿ ಬನಕ್ಕೆ ಬಿರ್ದಿನಿತೆ ಮಲ್ಲಿಗೆಯೆಂದೊಸೆದಪ್ಪಿದಂತೆ ಪಂ
ಕರುಹದಳಾಕ್ಷಿ ಕೇದಗೆಯ ಕುತ್ತೆಸಳುತ್ಪಲಪತ್ರಸಂಕುಳಂ ೧೩

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ತಾನೆಂದು ಮುಳಿದು ಸಂಪಗೆಯೆಸಳಂ
ತುಂಬಿಗುರುಳ್ಗೊಪ್ಪಿಸಿದಪ
ಳೆಂಬಿನಮೆಸಳ್ಗಳನೆ ತಿಱಿದು ಸೂಡಿದಳೊರ್ವಳ್ ೧೪

ವ॥ ಮತ್ತಮೊಂದು ತಣ್ಬುಱಿಲೊಳ್ ಬಂಬಲಂಬಡೆಯೆ ಬಳ್ಳಿಮಾವಿನೆಳಗೊಂಬಿನ ಕೋರಕದ ಕುಟ್ಮಲದ ಮೊಗ್ಗೆಯ ಮೊಗ್ಗರಂಗಳನಾಯ್ದು ಕೊಯ್ದು ಸಂದಿಸಿದ ಕೆಂದಳಿರ ತಱಿಯೊಳ್ ತೀವಿ ನಿಜವಯಸ್ಯೆಯ ಕರಪಲ್ಲವಕ್ಕೆ ನೀಡಿ ನಿಲಲೊಲ್ಲದೆ ಶಾಖಾಂತರಮಂ ತರಂಗದೊಳಾಂದೋಳಮನಳಂಕೆಗೊಳಿಸಿ

ಎಳಲತೆಯುಯ್ಯಲಾಡಿದಪುದೆನ್ನ ಸಿತೋತ್ಪಲಮುಯ್ಯಲಾಡಿತೆ
ನ್ನೆಳದುಳಿರುಯ್ಯಲಾಡಿದುದು ತೀಡುವ ತೆಂಬೆಲರಿಂದಮೆಂದು ತಂ
ಗೆಳದಿಯರೊಲ್ದು ಪಾಡೆ ತನುಮಧ್ಯೆ ವಿಲೋಲವಿನೀಲನೇತ್ರೆ ಕೆಂ
ದಳದ ಬೆಡಂಗನಿಕ್ಕಿ ತೆಗೆದುಯ್ಯಲನಾಡಿದಳಾಮ್ರಶಾಖೆಯೊಳ್ ೧೫

1 ಗೆ (ಉ) 2 ಗಿ (ಇ)

ತೆರೆ ಮುಗಿಲನಡರ್ವ ವಿದ್ಯಾ
ಧರಿಯೆಂಬಿನಮೊರ್ವಳೇಱಿ ಕೃತಕಾದ್ರಿಯನೇಂ
ದೊರೆಯಾದಳೊ ರತಿಕಾಂತನ
ಕರುವಮಾಡದ ಮದನಮೋಹಿನೀಪುತ್ರಿಕೆವೊಲ್ ೧೬

ವ|| ಅದಲ್ಲದೆಯುಮಲ್ಲಿ ತಂತಮ್ಮ ಮೇಳದಾಳಿಯರ್ ತಾರಲ್ವಿಡಿದು ಗೋರಿವರಿದುಮೆನೆ ಕುನುಂಗಿ ಕೆಲ್ಲಯಿಸಿ ನೋಟ್ಪ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ

ನಿಱಿದಳಿರ್ದೊಂಗಲಂ ತೆಗೆಯೆ [1]ಚಾ[1]ರುಳಿಯಂ ದನಿಗೆಯ್ದ ಶೋಕೆಯೊಳ್
ಕಿಱುಮುಗಳ್ಗುಂಜಿಯಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಯೊಳ
ಚ್ಚೆಱಿಂದಿರೆ ಮೇಚಕಚ್ಛವಿಯ ತಾವರೆಗಣ್ಗಳ ಗಾಳುವೆಣ್ಗಳೇಂ
ಮೆಱೆದರೊ ಕೇಳಿಶೈಲಶಿಖರಾವಳಿಯೊಳ್ ಶಬರೀವಿಲಾಸಮಂ ೧೭

ವ|| ಅದಲ್ಲದೆಯುಮಿತ್ತ ಸುರಭಿಸಮಯಕ್ಕೆ ಹರಿಚಂದನಮಾದ ಸುರಹೊನ್ನೆಯ ಸುರಚಿರಪ್ರಸೂನಮನುತ್ತಾನಶಾಖಾಲೀನಮಂ ಸ್ವಹಸ್ತಶಾಖಾಧೀನಂ ಮಾಡಿಕುಡೆಂದನುರಕ್ತವಿಟನ ಬಾಹುಶಾಖೆಯಂ ಪಿಡಿದು ನೆಗಪಿಯುಮುತ್ತರೀಯಾಂಚಲಮಂ ಪಿಡಿದುಂ ಜಡಿದುಂ ತಾರಹಾರಮನಾಲಂಬಿಸಿಯುಂ ಬಿಡದೆ ಲಲ್ಲೆಯಿಸಿ

ಗಳದೊಳ್ ತೋಳಮೊದಲ್ ಪಱುಂಚೆ ಕಟಿಯೊಳ್ ವೃತ್ತೋರು ತಳ್ಪೊಯ್ಯೆ ಪೆ
ರ್ಮೊಲೆ ವಕ್ಷಸ್ಥಳಮಂ ಪಳುಂಕೆ ತಿಱಿಯಲ್ ಮೇಲ್ಗೊಂಬಿನೊಳ್ ತೋರ್ಪ ಗೊಂ
ಚಲ ಪೂವಿಂಗೆ ಲತಾಂಗಿ ನಿಳ್ಕುವಿನಮೋಪಂ ಲೀಲೆಯಿಂದೆತ್ತಿ ವೃ
ಕ್ಷಲತಾಲಿಂಗನಭಂಗಿಭಾವರಸಮಗ್ನಸ್ತಂಭಮಂ ತಾಳ್ದಿದಂ ೧೮

ವ|| ಅಂತುಮಲ್ಲದೆಯುಮುತ್ತುಂಗಪೀನಪಯೋಧರೆಯುಮತಿಪೃಥುಳನಿತಂಬಬಿಂಬೆಯುಮತ್ಯಂತತನುತರಮಧ್ಯಭಾಗೆಯುಮಾದ ತರುಣಹರಿಣತರಳನೇತ್ರೆ ಮತ್ತಮೊರ್ವಳ್

ಕುರವಕಮಂ ಘನಸ್ತನದ ಸೋಂಕಿನೊಳುಳ್ಳಲರ್ವಂತಿರಾಳಿಯರ್
ಕುರವಿಡೆಮಾಡೆ ಕಂಡು ದರಹಾಸದಿನಾಕೆಯ ಚಿತ್ತವಲ್ಲಭಂ
ಪುರುಡಿಸಿ ಕೆಯ್ಯೊಳಿರ್ದ ಸರಸೀಜಮನಂಟು ಮುಗುಳ್ಚಿ ಬೆಚ್ಚೆ ಕಾ
ತರೆ ತಳಿರ್ವೊಟ್ಟ ನಿಟ್ಟಸುಗೆಯೊಳ್ದಳಿರಂ ಪಡೆದಳ್ ಪ್ರಸಾದಮಂ ೧೯

1 ಬಾ (ಅಇ)

ವ॥ ಅಂತುಮಲ್ಲದೆಯುಂ

ಸುರಹೊನ್ನೆಯ ಮುಗುಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್
ಪರಿಮಳಮುಳ್ಳೆಳಮುತ್ತಿನ
ಸರವೆತ್ತಣದೆಂದು ಮುಗ್ಧೆಯರ್ ಮುತ್ತುವಿನಂ ೨೦

ದಾಳಿಂಬದ ಕಿಱುನನೆಗಳ
ದಾಳಿಂಬಿಗೆ ಮೆಚ್ಚಿಯೆ ಮುಗುಳ ಮುತ್ತಿನಲೊರ್ವಳ್
ಬಾಳಕಿ ಪಂಚಶರಂಗೊ
ಯ್ದೇಳಿಸಿದಳ್ ಪಂಚಶರನ ಶರಪರಿಣತೆ[1]ಯಂ[1] ೨೧

ವ॥ ಮತ್ತಮೊಂದೆಡೆಯೊಳ್ ಪೊಂಗೇದಗೆಯ ಸಂದಣಿಸಿ ನೆಗೆವ ಧೂಳೀಜಾಳ ಮೇಳಾಪಕದಿಂ ಮೃದುಳನಾದ ಸೈಕತಸ್ಥಳದೊಳ್ ಪೊಱವಾಱ ಪೊಱವೊಱಿಯಿಂ ಗುಜ್ಜು ಮೆಟ್ಟುವ ಪಜ್ಜೆಯ ಮಡಂಗಳಗಲ್ದುಬರೆ ವಿಲಾಸಪರಿಗಮನ ವಿನೋದಮಂ ಮೆಚ್ಚಿವಲ್ಲಿ

ಸುೞಿವ ಕಲಹಂಸಕಾಂತೆಯ
ಬೞಿಯೊಳ್ ನಡೆದೊಪ್ಪಿ ತಗುಳ್ದ ಬಿನದದಿ ನಯದಿಂ
ಬೞಿಯಂ ಪರಿಯಲ್ಕಱಿಯದೆ
ಬೞಲ್ದು ಗಜಗಮನೆ ಸೋಲ್ತು ಗೆಲ್ದಳದೊರ್ವಳ್ ೨೨

ವ॥ ಅಂತು ಪುಷ್ಪಾಪಚಯವಿನೋದಮುಂ ಕುಸುಮಾಭರಣಕ್ಕೆ ವಿಭೂಷಣ ವಿಲಾಸಮುಮೊಡನೊಡನೆ ಮೆಚ್ಚಿಯೆ

ಬಾಳಮೃಣಾಳಹಾರಲತೆ ಬಾೞಿಯ ಸೋಳಿಯ ತಾಲವೃಂತಮು
ಳ್ಳಾಳೆಯ ನೀಳಪೊಟ್ಟಣಮುಕ್ಷರಮುತ್ತಿಸೆ ದೇವನಂ ಪಯಃ
ಕೇಳಿಗೆ ವಂದಬ್ಜದಳಲೋಚನೆಯರ್ ಕುಡೆ ಘರ್ಮಬಿಂದುಮು
ದ್ಭಾಳತಳಂ ಸುಧಾಂಶುಕಳಿತಾರ್ಧರುಚಿ[2]ಯ[2]ರ್ಧಚಂದ್ರನಂ ೨೩

ವನಲಕ್ಷ್ಮೀಶತಮಂಗಜಂಗೆ ಶತಸಾಹಸ್ರಪ್ರಸೂನೇಕ್ಷುಚಾ
ಪನಿಕಾಯಂಗಳನೀವವೊಲ್ ತರುಣಿಯರ್ ತಂದಿತ್ತುಪಂ ಪುಷ್ಪನುಂ
ಡನಮಂ ತಾಳ್ದಿ ಸರೋವರಕ್ಕೆ ತಳರ್ದಂ ವಾಃಕೇಳಿಸಕ್ತಾಭ್ರಮೂ
ಪನತಾಭ್ರ ದ್ವಿಪದಂತಿರುನ್ನಮಿತಯಾನಂ ರತ್ನಮಾಲಾನ್ವಿತಂ ೨೪

1 ಯಿಂ (ಅ) 2 ಗ (ಅಇ)

ವ॥ ಆ ಸರೋವರಮಾಪೂರಿತಮಲಯರುಹಮೃಗಮದಕಾಶ್ಮೀರಘನಸಾರವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ಕಣ್ಗೆ ನಿರವಿಸಲರಿದೆನಿಸಿ ಜಲದೇವತಾನಿವಹದ ಹರಿಣವಿದ್ಯಾವಿಳಾಸಿನೀವಾಸದಂತೆಯುಂ ಷಟ್ಚರಣನಿಕರಚರಣಾಘಾತದಿಂ ಪೊರೆಸಡಿಲ್ದ ಪೊಂದಾವರೆಯ ಕೆಂದೂಳಿಗಳನುರದೆಗೊಂಡೊಗೆವ ಸುರಭಿವಹನಸರಭಸಾಸ್ಫಾಳನದಿಂ ತ್ರೈಲೋಕ್ಯವಲ್ಲಭನ ಕೇಳಿಯುತ್ಸವದೊಳ್ ಪಟವಾಸಚೂರ್ಣಮಂ ಸೂಸುವಂತೆಯುಂ ಪೃಥುಲನಿತಂಬಿನೀಕದಂಬಸುಖಾವರೋಹಣಸೋಪಾನ ಪಙ್ಕ್ತಿಗಳ ತಲೆದುಡುಗೆಯೆನಿಸೆ ನಿಱಿಸಿದ ಹೇಮರಜತರತ್ನ ದ್ರೋಣೀಕಟಾಹ ಪರಿವೇಷ್ಟನದಿನುದಾರಫಲಮುಂ ಕೆದಱುವಂತೆಯುಂ ಮುಂತೆ ಮೆಱೆದಿರ್ದುದಂತುಮಲ್ಲದೆ

ಅಳಿಗಳ ರತ್ನಕದಂಬದ
ಬೆಳಗಿಂ ಬಹುವರ್ಣಜಲಮನಾಂತ ಕಟಾಹಂ
ಗಳ ನಡುವೆ ಪೆತ್ತ ಮಱಿಯಂ
ಬಳುಕಾಡಿಸುವಂತೆ ಸರಸಿ ಪಡೆದುದು ಪದಮಂ ೨೫

ನೆಲೆಮೊಲೆ ಪೊಣರ್ವಕ್ಕಿಗಳಂ
ವಳಿ ವಳಿಗಳನಾಸ್ಯಬಿಂಬಮಂಬುರುಹಮನ
ಗ್ಗಲಿಸೆ ಕಲಹಂಸಯಾನೆಯ
ರಲರ್ಗೊಳನಲರ್ಗೊಳಕೆ ಬಿರ್ದುವಂದಂತಿರ್ದರ್ ೨೬

ಬನದೊಳಗುಳ್ಳ ಹಂಸೆ ಗಿಳಿ ಕೋಗಿಲೆಯೆಂಬಿವು ಮೆಚ್ಚಿ ಬಂದುವಂ
ಗನೆಯರ ಭಂಗಿವೆತ್ತ ನಳಿತೋಳ್ಗಳನೆಂಬಿನಮೇಂ ಸರೋಜಲೋ
ಚನೆಯರ ಕೆಯ್ಯೊಳೊಪ್ಪಿದುವು ಮುತ್ತಿನ ಸುತ್ತಿನ ಪಚ್ಚೆಸಾರದ
ಚ್ಚಿನ ಹರಿನೀಲಮಾಲಿಕೆಯ ಸಂಘಟನಾಜಲಯಂತ್ರಸಂಕುಲಂ ೨೭

ವ॥ ಅಂತು ಜಲಕ್ರೀಡಾಸನ್ನದ್ಧೆಯರಾದ ಚೆನ್ನೆಯರಂ ಕಂಡು ಕೈವೀಸುವುದುಂ

ಪರಿದೊಳಪೊಯ್ದು ಜೀರ್ಕೊಟವೆಯಂ ತೆಗೆದೆತ್ತಿದ ಕೆಯ್ಯೊಳೊರ್ವರೊ
ರ್ವರನಿರದೊತ್ತೆ ಪಂಜರ[1]ಸೆ[1] ಮೇಲೆ ಮುಸುಂಕುವ ಕುಂಕುಮಾಂಬುಸಂ
[[2]ಕರ[2]]ದೊಳದೊಂದು ಕೆಮ್ಮುಗಿಲ ರಾವಣದೊಳ್ ಕುಡಿಮಿಂಚುಗಳ್ ತಡಂ
ಬರಿಪವೊಲೇಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಂಗಿಯರ್ ೨೮

1 ಸಿ (ಇಉ) 2 ಕುಲ (ಅಇಉ)

ವ|| ಅಂತು ಮೆಱೆವ ತುಮುಲಖೇಲನವಿಲಾಸದೊಳ್ ತಂತಮಗೆಡೆವಚ್ಚು
ಗೊಂಡು ಬಿಚ್ಚತಮಾಡುವಿಚ್ಚೆಗಾರ್ತಿಯರೊಳ್

ಮಿಸುಪಂ ತೋಳ ಮೊದಲ್ ತುಱುಂಕೆ ಮೊಲೆ ಮುಯ್ವಂ ಮೀಱೆ ಗಾತ್ರಾಪರಂ
ಪಸರಂಬೆತ್ತಿರೆ ಕೊಂಕಿ ಬಳ್ಕೆ ನಡು ಕೊಂಬಂ ತೀವಿಕೊಂಡೆತ್ತಿ ಪೂ
ಣಿಸಿ ತನ್ನಂ ಬಿಡೆ ಪೊಯ್ದು ಪೋಪವಳನೊಡ್ಡೊಡ್ಡೆನುತ್ತೊರ್ವಳೊ
ಡ್ಡಿಸಿ ಪೊಯ್ಯಲ್ ನಿಮಿರ್ದೊಂದು ಭಾವದೊಳೆ ಭಾವೋದ್ಭೂತನಾದಂ ಸ್ಮರಂ ೨೯

ಮಂಡಳಿಗೊಂಡು ಸಿಂಪಿಸುವ ಕುಂಕುಮವಾರಿಯ ಚೆಂಚಗೆಂಚು ಕೈ
ಕೊಂಡು ದುಕೂಲಚೇಲದ ವಿಲಾಸಿನಿಯರ್ಕಳ ದೇಸೆ ತಂದುದಿಂ
ದುಂಡಿಗೆ ಸಾಧ್ಯಮಾಯ್ತೆನಗೆ ಮೂಜಗಮೀ ಜಲಕೇಳಿಯಿಂದಮೆಂ
ದುಂಡಿಗೆಯೆತ್ತಿ ತೋಱಿದನಿವಳ್ದಿರನಂಗಜನೆಂಬ ಭಂಗಿಯಿಂ ೩೦

ಇೞಿಪಿದ ಕಟಾಹಶತದೊಳ್
ಸುೞಿಸುೞಿದೋರೊರ್ಮೆ ಮೊಗೆಯುಲೆಯ್ದವೆ ನೀರ್ ಜೀ
ರ್ಕೊೞವೆಯ ಕೊಂಬಿನ ಜಂತ್ರದ
ಘೞಿಯಿಕ್ಕಿನಿವಿರಿದೊ ನೃಪನ ವನಿತಾನಿವಹಂ ೩೧

ವ|| ತದನಂತರಂ

ಹರಿನೀಲೋಪಲಪಟ್ಟಿಕಾಘಟಿತ ಸೋಪಾನಂಗಳೊಳ್ ತೀರಮಂ
ದರಕಲ್ಲೋಲವಿಲೋಲನಾಲಿಕೆಗಳೊಳ್ ಕಾಂತಾಪ್ರತಿಚ್ಛಾಯೆ ತ
ಳ್ತಿರೆ ಕಾಸಾರಮಿದಲ್ಲದಲ್ಲದು ಮನೋಜಬ್ರಹ್ಮನಿರ್ಮಾಣನಂ
ತರುಣೀರತ್ನಮಹಾನಿದಾನಮೆನೆ ಕಣ್ಗಿಂಬಾಯ್ತು ಪದ್ಮಾಕರಂ ೩೨

ಸೆಳೆದು ಮರಳ್ಚಿ ಸೋಗೆನಿಱಿಯಂ ಮೃದುಜಂಘೆಯನೊಯ್ಯನಂಟಿ ಮೈ
ಪುಳಕಿಸಿ ಸೋಂಕಿ ನುಣ್ದೊಡೆಯ ಮೆಲ್ಲಡವಂ ಬಿಡೆ ತಳ್ತು ಮಧ್ಯಮಂ
ಕಳಶಕುಚಂಗಳಂ ತಳೆದು ಪೊಕ್ಕೞಿವಲ್ಲಿ ತರಂಗಹಸ್ತದಿಂ
ಮಳಯಸಮೀರಣಂ ಸರಸವಾಡಿದನಗ್ಗದ ಪೆಂಡವಾಸಮಂ ೩೩

ಇೞಿದೊಡೆ ಕೂರದ ಪೆಂಡಿರ
ಕೆೞಗಾದಪೆವೆಂದು ರತ್ನಸೋಪಾನಕದೊಳ್
ಗೞಗೞನಿೞಿಯದೆ ಬಾಣತಿ
ಪೊೞಿಮೆಟ್ಟುವ ತೆಱದೆ ಗುಜ್ಜು ಮೆಟ್ಟಿದರರೆಬರ್ ೩೪

ಆವಗಮಾದುವುಗುಳ್ ನೀ
ರ್ವಾವಳರೆರ್ದೆಗಬ್ಜವದನೆಯರ್ ಪುಗುವೆಡೆಯೊಳ್
ಲಾವಣ್ಯರಸಂ ತೆಕ್ಕನೆ
ತೀವಿದ ತಿಳಿಗೊಳದ ಪಯಸಮೂರುದ್ವಯಸಂ ೩೫

ವ॥ ಅಂತು ವಾರಕಾಂತಾಸಂತಾನ ಶ್ರುತಿಪ್ರತಾನದಂತೆ ಸರಸದೊಳಪೊಕ್ಕಲ್ಲಿ

ಜಳಜಾತದ್ವಯಮೇತಮೆತ್ತಿದಪುವಂಭೋಜಾಳಿಗೆಂಬಂತೆ ಕೆಂ
ದಳಿರ್ಗಳ್ವೊಂದಳಮರ್ಘ್ಯಮಿತ್ತಪುವು ಶೀತದ್ಯೋತಿಗೆಂಬಂತೆ ಕೋ
ಮಳೆಯರ್ ಕೆಂದಳದಿಂ ಮೊಗಕ್ಕೆ ಜಳಮಂ ತುಳ್ಕಾಡೆ ತುಳ್ಕಾಡಿದರ್
ಪ್ರಳಯಕ್ಷುಬ್ಧಮನೋಭವಾಬ್ಧಿಗಳೊಳಿತ್ತಲ್ ನೋಡೆ ಚಿತ್ರಪ್ರಿಯಂ ೩೬

ವ॥ ಮತ್ತಮೊರ್ವಳ್ ತನ್ನ ತನುವಿನ ರಾಗಚಿಹ್ನಂಗಳಿಂ ವಿಟಪೇಟಕದ
ಕಣ್ಣರಲ್ಗಳಂ ಕಪ್ಪರೆಗೊಳಿಸಿದ ಕಾಮುಕಿ

ಪೊಳೆವೆಳವಾಳೆ ಚುಂಬಿಸಿ ಮುಟುಂಕಿರಲಂಜಿದಳೆಟ್ಟಿಮೆಯ್ದೆ ಮೆ
ಯ್ಕೊಳಿಸಿದ ನಾಗವಟ್ಟಳಿಗೆ ನಾಣ್ದು ಪಗಲ್ತಿರೆ ನಾಣ್ಚಿದಳ್ ಕುಚಂ
ಗಳ ಕೆಲದೊಳ್ ಕವಲ್ತ ನಖರೇಖೆಗೆ ಬೆನ್ನಗಡುವ್ರಣಕ್ಕೆ ಕಂ
ಚುಳಿಕೆವೊಲಾಗೆ ರಾಗಿಸಿದಳೊತ್ತಿದ ಕುಂಕುಮಪಂಕಧಾರೆಗಳ್ ೩೭

ವ॥ ಅಂತುಮಲ್ಲದೆಯುಂ

ತುಳುಕುವ ನಲ್ಲಳ ನೀರ್ವೊಯ್
ತೆಳಕಿದವೊಲ್ ಮುಟುಕೆ ಮುನ್ನೆ ಕಣ್ಪೇಟದವಳ್
ತುಳಿಕಿದೆಡೆಗೆಯ್ದಿ ಚುಂಬಿಸಿ
ಚುಳುಕಾಡೆ ಮರಳ್ಚಿ ಮೂಡಿದಂ ಸ್ಮರನೊರ್ವಂ ೩೮

ವಳಿರೇಖೆವಡೆದ ಬಡನಡು
[1]ತ್ರೊಲೆ[1]ಯೆನೆ ಕುಚಘನಭಾರಮಂ ಕರತಲದೊಳ್
ನಿಲಿಸಿ ಲತಾಂಗಿಗೆ ನೀಸಲ್
ಕಲಿಪ ವಿಟಂ ತೂಗುವಂಗಜಂಗೆಣೆಯಾದಂ ೩೯

ವ॥ ಅಂತಲಂಪುವಡೆದ ಸಿಂಪಿಣಿಯ ಪೊಂಪುಳಿಯೊಳ್

1 ಶಲಿ (ಉ)

ಆಯತಲೋಲಲೋಚನಚಲಪ್ರಭೆಯಿಂ ಹರಿಚಂದನದ್ರವ
ಶ್ರೀಯನೊಡರ್ಚೆ ಕತ್ತುರಿಯನೀರ್ತಳಿದಳ್ ಸತಿ ರತ್ನಮಾಲೆ ಪೃ
ಥ್ವೀಯುವತೀ ಪ್ರಸಾಧನನ ಪೇರುರದೊಳ್ ಜಳಖೇಳನಪ್ರತಿ
ಶ್ಯಾಯಿತಲೋಲಕಂಕಣದಿನುಣ್ಮುವಿನಂ ಜಣಝುಂಕೃತಿಸ್ವನಂ ೪೦

ಮಡದಿಯು ಮೇಲಿಳಾಧಿಪತಿ ಕತ್ತುರಿನೀರ್ಗಳನೊತ್ತೆ ಕೂಡೆ ಪಾ
ಯ್ದಡಸಿದ ಧಾರೆಯಿಂ ವದನಪಂಕರುಹಂ ಮಱುದುಂಬಿ ಮಾಲೆಯಂ
ಪಡೆದುದು ಕರ್ಣಪೂರದಸಿತೋತ್ಪಲಮಂಜರಿ ನೀಳನಾಳಮಂ
ಪಡೆದುದು ಮೌರ್ವಿಯಂ ಪಡೆದುದಾಕೆಯ ಮಧ್ಯಮನೋಜಕಾರ್ಮುಕಂ ೪೧

ವ॥ ಆಗಳ್

ಸವತಿಯ ಮೇಲೆ ಜೀಕೊರ್ಟವೆಯಿಂ ತೆಗೆದೊತ್ತೆ ಮನಃಪ್ರಿಯಂ ಕಲಂ
ಕುವ ಬಗೆ ಕೆಂಕಮಾದ ಕಡೆಗಣ್ ತಳಿರ್ವಣ್ಣಮನಾಳ್ದ ತೆಳ್ಗದಂ
ಪವಿರಳಘರ್ಮವಾರಿ ಮೆಱೆವನ್ನಮದೊರ್ವಳಬಿಲ್ದ ಸೂಯೆಯಿಂ
ಯುವತಿ ಕಡಂಗಿ ಕೋಪರಸದೋಕುಳಿಯಾಡಿದಳಿಕ್ಷುಚಾಪನೊಳ್ ೪೨

ವ॥ ಆ ಮಾನವತಿಯಲ್ಲದೆಯುಂ

ಸರಸಿಜದೆಲೆಗೊಡೆಯಂ ಪಿಡಿ
ದರಸನ ನೀರ್ವೊಯಿಸೆ ನಿಂದು ಕುನಿದಾಂತೊರ್ವಳ್
ಮರಕತದ ಹರಿಗೆಯೋಜೆಯ
ನರಲಂಬನ ಮುಂದೆ ಮೆಱೆವ ರತಿಯವೊಲೆಸೆದಳ್ ೪೩

ಮುರಿದೆಡಗೈ ನಿಜಾಂಗಳನೋ
ಸರಿಸಿರೆ ಬಲಗೈಯನೊಡ್ಡಿ ಧಾರೆಗದೊರ್ವಳ್
ತರಲಾರ್ತಳುಭಯಕರದಿಂ
ಪರಿವೃತದೊಳ್ನಿಂದ ನರ್ತಕೀವಿಭ್ರಮಮಂ ೪೪

ಕೋಕನದವದನೆ ಜಳಧಾ
ರಾಕಳನಕ್ಕಾನಲಾಜದೊರ್ವಳ್ ಮೆಲ್ಪಾ
ಯ್ದೋಕುಳಿಯ ನೆವದಿನಪ್ಪಿ ಮ
ಹೀಕಾಂತನೊಳಂಗಸಂಗಸುಖಮಂ ಪಡೆದಳ್ ೪೫

ವ॥ ಮತ್ತಮಭಿಮಾನನಿಧಾನೆಯೆನಿಸಿದ ಮಾನಿನಿಯೊರ್ವಳ್

ಮುಟುಗಿದೊಡೆ ಸವತಿಯರ್ಕಳ
ಚಳನಂ ಸೋಂಕಿದಪುದುಪೋಡಿದೊಡೆ ನಕ್ಕಪರೆಂ
ದೆಳೆಯಳ್ ತಳರದೆ ನಿಂದಳ್
ಜಳದೇವೀಭಾನಚರಿತಮಣಿಪುತ್ರಿಕೆವೊಲ್ ೪೬

ವ॥ ಮತ್ತಮೊರ್ವಳುರ್ವರಾಧಿಪತಿಯೊತ್ತುವ ಜೀರ್ಕೊಳವಿಯಳವಿಗೆ ಸಿಲ್ಕಿ

ನೀರ್ಮೊಗಸಿ ಪೊಯ್ಯೆ ಬಿರ್ಚಿದ
ಸೋರ್ಮುಡಿಯೊಳೆ ಮುಸುಕೆ ನಿಜಮುಖಾರ್ಧಮುಮಿನಿಸಂ
ಕಾರ್ಮುಗಿಲೆಳಸಿದ ಹಿಮರೋ
ಚಿರ್ಮಾಲೆವೊಲೆಸೆದುದಸಿಯಳಾನನಬಿಂಬಂ ೪೭

ವ॥ ಅಂತು ನೆಗಟ್ದ ಭಾವವ್ಯತಿಕರಂಗಳ್ ದೊಮ್ಮಳಿಸೆ ತಮ್ಮನಿಬರುಂ ಘಟ್ಟಿಸಿ ನಿಂದು ತಟ್ಟುತ್ತು ತಾಗಿ ಪೋಗದೆ

ಅರಸನ ಮೇಲೆ ಭೋರ್ಗರೆದು ರಾಣಿಯವಾಸದ ಪೆಂಡವಾಸದಾ
ದರದ ಬೆಡಂಗೆಯರ್ ಮಳಯಜಾಂಬುಮಿಳದ್ಘನಸಾರ[1]ವಾರಿಯಂ[1]
ಸುರಿಯೆ ಮನೋಜಪುಷ್ಪಿತಲತಾಪ್ರಕರಂ ಮಕರಂದವರ್ಷಮಂ
ಸುರಿದ ನಮೇರುಭೂರುಹದವೊಲ್ ಮೆಱೆದಂ ನರಲೋಕಚಂದ್ರಮಂ ೪೮

ವ॥ ಆ ವಿಲಾಸಕ್ರೀಡೆಯೊಳ್

ಕರಶಾಖೆಗಳವಚರ್ತಂ
ತಿರೆ ಜಳಯಂತ್ರಕ್ಕೆ ಮೆಲ್ಲನಾದುವು ಪದ್ಮಾ
ಕರಕೇಳಿ ಸಾಲ್ವುದೆಂಬಂ
ತಿರೆ ಕಂಪಿಸಿದುವು ಬೆಡಂಗೆಯರ ತನುಲತೆಗಳ್ ೪೯

ವ॥ ಅನ್ನೆಗಂ ವಿಲಾಸವನವಸಂತಂ ಸಂತರ್ಜಿತಕ್ರೀಡಾವಸರನಾಗಿ

ನೀರಾಟವಾಡಿ ಪೊಱಮಡು
ವೈರಾವತದಂತೆ ದಿವಿಜದೀರ್ಘಿಕೆಯಿಂ ಕಾ
ಸಾರದಿನೇಂ ಪೊಱಮಟ್ಟನೊ
ವಾರವಧೂಸಹಿತಮವನಿಪತಿದಿಗ್ನಾಗಂ ೫೦

---

1 ಯಂತ್ರದಿಂ (ಎ)

ವ॥ ಅಂತು ಪೊಱಮಡುವೆಡೆಯೊಳ್ ಸಡಿಲಮಾದುಡೆನೂಲನಡಿಗಡಿಗೆ ಸಾವಗಿ ಸುತ್ತುಂ ನಾಂದು ಸುರುಳ್ದು ವೃತ್ತಸ್ತನಂಗಳೊತ್ತಿಂಗೆ ಬೀೞ್ವುತ್ತರೀಯಮನೆತ್ತಿ ಸಾರ್ಚುತ್ತುಮುತ್ತಂಸವಲಯದೊಳಡ್ಡಂಗೆಡೆವ ಸಾದ್ರ್ರಕಬರೀಭಾರಮಂ ತೆಱವಿನೊಳ್ ಪೊಱಮುಯ್ವಿಂಗಣೆದು ನೂಂಕುತ್ತುಂ ನೂಪುರಕಲಾಪದೊಳ್ ತೊಡಂಕಿ ಬರ್ಪ ಮೃಣಾಳಶಕಲಮಂ ಕರ್ದುಂಕಿ ಸೆೞೆವ ಹಂಸಿಗಳಂ ನಿವಾರಿಸುತ್ತುಂ ನೀರಾಟತೋಟಿ ಯೊಳ್ ಬಾಡಿ ಸೊವಡಾದ ಬಿಸಿನೀವಿಸರದೆಸಱಂ ಬಿಸುಟ್ಟು ನಱುಸುಯ್ಗೆಱಗುವ ಮಱುದುಂಬಿಗಳಂ ಮರಳಿ ಸೋವುತ್ತುಂ ಉತ್ತುಂಗಜಘನೆಯರ್ ಪೊಱಮಡುವಾಗಳ್

ಮದಕಲಹಂಸಯಾನದ ರಥಾಂಗಕುಚಂಗಳ ವಾರಿಜಾತವ
ಕ್ತ್ರದ ಸಿರಿಯಿಂದಮೆನ್ನ ಸಿರಿ ತಾಂ ಮೆಱೆದಿರ್ದುದು ನಿಮ್ಮ ವಾರ್ವಿನೋ
ದದ ನೆಲೆ ವಾರನಾರಿಯರಿರೆನ್ನನೆ ಬಿನ್ನನೆ ಮಾಡಿ ಪೋಗಲಾ
ಗದು ನಿಮಗೆಂದು ಕಾಲ್ವಿಡಿವವೊಲ್ ತೆರೆಯುಣ್ಮಿದುವಬ್ಜಷಂಡದೊಳ್ ೫೧

ವ॥ ಅಂತು ಪೊಱಮಟ್ಟ ಪೊಱಗೆ

ಅವರೋಧಪ್ರಮದಾಕದಂಬವಿಗಳತ್ಕಾಶ್ಮೀರಸಾರಂ ಮೃಗೋ
ದ್ಭವಕಲ್ಕಂ ಘನಸಾರರೇಣುಪಟಲಂ ಶ್ರೀಖಂಡಜಂಬಾಳೆಯಿಂ
ಬಿವಱಿಂ ತೇಂಗೆ ತರಂಗಮಾಲೆ ರತಿ ಕಂದರ್ಪಂಗೆ ತೀವಿಟ್ಟ ಬ
ಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ ಸುಖಾಸಾರಮಂ ೫೨

ಸ್ತನಕುಂಭದ್ವಿತಯಂಗಳೊಳ್ ಮೆಱೆಯೆ ಹಸ್ತಸ್ವಸ್ತಿಕಂ ಕುಂತಳಾ
ಗ್ರನಮುತ್ಪಲ್ಲವಮಾಸ್ಯದರ್ಪಣದ ಮೇಗಿಂಬಾಗೆ ನಾಂದಂಬರಂ
ತನುವಂ ಪತ್ತಿ ದಿಗಂಬರೀಮಹಿಮೆಯಂ ತಂದೀಯೆ ನಿಂದಿರ್ದ ಕಾ
ಮಿನಿಯರ್ ಮಂಗಳಮಂತ್ರದೇವಿಯರವೊಲ್ ಕಣ್ಗೇಂ ಬೆಡಂಗಾದರೋ ೫೩

ಭೂವರನಿತ್ತಂ ವರಭೂ
ಷಾವಲಿಯಂ ತೊಳಿದ ತೋರಮುತ್ತಿನ ಮೊತ್ತಂ
ಪೋವಣಿಕೆವಡೆದುದೆಂಬಿನ
ಮಾವನಿತೆಯರದೇಂ ಮನಂಗೊಳಿಸಿದರೋ ೫೪

ವ॥ ಅಂತಲಂಕೃತಪರಿಜನನಾಗಿ ಜನತಾವಲ್ಲಭಂ ವಲ್ಲಭೋದ್ಯಾನದಿಂ ಪೊಱ ಮಟ್ಟು ಪುರಗೋಪುರಾಂತಂಬರಂ

ಮದಗಂಧೇಭವಿಲಾಸಯಾನಮುರದಪ್ರೋದ್ದೀನಯಾನಂ ತುರಂ
ಗದವೋರಂಘಿತಯಾನಮಶ್ವತರಲೀಲಾಯಾನಮಾಂದೋಳಸಂ
ಮದಯಾನಂ ಮೆಱೆದೊಪ್ಪೆ ರಾಜಗೃಹಮಂ ಪೊಕ್ಕಂ ಪುರಸ್ತ್ರೀಚಳ
ನ್ಮದಿರಾಪಾಂಗಮರೀಚಿ ಬಂದಿದಿಗೆರ್ಳಲ್ ತನ್ನಂ ಮಹೋತ್ಸಾಹದಿಂ ೫೫

ವ॥ ಆ ಸಮಯದೊಳ್

ಜಿನರಾಜಂ ವನವಾರಿಕೇಳಿ [1]ವಿಭವಂ[1] ವಾರಾಂಗನಾಲೋಲಲೋ
ಚನರಾಜ್ಞೀದರಹಾಸವಕ್ತ್ರವಲಯ ಶ್ರೀಯುಂ ಮದೀಯಪ್ರಿಯಾ
ಬ್ಜಿನಿಯುಂ ತೆಱಱಮಾಡಿ ಕೀೞ್ಪಡಿಸಿದಂ ತಾನೆಂದು ಕಾಯ್ವಂತೆ ಕೆಂ
ಪಿನ ಸೊಂಪಂ ತಳೆದಂ ತವಿಲ್ವಗಲೊಳಂ ವಿಶ್ವಂಭರಾವಲ್ಲಭಂ ೫೬

ವ॥ ಅಂತು ಪೊಕ್ಕು ರಾಜರಾಜಂ ರಾಜಾಂಗಣದೊಳ್ ಅಹಮಹಮಿಕಾಪ್ರಣತ ಪ್ರಚಂಡಮಂಡಳಾಧೀಶ್ವರಮಣಿಕಿರೀಟಮರೀಚಿಮಂಜರೀಪ್ರತಿಬಿಂಬಕಚಂದ್ರಕಪಕ್ಷ್ಮಕ್ಷ್ಮಾತ್ರ ನಿದಾನಗಜರಾಜನನುಭಯಕರಪಲ್ಲವನಖಮಯೂಖದೀಪಕಲಾಪಂ ಮುಖಮದಲಕ್ಷ್ಮೀಕ್ರ ಗಾರತಿಯನೆತ್ತೆ ಕುಂಭಬಿಂಬದ್ವಯಮಂ ಸುತ್ತಿ ತೊಡೆದಪ್ಪಳಿಸುತ್ತೆ ನಿಂದು

ಕೆಲಱಂದಾಲೋಕನಚಂದ್ರಿಕಾ ಪ್ರಸರದಿಂ ಹಸ್ತಾಬ್ಜವಿನ್ಯಾಸದಿಂ
ಕೆಲಱಂದಾಂದೋಳಿತಚಾಮರಾಳಿಯಿಂ ಕೆಲಱಂದು ತಾಂಬೂಲಪ್ರದಾನಂಗಳಿಂ
ಕೆಲಱಂದಾನಮ್ರಶಿರಸ್ಕಮಂಜಲಿಪುಟವ್ಯಾಲಗ್ನಭಾಳಂ ಜಗ
ಕ್ಕೆಱೆಯಂ ಬೀೞ್ಕೊಂಡೆ ಪೋಯ್ತು ರಾಜಗೃಹದಿಂ ಸೌಜನ್ಯರಾಜನ್ಯಕಂ ೫೭

ವ॥ ಅನಂತರಮವರೂಢಗಂಧಗಜರಾಜರಾಜನನಾರೂಢತವಂಗಭದ್ರಪ್ರಾಕಾರ ತುಂಗಮಣಿಮಂಡಪನನಧಿಷ್ಠಿತನಿಷ್ಟಪ್ತಕನಕಹರಿವಿಷ್ಟರನನಾಘೂರ್ಣಿತಮಾಂಗಳಿಕ ಶಂಖದುಂದುಭಿ ಗಭೀರಭೇರೀಧ್ವಾನನೆಂಬ ತೆಂಬೆಲರಲೆಪದಿನಲರ ಗುಲುಂಚ್ಛನನುಂ ತೂಱಿ ತೊನೆಪನಂಗ ಜಂಗಮಲತೆಗಳಂತೆ ಕನಕಮಯಭಾಜನ ವಿಹಿತಸರೋಜರಾಗ ದೀಪಕಳಿಕಾಕಳಾಪಮೆಸೆವಿನಂ ವಾರನಾರಿಯರಾರತಿಯನೆತ್ತುವವಸರದೊಳ್ ಮಂಗಳ ಪಾಠಕರ್ ಮಂಗಳವೃತ್ತಂಗಳನಿಂತೆಂದೋದಿ ಕೇಳಿಸಿದರ್

ಘನಮಾರ್ಗೋದಾತ್ತಪಾತ್ರಪ್ರಣಿಹಿತಮಣಿತಾರಾಳಿನೀರಾಜಿತಂ ಮೇ
ರುನಗೇಂದ್ರಂ ನಿನ್ನ ರಾಜೋದ್ಭವವಿಜಯವಚಃಕೀರ್ತಿಲಕ್ಷ್ಮೀಸದೃಕ್ಷಾಂ
ಗನೆಯರ್ ಕಣ್ಸೋಲಮಂ ಸಾಲಿಡೆ ನಿವಳಿಪ ದೀಪಾವಳೀಚಾರುನೀರಾ
ಜನಮಾಂಗಲ್ಯಕ್ಕೆ ಮಾಂಗಲ್ಯಮನೆಸಗುಗೆಲೇ ದೇವ ರಾಜಾಧಿರಾಜಾ ೫೮

1 ವಿಭವದಿಂ (ಎ)

ಇಭಚರ್ಮಾಂಬರಭಾಸಮಾನತಿಮಿರಂ ನಿರ್ಮುಕ್ತತದ್ರಕ್ತಸ
ನ್ನಿಭಸಂಧ್ಯಾರುಣಿಮಂ ನಿಮಗ್ನದಿನಕೃದ್ಬಿಂಬೋನ್ಮುಖಾನೇಕರ
ಶ್ಮಿಭುಜಂ ಪಶ್ಚಿಮಶೈಲಶಂಭುನಟನಾರಂಭಂ ಜಗತ್ಪ್ರಾಣನಾ
ಥ ಭವದ್ಭೂರಿಭುಜಕ್ಕೆ ಮಾಳ್ಕೆ ವಿಭವಶ್ರೀಯಂ ಜಯಶ್ರೀಯುಮಂ ೫೯

ವ|| ಎಂದೋದಿ ಮಂಗಳವೃತ್ತಪ್ರಸ್ತಾವನಾನುಗತಮಾದ ವೀಜನದೋಜೆ ಬೀಜಮಾಗೆ ಬಂದು ಪತಾಕೆಗಳಂ ಸಂದಿಸಿ ನಟಯಿಸುವಪರವೇಲಾನಟನನಾಟಕಸಂವಿಧಾನಮೆನಿಸಿ

ದಿವಸಕರಾಪಸಾರಣದೊಳ್ಕಿದಿಸಿ ಬೆನ್ನನೆ ಬರ್ಪ ಪೆರ್ವಲ
ಕ್ಕವತಮಸಪ್ರಚಂಡಚರರಿಕ್ಕಿದ ಸೊಪ್ಪನೆ ಬೆಂದಱಂಬಿನೊಳ್
ಕವಿಲ ಬಿಸಿಲ್ಗಳೀಂ ಮಱಿಸಲಾರ್ತುವೊ ತೀವ್ರಕರಾಭಿಘಾತದಿಂ
ದವನಿಯ ಬೆಂದ ಪುಣ್ಗಲೆಗಳೊಯ್ಯನೆ ಕೆಂಗಲೆಗಟ್ಟಿದಂದಮಂ ೬೦

ಪುಳಿನತಳಂಗಳೊಳ್ ಸೆಳೆವ ನುಣ್ಮಳಲಿಂ ಜಳಶೀಕರಂಗಳಂ
ತಳಿದು ಕಳಲ್ದ ಪದ್ಮದಳಸಂಕುಳದಿಂದೆಸಟ್ವಾಸನೊತ್ತಿ ಪೂ
ಗೊಳದೊಳಗಲ್ವ ಕೋಕವನಿತಾ ವ್ಯಥೆ[1]ಗಿಂ[1] ಶಿಶಿರೋಪಚಾರದೊಳ್
ಕೆಳದಿಯರಾದುವಾತಳರ್ವ ತಣ್ಣೆಲರಿಂ ತರಲೋರ್ಮಿಮಾಲೆಗಳ್ ೬೧

ನಳಿನೀಸಂಪತ್ತಿಸೂತಂ ಪೆಱಗುಡುಗೆ ಹಯಂ ಜಾಱೆ ತೋಳ್ಪಾಱೆ ತೇರ್ ವ್ಯಾ
ಕುಳಚಕ್ರಂ ಸಿರ್ಕೆ ಶೃಂಗಾಗ್ರದಿನಿೞಿ ಪೆಡೆಯೊಳ್ ಪದ್ಮಿನೀಕೋಶದೇಶಾ
ವಳಿಯಂ ಕೈಕೊಂಡು ಬೆಂಬತ್ತಿಸೆ ತಿಮಿರಬಲಂ ಕಂಡು ತಾಂ ಸೂರನಸ್ತಾ
ಚಳದೊಳ್ ಕೆಂಬಟ್ಟೆಯೊಂದಡ್ಡಣದೊಳೆ ಮುಗುಳ್ದಂತೆಡ್ಡಮಾಯ್ತರ್ಕಬಿಂಬಂ ೬೨

ವ|| ಅನಂತರಂ

ಅಪರಾಂಭೋಧಿತರಂಗಮೆಂಬ ತೊವಲೊಳ್ ತ್ರಿಂಶದ್ಘಟೀಪರ್ವದಿಂ
ದೆ ಪವಣ್ಗಟ್ಟಿದದೊಂಟಿಯಂ [2]ಸಲಿ[2]ಸಿ ಕಾಳವ್ಯಾಧನಸ್ತಾಚಲಾಂ
ಘ್ರಿಪದಿಂದಂಬುಜಮಿತ್ರಬಿಂಬಫಲಮಂ ತದ್ವಾರುಣೀಪಾನಕೇ
ಳ್ಯುಪದಂಶವ್ಯಸದೇಶದಿಂದೆ ಸೆಳೆದಂ ದೊಪ್ಪೆಂದು ಬೀೞ್ತರ್ಪಿನಂ ೬೩

ವ|| ಅದಲ್ಲದೆಯುಂ

---

1 ಗಿಂ (ಎ) 2 ಕೊಳೆ (ಅಇಉ)

ಕಱುಪದನಾದ ಬಾಸರಬಸಿಲ್ ತೆರೆಯುಂತಿರೆ ಬಟ್ಟಲಿಟ್ಟು ತಂ
ದಿಱಿಪಿದ ಲೋಹಿಯುಂತಿರಪರಾಚಲಕೋಟಿ ನಿಶಾತಮ[1]ತ್ರರೋ[1]
[2]ತು[2]ಱುಗುವ ದೂಳಿಸಂಜೆಯನೆ ಪೊರ್ದಿರೆ ಪಿಂಬಗಲಿಂಬ ಲಗ್ನಗಂ
ಘಱಿಗೆಯ ಬಟ್ಟಲಂತೆ ಮುೞುಗಿತ್ತಪರಾಬ್ಧಿಯೊಳರ್ಕಮಂಡಲಂ ೬೪

ರಸಗೀತಾತೋದ್ಯನೃತ್ಯಾನುಗದೊಳೆ ಕಹಳಾಶಂಖಭೇರೀಮೃದಂಗ
ಪ್ರಸರಂ ಮೇಳಾಪಕಂ ಘೂರ್ಣಿಸೆ ಮಣಿಶಿಖರಾಗಾರಪಾರಾವತಂಗ
ಳ್ಗೆಸಿತೋದ್ಯದ್ಧೂಪಧೂಮಚ್ಛವಿ ಗಳರವಮಂ ಪಲ್ಲಭಾರೋಚದಿಂ ಪು
ಟ್ಟಿಸೆ ಜೈನೇಂದ್ರಾಲಯಂಗಳ್ಗೆಸೆದುದಸದಳಂ ಧೂಮವೇಳಾವಿಳಾಸಂ ೬೫

ವ॥ ಆಗಳಾದೇವಂ ದೇವಾಗಾರದೊಳಪರವೇಳಾಯಾಮನಿತ್ಯಾರ್ಚನಾವಿಧಾನಮುಮಂ ತೀರ್ಚಿ ತೀರ್ಥನಾಥಂಗೆ ಕುಸುಮಾಂಜಲಿಯನಿತ್ತುಭಯಕರಕಿಸಲಯರಾಗಭೋಗದಿಂ ನಿಟಿಲತಲ ಮಲಯರುಹಕ್ಕೆ ಕೇಸರದ ದೇಸೆಯಂ ಪಡೆದು

ಕುದಿಯೆ ನೆಲಕ್ಕೆ ಕಾಯದ ಮುಗಿಲ್ ಮಱೆಯಾಗದ ರಾಹುಪೀಡೆ ಪೊ
ರ್ದದ ದಿವಸಾವಸಾನದೊಳಡಂಗದಿರುಳ್ ಕೆಱೆತೊಂದು ಮೂಡೆ ಪಿಂ
ಗದ ಸಹಜಪ್ರಕಾಶಶತಕೋಟಿರವಿಪ್ರಭೆ ನಿನ್ನ ತೇಜಮ
ಲ್ಲದೆ ದುರಿ[3]ತಾಂಧ[3]ಮಂ ಪೆಱರ ತೇಜಮಡಂಗಿಪ್ಪುವೇ ಜಿನೇಶ್ವರಾ ೬೬

ವ॥ ಎಂದು ತತ್ಸಮಯಾಭಿರೂಪಗುಣ ವಸ್ತುಪರಿಪುಷ್ಟನ ಸ್ತವನದಿನಭಿಷ್ಟುತಿಗೆಯ್ದು ಗಂಧಜಲಸಿದ್ಧಶೇಷಾಕ್ಷತಪ್ರಸರಕುಸುಮಿತಾಳಕಲತಾಜಾಲಕನಾಸ್ಥಾನಭವನಭದ್ರವೇದಿಕೋಪಾಂತದೊಳ್ ವಾರನಾರೀನೀರಾಜಿತದೀಪಕಳಿಕಳಾಪನುಂ [4]ತದವಸರೋ[4]ಚಿತ ಚತುರಪ್ರಸಾದಿತಕವಿಜನಾಳಾಪನುಮಾಗಿರ್ದನಾಗಳ್

ಕರೆದುವು ತಾಮರಲ್ದಗಿಪ ತಾವರೆ ಕೂಡೆ ಕುಕಿಲ್ವ ಪಕ್ಕಿಗಳ್
ಪರಿದುವು ಮಾಣದಂಡಲೆವ ಹಂಸೆಗಳುಂ ತಡಿಸಾರ್ದುವಿನ್ನು ಮೈ
ಸಿರಿ ಬರಲುಂಟು ಚಂದ್ರಬಲಮುಂಟು ನಿಶಾಬಲಮೊಂದು ರಾಗದಿಂ
ಬಿರಿವಪ್ಪೋಲೆನೆಸಟ್ಟಿಸಗುತಿರ್ದುವೊ ನೀಲಸರೋಜಮಾಲಿಗಳ್ ೬೭

---

1 ಪ್ರಯೋ (ಅಇಉ) 2 ಗ (ಅಇಉ) 3 ತೋದ್ಯ (ಅಇಉ)
4 ತತ್ಸಮಸಮು (ಎ)

ಎನಗಾರಿರ್ದ ಪರೀರಥಾಂಗಮಿಥುನಕ್ಕೆಂತೊಲ್ಲ[1]ದೊಳ್[1] ನೀಲಪ
ದ್ಮಿನಿಯೆನ್ನಂ ನಗುವಂತು ಮಾಡಿದೆ ಧರಿತ್ರೀನೇತ್ರ ನೋಡೆ[2]ಮ್ನ[2] ಕೇ
ಡನದೇವ್ರೋದಪೆಯೆಂದು ಸಂಕುಚಿತವಕ್ತ್ರಾಸಕ್ತ ಭೃಂಗೀಕಲ
ಧ್ವನಿಯಿಂ ಕೂಗಿಡುವಂತಿರಾಯ್ತು ದಿನಪಂಗಂಭೋಜಿನೀಕುಟ್ಮಲಂ ೬೮

ಮುಗಿವ ಸರೋಜಮಾಲೆಗಮರಲ್ವಸಿತೋತ್ಪಲಮಾಲೆಗಂ ಮನಂ
ತೆಗೆಬಗೆಯಾಗಿ ಸ್ವೈರಿಸದೆ ಷಟ್ಪದಸಂತತಿ ರಾಜಬಾಧೆಯಿಂ
ಸುಗಿವ ನವಪ್ರಸಾದಫಲದಿಂದಗಿ[3]ವಾ[3]ಪ್ತ [4]ಜನ[4]ಕ್ಕೆ ಕೂರ್ಪ ಬಾ
ಧುಗಳಿಡೆಯಾಡುವಂತಿರೆಡೆಯಾಡಿದುವಂಬುರುಹಾಕರಂಗಳೊಳ್ ೬೯

ವ|| ಆಗಳ್

ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗ
ಲ್ಬುವ ದಿವಸಾವಸಾನಸಮಯಕ್ಕೆ ಕನಲ್ದುರಿದೇಟ್ಟಿ ಸಂಜೆ ಪೊ
ತ್ತುವ ತಮಮತ್ತಮಿತ್ತಮಳುರ್ದತ್ತಲೆ ಪೊರ್ದಿದ ಪೋಟಲೊಳ್ ಮಿಡುಂ
ಕುವ [5]ಬೆಳುಗಾವಿ[5]ನಂತಗಲಲಾರದಗಲ್ದುವು ಜಕ್ಕವಕ್ಕಿಗಳ್ ೭೦

ಎರಲಲೆಪಿಂದೆಸಟ್ಮುಸುಪ ನೆಯ್ದಿಲನೋಪಳಿಗೆತ್ತು ಗೆಂಟಱೊಳ್
ಕರೆದುದು ಬಾರಳಾಂ ಕರೆದೊಡಂ ಪ್ರಿಯೆಯೆಂದು ಕನಲ್ದು ಚಂಚುವಂ
ಮುರಿದುದು ಬಂದಡಂಗಿದಳಿಗೆತ್ತು ಬಿದಿರ್ಚೆ ದಳಂಗಳಂ ತೆಱಂ
ದಿರಿದುದು ಜಕ್ಕವಕ್ಕಿ ಮಿಗೆ ಮುಚ್ಚಿಗೆ ಸಂದುದು ಕಾಣದೋಪಳಂ ೭೧

ಗಱಿಯಿಸುವ ತಮಂ ಮೂಡಲ್
ಪೊಱಿಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂ
ಡೆಟಲೆ ಧರೆಗರ್ಧನಾರಿಯ
ತಱಿವಿಡಿದಂತಾಯ್ತು ಗಗನಮಂಡಲಮಿನಿ[6]ಸುಂ[6] ೭೨

ದಿನನಾಥಂ ಪೆಱಪಿಂಗೆ ಪೆತ್ತು ತೆಱಪಂ ಮೆಯ್ವೆರ್ಚೆ ರಾಗಂ ನಿಶಾಂ
ಗನೆಯಿಂ ಮುನ್ನೆ ಮೃಗಾಂಕನೊಳ್ ನೆರೆಯಲೆಂದಾಶಾವಧೂದೌತ್ಯವ
ರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲಚೇಲಾವಗುಂ
ಠನಮಂ ತಾನೆನೆ ದಟ್ಟಮಾಗಿರೆ ತಮಂ ತಳ್ತತ್ತು ದಿಕ್ಪ್ರಾಂತಮಂ ೭೩

---

1 ದಲ್ (ಅಇಉ) 2 ನ್ನ (ಅಇಉ) 3 ದಾ (ಅಇಉ)
4 ಗೃಹ(ಅಇಉ) 5 ಬೆಣೆವಾಲಿ (ಎ) 6 ತುಂ (ಎ)

ಮೃಗಧರಂಗೆ ನಿಶಾ[1]ಸತೀ[1]ವರಮಾಲೆಸೂಡುವ ನೀ[2]ಳದೊ[2]ಳ್
ದಿಗಧಿಪಾಳಿ [3]ಘನಾ[3]ವಳೀನವಪಾಟಕರ್ಮವಿತಾನಮಂ
ನೆಗಪಿದಂತೆಳಮರ್ಬಿನೊಳ್ ಪೊಳೆಪಂ ಪಳಚ್ಚನೆ ತಾಳ್ದಿ ತಾ
ರೆಗೆಗಳಾಯ್ದ ಗೆಪ್ಪೊಯ್ದ ವೋಲಿರೆ [4]ಚೆಂಚ[4]ನಾಯ್ತು ನಭಸ್ಥಲಂ ೭೪

ಉದಯಂಗೆಯ್ವುತ್ಪಲಾಧೀಶ್ವರನನಮರಕಾಂತಾಳಿ ನೀರಾಜನಂ ಮಾ
ಡಿದ ಮಾಣಿಕ್ಯಪ್ರದೀಪಾವಳಿಯ ಬೆಳಗು ತದ್ವಾಮವಾಮೇತರಾಶಾ
ಸುದತೀಪಿಷ್ಟಾತಕಾಕೀರಣಕಪಿಶರಜಃಪುಂಜಮೆಂಬಂತದೇಂ ಪ
ರ್ವಿದುದೋ ಕಂದರ್ಪಯಾತ್ರಾಬಚಳಳನ ಪರಾಗಂ ತದುದ್ಯೋತರಾಗಂ ೭೫

ನೂಂಕಿ ಬರೆ ನುಣ್ಮಲರ್ವೆಳ
ಗಿಂ ಕುತ್ತಿರೆ ತಡಿಸಡಿಲ್ದು ತಮಮುಭ್ರತಟಾ
ಕಂ ಕಣ್ಗೆ ಬಳಸಲಾಯ್ತು ಮೃ
ಗಾಂಕೋದಯಮುಖನಿದಾಘಸಮಯಾಂತರದೊಳ್ ೭೬

ವ॥ ಆಗಳ್ ನಾಗರಿಕಂ ವಿಟವಿದೂಷಕಪೀಠಮರ್ದಕರ್ಗೆ ದೇವಾ ನೀಂ ಚಂದ್ರೋದಯಪ್ರಾಗ್ಭಾವಕ್ಕಮಾನಂತರ್ಯಮಯೂಖಲೇಖೋನ್ಮುಖತೆಗಂ ವಿರಚಿಸಿದ ಪದ್ಯದ್ವಿತಯಮತಿಕೌತುಕಮಾದುವನಂ ಕೇಳಿಮೆಂದಾರಭಟಿಗನುಗತಮಾದ ಗಮಕದಿನಿಂತೆಂದು ಕೇಳಿಸಿದಂ

ತೊರೆದುದು ಚಂದ್ರಕಾಂತಮಣಿ ಕಣ್ದೆಱೆಯುಲ್ ಮಿಡಿಕಿತ್ತು ನಿದ್ರೆಯೊಳ್
ಪೊರೆದ ಚಕೋರಿಕಾಹೃದಯಮರ್ಣವತೀರತರಂಗವುಕ್ಕಲು
ಬ್ಬರಿಸಿದುದುಳ್ಳಿಸಬ್ಬಿಸಕದಿಂ ತನಿಗೆತ್ತುದುವುತ್ಪಲಕ್ಕೆ ಭಾ
ಸುರರುಚಿ ಮುನ್ನೆ ನೆಟ್ಟನೊಗೆಯಲ್ ಬಗೆದಂದೊಡೆ ಚಂದ್ರಮಂಡಲಂ ೭೭

ಗಗನಶ್ರೀಕುಚಭಾರದೊಳ್ ಪೊಳೆವ ಮುಕ್ತಾಲಂಬನಂ ಧ್ವಾಂತದಂ
ತಿಗೆವಾಯ್ದಿಂದು ಮೃಗಾರಿ ಕೋರಿಸಿದುಗುರ್ ತಾವೆಂಬಿನಂ ಉರ್ವಿಯೊಳ್
ಪುಗುವಾಗಳ್ ಪಡೆದೇಂ ಕರ್ದುಂಕಿದುವೊ ಪೊಕ್ಕಾಯ್ದಾಯ್ದು ಚಂಚಚ್ಚಕೋ
ರಿಗಳೆತ್ತಂ ತಿಲತಂಡುಳೀಕೃತನವಜ್ಯೋತ್ಸ್ನಾಂಕುರಾಸಾರಮಂ ೭೮

ವ॥ ಅಂತೋದಲೊಡಂ ತಮತಮಗೆ ಪೆರ್ಚಿ ಪೆಸರಿಟ್ಟು ಪೊಗೞ್ವ ಕಾವ್ಯಕಲಾಭಿಜ್ಞರಂ ಸಾಹಿತ್ಯಸರ್ವಜ್ಞಂ ನಿಲಿಸಿ ತಾದಾತ್ವಿಕಪ್ರಸಂಗಾಂತರಸಿಮಿತ್ತಂ ಸು[5]ಕರ[5]

1 ಪತಿಂ (ಎ) 2 ಡಜಿಶೊ (ಅ ಇ ಉ) 3 ನಖಾ (ಎ)
4 ಬಿಚ್ಚ (ಅ ಇ ಉ) 5 ರತ (ಅ)

ವಿಲಾಸನೆಂಬ ಕವಿಯ ಮೊಗಮುಂ ನೋಡಿ ನೀ ಪೇಳ್ದ ಚಂದ್ರೋದಯವರ್ಣನೆಯೊಳತಿಶ
ಯಮಾದುವನೋದೆಂಬುದುಮಾತಂ ಮಹಾಪ್ರಸಾದಮೆಂದು

ಎಳವೆಱೆ ಮೆಲ್ಲಮೆಲ್ಲನೆಳಸುತ್ತಿರೆ ಮೂಡುವ ಶೀತಭಾನುಮಂ
ಡಳದ ತೃತೀಯಭಾಗವಿಳಿ[1]ಸುತ್ತ್ರೊ[1] ಕಳಾವೃತದೀಪ್ತಿಯೊಳ್ ಜಗ
ದ್ವಳಯದ ಕಣ್ಗಳಂ ಸುಖಸುಧಾರಸದಿಂ ತಣಿಪಲ್ ಮನೋಜಮಂ
ಗಳವಧು ಕಜ್ಜಲಕ್ಕೆ ಕವಿದಿಟ್ಟ ಹಿಮೋಪಲಭಾಂಡಕಾಂಡಮಂ ೭೯

ಬಿಂಬದೊಳಗಿರ್ಪ ಜಿನಪತಿ
ಬಿಂಬಕ್ಕೆಳೆಯಿಂದೆ ಪೆರ್ಚೆ ಕಣ್ಣೆಂಜಲ್ಗಿಂ
ದ್ರಂ ಬಿಗಿದ ಪೊನ್ನಕಾಹಳೆ
ಯೆಂಬಿನಮೆಸೆದಂ ಮೃಗಾಂಕನರ್ಥೋದಯದೊಳ್ ೮೦

ವ|| ಅವನೀವಿಯಚ್ಚವನಸಮಯದೊಳಮರನಿತಂಬಿನಿಯರಾಡುವ ಸಿಂಪಿಣಿ
ಯೊಳೊತ್ತಿದ ಜೀರ್ಕೊಟವಿಗಳಿನೊತ್ತರಿಸಿ ನೂಂಕುವ ಚಂದನವಸುಧಾರೆಯಂತೆಯುಂ
ಗಗನತಟಾಕದೊಳೊಗೆದು ಪೊಳೆವ ಮೀಂಗಳೆಂಬ ಮೀಂಗಳ್ಗೆ ಬಿಂಬಮೆಂಬ ಪೊಂಬಱು
ಗಲ ಕಳಂಕಧೀವರನಡರೆ ಬೀಸಿದ ಜಾಲದಂತೆಯುಂ ಜಗಮುನದಟಲೆವಲರ್ವಿಲ್ಲಬಲ್ಲಹಂಗೆ
ವಸಂತವನಪಾಲಕನಲರ್ಗಣೆಯ ದೊಣೆಯನಗೆವೊಯ್ದಂತೆಯುಂ ಕೆದಱೆ ನಾಂದಿ ಪೊದ
ಱುಗಟ್ಟುವ ಕದಲೆಗದಿರನುರದಿನುರವಣಿಸಿನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲೆ
ವೊಯ್ದು ನಖದಿಂ ನಲಿಗೆದಱೆ ಕೋಡ ಗಱೆಯಿನೀಡಿಱೆದು ಮುಡಿಯಿಂ ಮರಲೆವಾಯ್ದು
ತಿಱುಗದಿರಂ ಮಱೆವಕ್ಕಿಗೆ ನೂಂಕಿ ತನಿಗದಿರನಿನಿಯಂಗೆ ನೀಡಿ ನೆರೆಗದಿರಂ ಧಾರೋಷ್ಣಂ
ಗುಡಿದು ಮನದ ಪಸವೋಡೆ ತನು ತಣಿದು ಕೋಡಿಂ ಕಣ್ಣಾರೆ ನೋಡಿ

ಮದನದವಾಗ್ನಿ ತಪ್ತೆಯರ ಸುಯ್ಯ ನಖಂಪಚಮಾಗಿ ಬರ್ಪ ತ
ಣ್ಗದಿರನೆಲರ್ಚೆ ಚಂಚುವಿನೊಳೊಯ್ಯನರಲ್ದೊಲೆವುತ್ಪಲಾಗ್ರಪ
ತ್ರದೆ ಮೊಗೆದೂಡಿ ಪಾಡಿ ನಲಿವಾಱಿಸಿ ತೋಱಿಸಿ ಸೋಂಕಿ ನೂಂಕಿ ಕೌ
ಮುದಿಯೊಳದೇಂ ಚಕೋರಿ ಹಿಳುಗಾಡಿಸಿದತ್ತೊ ನಿಜಾಗ್ರಶಾಬಮಂ ೮೧

ದಿವಿಜಾಶಾಗಿರಿಕೂಟಕೇಸರಿ ವಿಯನ್ಮಂದಾಕಿನೀಹಂಸೆ ಮಾ
ನವತೀಲೋಚನಬಾಣಚಂದ್ರಿಕೆ ಚಕೋರೀಪಾನಲೀಲಾಮೃತಾ
ಪ್ಲವಕಾಸಾರಮನಂಗಮುಂಗಳವಧೂಟೀದರ್ಪಣಂ ತಾನಿದೆಂ
ಬ ವಿಲಾಸಕ್ಕೆ ನಿವಾಸಮಾಯ್ತುದಯದೊಳ್ ಪೀಯೂಷರುಗ್ಮಂಡಲಂ ೮೨

1 ಸುತ್ತೆ (ಅಇಉ)

ಉದಯೋರ್ವೀಧರಕುಂಕುಮೋದ್ಗಮರಜಂ ಪಾಯ್ದಂತೆ ಕೆಂಪೇಱಿ ಪೂ
ರ್ವದಿಶಾಕಾಂತೆಯ ತೋಳೊಳಿರ್ದರಿಸಿನಂ ತಳ್ತಂತೆ ಪೊಂಬಣ್ಣಮೇ
ಱೆ ದಿವೌಕಃಪ್ಲವದೊಳ್ ಮುಱುಂಕಿ ತೊಳೆದೆತ್ತಿಂದಂತೆ ಬೆಳ್ಪೇಱೆ ತ
ತ್ತ್ರಿವೃಧಾಭ್ಯಾಸಿಯ ಚಿತ್ರದಂತೆ ತಿಳಿದಂ ತಾರಾವಧೂವಲ್ಲಭಂ ೮೩

ಉದಯಂಗೆಯ್ದೊಡೆ ಕಂಡು ಕಾಮನಿದಿರೆಟ್ದಾಲಿಂಗನಂ ಮಾಡಿದಂ
ದದೆ ಚೈತ್ರಂ ತನಗಿತ್ತ ನೀಲಮಣಿಹಾರಂ ಪೇರುರಕ್ಕೇಱಿದಂ
ದದೆ ರಾತ್ರೀಪ್ರಿಯೆ ಸೂೞ್ಗೆವಂದು ಪದಪಿಂ ಪರ್ಯಂಕದೊಳ್ ನೆಮ್ಮಿದಂ
ದದೆ ಕಣ್ಗೀನಮೃತಾಂಜನಂ ಮೆಱೆದುದೋ ಲಕ್ಷ್ಮಂ ಮೃಗೀಲಕ್ಷ್ಮನೊಳ್ ೮೪

ಒಳವೈರಿಯೆಂಬ ಸಾಧಕ
ನಿಳೆಯಂ ಪೊಸಮೂಸೆಮಾಡಿ ಶಶಿಮಂಡಲಮಂ
ಗುಳಿಗೆಯಿಡೆ ತಿಮಿರಕಾಳಿಕೆ
ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ ೮೫

ಅವನೀವಲ್ಲಭೆ ಕೊಂಡ ಬೆಳ್ಪಸದನಂ ಸೀರೇಜಗರ್ಭಂ ವಿಯ
ದ್ಧವಳಾಗಾರದೊಳಿಟ್ಟ ಪಾಲ್ತೊಪ್ಪಿದೆ ಕವ[1]ಲ್ಮಿ[1]ಂಚಿಂ ದಿಗಂತಂ ಮುಱುಂ
ಗುವಿನಂ ಪೂಸಿದ ಶಂಖಮೊಲ್ದುಱಿದರಂ ಪಾದಾರ್ದಿಸಲ್ ಸಾರ್ದು ಕಂ
ತುವಸಂತರ್ ತೆರೆವೇಂಟೆಗಿಟ್ಟ ದುಗುಲಂ ಪರ್ವಿತ್ತು ಚಂದ್ರಾತಪಂ ೮೬

ಕುಸುಮಂ ಗಂಧಾನುಮೇಯಂ ಗಮನಕಮನಹಂಸಾಳಿ ಶಬ್ದಾನುಮೇಯಂ
ರಸನಾಸ್ವಾದಾನುಮೇಯಂ ಮಧು ಮಲಯರುಹಕ್ಷೌಮಕರ್ಪೂರಮುಕ್ತಾ
ವಿಸರಂ ಸ್ಪರ್ಶಾನುಮೇಯಂ ದಿಟಮೆನೆ ಘಟಿತಂಬೆತ್ತ ಬೆಳ್ದಿಂಗಳಂ ಭಾ
ವಿಸೆ ಲೋಕಂ ಚಂದ್ರಕಾಂತೋಪಲದ [2]ಮಯಣ[2]ದೊಳ್ ಮೂಡಿದಂತಿರ್ದುದಾಗಳ್ ೮೭

ವ॥ ಎಂದೋದಿ ಮೆಚ್ಚಿಸುವೆಡೆಯೊಳ್ ಪರಿಹಾಸಕನೆನಗಿದೆತ್ತಣಕುತ್ತಮೀಸರಸಗೋಷ್ಠಿಯೊಳಾನುಮೆಲ್ಲರುಂ ನೋಡಿ ದೇವಾ ತಲೆದೂಗಲ್ ಪಡೆಯೆನಾದಪೆಯಿಂದಿನ ಕೌಮುದೀಮಹೋತ್ಸವದೊಳ್ ಪುರವಿಲಾಸಮಂ ತಾವೆಲ್ಲರ್ ನೋಡುವಟ್ತಿಯಿಂ ನಿಮ್ಮಡಿಗಳಂ

ಕರೆಯಲ್ಕಣ್ಮದೆ ಪೀಠಮರ್ದಕನುಮೆನ್ನಂ ಪಚ್ಚುವಂ ಮತ್ತೆ ನಾ
ಗರಿಕಂ ನೂಂಕಿದಪಂ ವಿಟಂ ಬೆರಲ ಕೊಂಕಿಂ ಸನ್ನೆಗೈದಪ್ಪನೆ
ಲ್ಲರ ಮಾತೇಂ ಭವದಂಘ್ರಿಪಲ್ಲವಮನೀವಾತಾಯನೋಪಾತ್ತಶೀ
ತರುಚಿಪ್ರಾಂಶುಕರಂ ಕರಂ ಪಿಡಿದುವಿನ್ನೀಸಲ್ಗೆಯಂ ಮನ್ನಿಸಿಂ ೮೮

1 ಕ್ಕೆ (ಅ ಇ) 2 ಸಯನ (ಅ ಇ)

ಎಂದು ವಿದೂಷಕನರಸನ
ಮಂದಸ್ಮಿತಲೋಚನಾಂಶು ಮನದನುಮತಿಯಂ
ಮುಂದಿಡೆ ಭೋಂಕನೆ ಕೈಗುಡು
ವಂದದೊಳೆ ಪಸಾದಮೆನುತೆ ಪೊಡೆವಡುತಿರ್ದಂ ೮೯

ವ॥ ಅಂತು ರಾತ್ರೀವಿಹಾರಕ್ಕಭಿಮುಖಂ ಮಾಡಲೊಡಂ

ಧವಳಾಪಾಂಗಮರೀಚಿ ಮಂಡಳಿಸಿ ನಿಂದಂತಿರ್ಪ ಕರ್ಪೂರ ಕ
ರ್ಣವತಂಸಂ ಹರಿಚಂದನಂ ವಿಚಕಿಲಂ ಮುಕ್ತಾಫಲಂ ಕ್ಷೌಮಮೆಂ
ಬವಱಿಂ ಭೂಭುಜನೊಪ್ಪಿದಂ ಮೆಱೆವ ಪೌರಶ್ರೀಯನಿಂತೆಂದು ಬಿ
ನ್ನವಿಸಲ್ ಚಂದ್ರಿಕೆ ಬಂದು ಸಲ್ಗೆವಡೆದೊಲ್ದಾಲಿಂಗನಂಗೈದವೊಲ್ ೯೦

ವ॥ ತದನಂತರಂ

ಪೊಱಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂ
ಪುಱಿಸೆ ವಿಮಾನಮಂ ನಭದೊಳಿಟ್ಟಭಿವೀಕ್ಷಿಸಲಿಂದುಬಿಂಬದಿಂ
ದಿೞಿವಮೃತಾಂಶುಮೂರ್ತಿಯೆನೆ ಸಾಂದ್ರತರೋಜ್ಜ್ವಲ ಚಂದ್ರಶಾಲೆಯಿಂ
ದಿೞಿದು ನರೇಂದ್ರಚಂದ್ರನೊಲವಿಂ ತಳರ್ದಂ ನಿಜರಾಜಗೇಹದಿಂ ೯೧

ಪರಿದೈದಿ ನಗರದೊಳ್ ನಾ
ಗರಕಂರತಕೋವಿದಂ ವಿಟಂ ಪ್ರಹಸನತ
ತ್ಪರನೆನಿಸುವಂ ವಿದೂಷಕ
ನರಸಂ [1]ಅನು[1]ಪೀಠಮರ್ದಕಂ ನಾಯಕರೊಳ್ ೯೨

ಅನುನಾಯಕರೀನಾಲ್ವರು
ಮನುಕೂಲಂ ದಕ್ಷಿಣಂ ಶಠಂ ದುಷ್ಟಂ ನೆ
ಟ್ಟನೆ ನಾಯಕರಿಂತೆಣ್ಬರು
ಮನುಭರ್ತೃಗೆ ಲಲಿತನಾಯಕಂಗೆ ಸಹಾಯರ್ ೯೩

ಅನುಕೂಲಾದಿಗಳೆಂಬ ಮಂದಪವನಂ ಚಂದ್ರಂ ವಸಂತಂ ಮುಗು
ಳ್ದ ನವಾಮ್ರಂ ಪಿಕಕೀರಭೃಂಗಕಳಹಂಸಶ್ರೇಣಿ ಕೈಕೊಂಡು ಬ
ರ್ಪಿನೆಗಂ ಮನ್ಮಥಚಕ್ರವರ್ತಿ ನಡೆದೀಬಂದಪ್ಪನೆಂಬೊಂದದೇ
ನೊಲವಿಂದಂ ಪೊಱಮಟ್ಟು ರಾಜಗೃಹಮಂ ಸಾಹಿತ್ಯರತ್ನಾಕರಂ ೯೪

1 ಷರಿ (೨)

## ಗದ್ಯ

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣ ಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನ
ದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್
ಚಂದ್ರೋದಯವರ್ಣನಂ
ಸಪ್ತಮಾಶ್ವಾಸಂ

# ಅಷ್ಟಮಾಶ್ವಾಸಂ

ಶ್ರೀಯಂ ಕೂರಿಸಿ ವಿಜಯ
ಶ್ರೀಯಂ ತೋಳ್ವೆರಗಿನೊಳ್ ಮನಂಗೊಳಿಸಿ ವಚ
ಶ್ಶ್ರೀಯಂ ಮುಖಸರಸಿರುಹದೊ
ಳೋಯಿಸಿ ನೆಗಳ್ದಂ ವಿನೇಯಜನಮುಖತಿಲಕಂ ೧

ವ|| ಅಂತು ಪೊಱಮಟ್ಟಧಿರಾಜಮಾರ್ಗಂಬಿಡಿದು ನಡೆತಂದು ವಿಪಣಿವೀಥಿಯಿರ್ಕೆಲಂಗಳೊಳ್ ಕಿಕ್ಕಿಱಿಗಿಱಿದ ಕುಸುಮಾಂಗದ ಲೇಪನಾಂಗದ ಕಲ್ಪಲತೆಗಳಂತೆ ನಿಂದ ನೀಱರ ಮನಮಂ ಬೆಲೆಗೊಂಡು ಮಾಱುವ ಮಾಲೆಗಾರ್ತಿಯರ ಘಟ್ಟವಳ್ತಿಯ ರಂಗಪರಿಮಳದೊಳ್ ದಳಂಬಡೆದು ಮುಡುಗಟ್ಟಿ ಪರಿವ ಮಿಾಸಲ್ವಾಸಿಗದೋಗರದಣ್ಪಿನ ಸೌರಭಸಂಗಮದೊಳೀಸುವಂತೆ ವಿಲಾಸದಿಂ ನುಸುಳ್ದುಬರ್ಪಾಗಳ್ ಕಣ್ಗಳಂಗಳಕ್ಕೆ ವಂದ ಕುಡುಮಿಂಚಿನಕುಡಿಯನ್ನಳಪ್ಪ ಚನ್ನೆಯೊರ್ವಳ್

ಗರಗರನಾದ ಬೆಳ್ಪಸದನಂ ಪೊಸಜವ್ವನದೇೞ್ಗೆ ದೇಸೆಯೊಳ್
ಪೊರೆದ ವಿಲಾಸಮೊಪ್ಪೆ ನಡೆತರ್ಪಳನಾನೃಪಕಂತು ಕಂಡು ಕ
ಪ್ಪುರದ ಪುರಂಧ್ರಿ ಮಲ್ಲಿಗೆಯ ಮಾನಿನಿ ಮುತ್ತಿನ ಮುಗ್ಧೆ ಚಿತ್ತ್ರಜಂ
ಕರುವಿಡೆ ಸಂದ ಚಂದನದ ಲೆಪ್ಪದ ಸುಂದರಿಯೆಂದು ನೋಡಿದಂ ೨

ವ|| ಆಕೆಯುಂ ಕಂಡು ನಾಗರಿಕಂ ಈ ನಡೆವ ನುಡಿವ ಚಂದ್ರಕಲೆಯ ಲಾವಣ್ಯಚಂದ್ರಿಕೆಯೊಳೆಮ್ಮ ನಾಯಕರ ನಯನಚಕೋರಿಗಳ್ ಪಾರಣೆವಡೆದು ಪಟುವಾದುವು ಇನ್ನಾವ ಲೇಸುಮಂ ನೋಡಲೊಳವು ನಡೆಯಿಮೆಂದು ಬರೆವರೆ

ಸುರತಸ್ವೇದಲವಾರ್ದ್ರಭಾವಭರಮುಂ ತನ್ನಂದನೋಪಾಂತದೊಳ್
ವಿರಹಾಸಕ್ತವಿಟೀವಿಟಶ್ವಸಿತಕೇಲಾಪೀತಮಾಗುರ್ವರೇ
ಶ್ವರದಿವ್ಯಾಂಗದ ಶೈತ್ಯಸೌರಭಮನಾಂತುತ್ಕೀರಪಾರಾವತ
ಸ್ವರದಿಂ ಬೀೞ್ಪವೊಲಾಯ್ತು ವಾರವನಿತಾಪ್ರಾಗಾರಚಾರಾನಿಲಂ ೩

ವ|| ಅಂತು ಬಂದ ಮಂದಾನಿಲನೋಲಗಕ್ಕಾಲೋಕನದ ನಿಮಿಾಲನಮವಸರಂಗುಡೆ ಸೊಳೆಗೇಱಿಯಂ ಪುಗುತರ್ಪಾಗಳೊಂದು ಸುಧಾಧವಳಭವನಮಣಿಕುಟ್ಟಿಮಪ್ರಘಣಾಂತರದೊಳ್ ಬೆಳ್ದಿಂಗಳ ಬಿತ್ತನಗೆವೊಯ್ದಂತೆ ಮುಗುಳ್ತು ಮೆಱೆವ ಮಾಧವಿಯ ಮಂಡಪದ ಬಳಸಿನೊಳಗೆ ಪಳುಕಿನ ಕುಂಭದೊಳಂ ತಳಿರ ಮೆಲ್ಲೆಸಳ್ಗಳೊಳಂ ಮುಗುಳ

ಲಂಬಣದೊಳಂ ಮುತ್ತಿನ ಮಿಳಿಯೊಳಂ ಬಿತ್ತರಂಬಡೆದ ನವಿಲುಯ್ಯಲ ಪೂವಿನ ತಂಬುಲದ ಕತ್ತುರಿಯ ಕಪ್ಪುರದ ಬೀಯದ ಬಾಯಿನದ ವಿಲಾಸಮಚ್ಚರಿಯಾಗೆ ಪಚ್ಚೆವಡಿಸಿದುಯ್ಯಲ ಮಣೆಯ ಕಡೆಯಂ ಪಿಡಿದು ಚಿತ್ರವಲ್ಲಭನೊತ್ತಿ ಸಾರ್ಚಿ ಮಾಂಗಳಿಕಮನುನ್ಗುಡಿಸೆ ತುಂಗಕುಚಭರಾಲಸಗಮನೆ ನಡೆತಂದು ನಿಂದು ನೋಡಿ

ತುದಿಕೆೊಳಿಸಿರ್ದ ವಾಮಚರಣಂ ಮಣೆಯಂ ಬಲದಂಘ್ರಿ ಮೆಟ್ಟಿ ಮಿಂ
ಚಿದ ತೊಡೆ ರಜ್ಜುವಂ ಪಿಡಿದ ತೋಳ್ ಮೊದಲ್ ಪೊಗರಂ ತುಳುಂಕೆ ನೂಂ
ಕಿದ ಮೊಲೆಯೊಡ್ಡು ಕೊಂಕಿ ನಿಮಿರ್ದೊಳ್ನಡು ಕಂಗೊಳಿಪನ್ನಮುಯ್ಯಲೇ
ಱದಳಮೃತಾಂಶುವಕ್ತ್ರೆ ಕುನಿದೇಱಿಸೆ ಮನ್ಮಥನಿಕ್ಷುಚಾಪಮಂ ೪

ವ॥ ಮತ್ತೊಂದೆಡೆಯೊಳೊಲೆವ ಭರದೊಳ್ ಮಲೆವ ಮುಖಕ್ಕೆ ಚಂದ್ರಮಂಡಲಮುಮಂ ಹಾರದ ಪೊಳಪಿಂಗೆ ತಾರಾವಳಿಯುಮಂ ನಱುಸುಯ್ಯ ಸೌರಭಕ್ಕೆ ಕವ್ವರೆಗೊಂಡು ಬೆಂಬಿಡದೆ ತೂಱುವ ತುಂಬಿಯ ತುಱುಗಲಂಬರದೊಳುಱದು ಬಂಬಲ್ಗೊಳ್ವಂತೆಯುಂ ಕೇಱುಪಾಱು ನೀಡುಮಾಡಿ ಬೆಮರ್ತ ಚಿತ್ರೇಶ್ವರಿಯ ಗಾಡಿಯಂ ನೋಡಿ ತೆಂಬೆಲರ ಸೋಂಕು ಬೆಂಬಱಿಗೊಳ್ವಂತು ಮೆಲ್ಲಮೆಲ್ಲನೊಲೆದು

ರತಿಯುಂ ಕಾಮನುಮಂಬರೇಚರವಿಲಾಸಶ್ರೀಯನಾಳ್ವಂತೆ ಹೃ
ತ್ಪ್ರೀತಿ ಕುಳ್ಳಿರ್ದೆಡೆಗೊಟ್ಟ ಬಟ್ಟದೊಡೆಯಂ ತಳ್ತೇಱಿ ನಲ್ಲಳ್ ಪ್ರಭಾ
ಪ್ಲುತ[1]ನೀತಂ[1] ತೆರೆಸುತ್ತೆ ಪೀಠಮಣಿಮಂಚಂ ಚೆಲ್ವನಾದುಯ್ಯಲಂ
ರತರಾಗಾಮೃತವಾರ್ಧಿಯೊಳ್ ಮರಲೆ ಬರ್ದಿಱಸಾಡುವಂತಾಡಿದಳ್ ೫

ವ॥ ಮತ್ತಮೊಂದು ಖೇಲನವಿಲಾಸವಾಸಾಂಗಣದೊಳೊರ್ವಳ್

ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತೆಂಗಾಳಿಯಂ ಜೋಲ್ದ ಪೂ
ಮುಡಿಯಿಂ ಝೋಂಪಿಸುವಂತೆ ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ದಾ
ಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುರ್ಗಿ ನೂಂಕಲ್ಕೆ ಧೀಂ
ಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾವನಿಂ ಹುಯ್ಯಲಂ ೬

ವ॥ ಅದಲ್ಲದೆಯುಮಚ್ಚರಿಯರ್ಗಚ್ಚರಿಯನೊಡರ್ಚುವ ಪೊಚ್ಚಪೊಸಜವ್ವನದ ಚ್ಚಱಯದೊರ್ವಳ್

1 ನೆತ್ತಂ (ಅ) ನೇತ್ರಂ (ಸೂ ಸು)

ಸಿರಿಯ ವಿಲಾಸಮಂ ಶಚಿಯ ಸಂಪದಮಂ ರತಿಯೊಂದು ರಾಗಮಂ
ಗಿರಿಜೆಯ ಗಾಡಿಯಂ ಮದನ ಕೆಳ್ಕೆಳಸುತ್ತಿರೆ [1]ಕೇಳ್ದೆನಿಲ್ಲ ಮೈ[1]
ಸಿರಿಯೊಳಕೊಂಡೆನೇಂ ಕಱಿಯ ಚಂದ್ರಮುಚಂದ್ರಿಕೆ ಚೈತ್ರೆಯೆಂದು ಪೀ
ವರಕುಚೆ ತೋರಣಂನುಗುಬ್ಬು ಗೆಲ್ದಪಳೆಂಬಿನಮುಯ್ಯಲಾಡಿದಳ್ ೭

ವ || ಅಂತು ಪಾಡುವಾಡುವುಯ್ಯಲ ತೂಕಂ ಕೂಡೆ ತಲೆದೂಕಮನೊಡರ್ಚೆ ಮೆಚ್ಚುವೆಡೆಯೊಳ್ ವಿದೂಷಕಂ ನಾಗರಿಕಾದಿಗಳ್ಗೆ ನಿಮ್ಮ ಬಱುಮೆಚ್ಚಿನೊಳಿನಗೆ ಫಲಮಾಗದೀ ನೀಱೆಯರ ತೊಡೆಯ ಮೇಲೆನ್ನುಮನೇಱಿಸಿದೊಡಾಂ ಮೆಚ್ಚುವೆನೆನೆ ದುಷ್ಟನಾಯಕರಿಂ ಬಱಿಕೆ ನಿನ್ನನಾಕೆಗಳ ಕೂರ್ಪ ಕೋರಡಿಗರೇಱಿಸಲುಯ್ಯಲಾಡುವೆಯೆಂದು ನಗಿಸುತ್ತುಂ ನಡೆಯೆ ಮುಂದೊಂದು ಮೃದ್ವೀಕಾಲತೆಯ ಮಂಟಪದ ನಡುವೆ ಚಂದ್ರಿಕೆಯ ಚಂಪೆಯುಮನೆತ್ತಿದಂತೆ ಸೊದೆವಟ್ಟಿಯದ ಲೋವೆಯ ಮುತ್ತಿನ ಲಂಬಣದ ಮಲಂಗು ಭಂಗಿವಡೆದ ಕುಸುಮದೆಸಟಿ ಮಸೂರಿಕೆಯ ಮೇಲೆ ಗೊಟ್ಟಿಗಾಯಣಿಯರ ಠಾಯೆಗಳ್ಗೆ ತಲೆದೂಗುವ ನೆವದಿಂ ಕೊಡಂಕೆಯೊಳ್ ಪಲತುಡುಂಕಲಱಿಯದ ಪಸುಳೆದುಂಬಿಗೆ ಕನ್ನವುರದ ಚೆನ್ನೆಯ್ದಿಲ ಮಕರಂದರಸಮಂ ಸಾರ್ಚುವಂತೆಯುಂ ಕೆಂದಣದಿನಳೆವ ಕಂದುಕಮಂ ಕಂಡು ಪುರ್ಬು ಪೊಡರೆ ನೋಡುವ ನೆವದಿಂ ಮಣಿಮಂಟಪಕ್ಕೆ ನಿಕಾರವಟ್ಟೆಯ ಚಂದ್ರೋದಯಮಂ ಸಂದಿಸುವಂತೆಯುಂ ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ರೋಡಗರನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ವೆಳಗಿಂಗೆ ತಕ್ಕುಗುಡುವಂತೆಯುಂ ಕೋಮಳಾಂಗುಳಿಜಾಳಕಂ ಮೆಱಿಯೆ ಕೇದಗೆಯ ಗಱಿಯ ತೀಡುವ ನೆವದಿಂ ಸೆಳ್ಳುಗುರ್ಗಳ ಬಳ್ಳಿವೆಳಗಿಂಗೆ ಚಂದ್ರಕಳೆಯ ಕವಳಿಗೆಯನಡಪುಗುಡುವಂತೆಯುಂ ಹಾವದ ಭಾವದ ವಿಲಾಸದ ವಿಭ್ರಮದ ದೇಸೆ ಮಾಸರವಾಗೆ

ಕಡೆಗಣ್ ನುಣ್ಬೆಳಗಂ ಮಸಾರಿಸುವಿನಂ ಬೆಳ್ದಿಂಗಳಂ ಜೋಲ್ದ ಪೂ
ಮುಡಿ ಮಂದಾನಿಳನಂ ದಳಂಗೊಳಿಪಿನಂ ಬಿಂಬಾಧರಚ್ಛಾಯೆ ಪೊಂ
ಗೊಡನಂ ಗೆಲ್ದ ಕುಚಕ್ಕೆ ಮಾಣಿಕದ ಪಟ್ಟಂಗಟ್ಟುವನ್ನಂ ತೊದ
ಳ್ನುಡಿ ವೀಣಾಧ್ವನಿಗೊಯ್ಯರಂಗುಡಿವಿನಂ ಕುಳ್ಳಿರ್ದ ತನ್ವಂಗಿಯಂ ೮

ವ || ಕಂಡು ನಾಗರಿಕನರಸಂಗೆ ತೋಱುತ್ತುಮನುಕೂಲನಾಯಕಂಗೀ ಪದಾರ್ಥಂ ನೆಟ್ಟನನುಭವಿಗಳ್ಗನುಭವನೀಯಂ ನಮ್ಮ ದೇವನಂಗಭೋಗಪರಿಕರಕ್ಕೆ ದೇವೇಂದ್ರಂ ನಿಚ್ಚನಿಚ್ಚಮಟ್ಟುವಚ್ಚರಗಣಿಕೆಯರೊಳುಮಿನಿತಚ್ಚರಿಯ ಚೆಲ್ವಂ ಕಾಣೆನೆಂದು ಮೆಚ್ಚುತ್ತುಂ ಪೋಗೆ ಮತ್ತೊಂದೆಡೆಯೊಳ್ ವಿದಗ್ಧವಿಟನೊರ್ವಂ ತನ್ನ ತೋಳ್ಗೊಳೆ ಬಳೆದು ಮುಳಿವ ತಿಳಿವ ಸೂಳೆತನದ ತೋಳುಪಲ್ಲಟಮನಱಿಯದ ಕಾದಲಳ್ಗೆ ತನ್ನ ಮಾಡಿದ ತಪ್ಪು ತನ್ನಂ ನೋಯಿಸೆ ನಾನೆ ತಿಳಿಪಲೆಂದು

1 ಕೇಳ್ದೆನಲ್ಲರಮೆಯ್ (ಇಲು) ಕದ್ದನಿಲ್ಲ ಮೈ (ಸೂ ಸು)

ನುಡಿದಂ ದೈನ್ಯದ ಮಾತನಾತನಿದಿರೆಟ್ಟಿದ್ದಳ್ ಮೋನದಿಂ ಮುಗ್ಧೆ ಕಾ
ಲ್ವಿಡಿದಂ ವಲ್ಲಭನೋಪಳೆಱಿ್ದುದೆದು ಪೋಗಲ್ಕೀಱಿದಳ್ ಮತ್ತವಂ
ಪಿಡಿದಾತ್ಮೇಶ್ವರನಿಕ್ಕಿದಂ ಕುಚದೊಳೊಂದಂ ಹಾರಮಂ ಕಾದಲಳ್
ನಡುಗುತ್ತೀಕ್ಕಸರಕ್ಕೆ ತಾಂ ದುಸರಮಂ ಬಾಷ್ಪಾಂಬುವಿಂದಿಕ್ಕಿದಳ್ ೯

ವ॥ ಆಗಳಾಕೆಯ ಮೇಲುದೋಸರಿಸೆ ಮೊಗವಡಂಗಳೆದ ಮದನಮಾತಂಗ ಕುಂಭಯುಗಳದಂತಿರ್ದ ನೆಲೆಮೊಲೆಯಂ ಕಂಡು ಭರದ ಜವ್ವನದ ಸುಖಪಾಟವದ ಕುಱು ಪನೀಕೆಯೊಳ್ ಕಾಣಲಾದುದೆನುತುಮುರಸಂ ಕೆಳಗೆಳ ದುಷ್ಟನಾಯಕಂಗೆ ವಿಟನಿಂತೆಂದಂ

ಬಡನಡುವೆಂಬಿದಂ ಮುರಿಯವೇ ಭರದಿಂ ನಳಿತೋಳಮೂಲವಂ
ಕೆಡಿಸವೆ ತಮ್ಮೊಳಿಟ್ಟಣಿಸಿ ಮಣ್ಮೊಱಿಯಾಗವೆ ವಕ್ತ್ರಪಂಕಜಂ
ಸೆಡೆದು ಮರಲ್ವಿನಂ ಚಿಬುಕ ಕಂದಮನೆತ್ತವೆ ಮಧ್ಯಲಿಂಗಮಿಾ
ಗಡುವಿನ ಕರ್ಪುರಕ್ಕೆವಣಿಯಾಗದೊಡೀಕೆಯ ಕರ್ಕಶಸ್ತನಂ ೧೦

ವ॥ ಎನೆ ವಿದೂಷಕನೀದಿವ್ಯಲಿಂಗಸ್ಥಾನಕ್ಕೆ ನೀನುಮಾತನುಂ ಜಡೆಗಟ್ಟ ಮಡವರಾಗಿಮೆಂದು ನಗಿಸುತ್ತುಂ ನಡೆಯೆ ಮತ್ತೊಂದೆಡೆಯೊಳೊರ್ವಳ್ ಮುನಿಡಿನಿ ಯನಂ ತಿಳಿಪಲ್ ಕೆಳದಿಯಂ ನಂಬದೆ ತೆಂಬೆಲರ್ಗೆ ಪೂಂಬಳಿಯಂ ಬಱಿಯಟ್ಟುವಂತೆ ತನ್ನ ತಂಗಿಯನೆ ಬಱಿಯಟ್ಟೆ ತಡೆದುಬಂದುದನೆಸ್ತೈರಿಸಲಾಱದಳ್ಕಱಿಂ ಮಿಱಿದಿಂತೆಂದಳ್

ಬೀಸರಮಾಯ್ತು ಮೆಯ್ಯ ಬೆಮರಿಂ ಘುಸೃಣಚ್ಛವಿ ಸುಯ್ಯಗಾಡಿಯಿಂ
ಸೂಸಿದುವೊಳ್ಗುರುಳ್ ಮಿಡಿದು ಪಾಯ್ದುಪುದಳ್ಪೆರ್ದೆ ಬತ್ತೆ ತೊಂಡೆವಾಯ್
ಬಾಸರವರ್ಣಮಾಯ್ತುಱಿಯುತುಂ ಪಱಿಗಂಜದ ಪಾಪಿಯಲ್ಲಿಗೇ
ಕೀ ಸುಕುಮಾರಿಯಂ ಕಳುಪಿದೆಂ ಸಖಿ ಪೋಗಿ ಬಱಿಲ್ದಱಿಕ್ಕಟಾ ೧೧

ವ॥ ಅದಂ ಕಂಡೀಕೆ ತನ್ನಮರುಳಂ ಮುಚ್ಚಿ ನುಡಿದೊಡಂ ರಚ್ಚೆಗೆ ಬಿರ್ದುದೆಂದ ರಸನನುಕೂಲಾದಿಗಳೊಳ್ ನುಡಿಯುತ್ತುಂ ನಡೆಯೆ ಮತ್ತೊಂದೆಡೆಯೊಳ್ ಕೂರಿಸಿ ಕೂರ್ತು ಕುಟಿಲವಿಟನೊರ್ವಂ ಮುಳಿದ ನಲ್ಲಳನೆಲ್ಲಾತೆಱದಿಂ ತಿಳಿಪಲಾಱದೆ ಕೆಳದಿಯುಂ ಭೇದಿಸಿಕೊಂಡೊಳಪುಗಲ್ಪೊರ್ದಿರ್ಪಿನಮಾಕೆ ಮಾನವತಿಗಿಂತೆಂದಳ್

ಮುಳಿಯಲ್ವೇಡೆನ್ನನೇ ನೀಟ್ಕಲಿಸದೆ ತಿಳಿಯೆಂದೆನ್ನನೇ ಬಾ[1]ರ[1]ನೇ ಮೇಣ್
ತಿಳಿಪಲ್ ಬೋಳೈಸನೇ ಕಾಲ್ವಿಡಿಯನೆ [2]ಪಿ[2]ಡಿದೆಟ್ಟಿಪ್ಪಿಕೊಂಡಾಗ[3]ಳ್
ಕೆಳದೀ ನೀಂ ಬಲ್ಲೆಯೆಂತೆಂದನುವಿಸಿದಪೆ ಬೇಸತ್ತೆ ನಾಂ ನಲ್ಲನೇಕೆ
ನ್ನೊಳಗಪ್ಪಂ ನೀನು[4]ಮಿಾಗಳ್[4] ಸುಱಿವ ಮದನನುಂ ಬಲ್ಲಿರಾವೆ[illegible]ಲ್ಲಿಂ ೧೨

1 ರೆ (ಅಇಉ) 2 ಪಿ (ಅಇಉ) 3 ದೀ (ಅಇಉ)
4 ಮಾನುಂ (ಅಇಉ)

ವ|| ಎಂದು ನುಡಿನುಡಿದು ಬೇಸಱಿಸಿದೊಡಾಕೆಯಳ್ಕಿಬಳ್ಕಿ ಬಳ್ಕನೆ ಪೋಗಿ ಮತ್ತಮಿಂತೆಂದಳ್

ಮುನಿಸಂ ಮೇಲ್ವೋಱಿಸೆಂ ಕಂಡೊಡೆ ಕರಕರಿಸೆಂ ಪೊಯ್ದೊಡಂ ಬಯ್ಯನೇನೆಂ
ದೊನದಂ ಮಾರ್ಕೊಳ್ಳೆನೀ ಸಾವಿನ ಸವಿಯಱಿದೇಂ ಸಾಲದೇ ತಂದು ಕೂಡಾ
ತನನಾತಂಗೀವ ಮುಯ್ಯಂ ನಿನಗೆ ಕೊಡುವೆನೇಟಿಕ್ಕ ಪೋಗೆಂಬುದುಂ ಭೋಂ
ಕನೆ ಬಂ[1]ದಂ ತಳ್ಪಿ[1]ದಂ ಚುಂಬಿಸಿದನೊಲಿದು ಕೇಳುತ್ತಲಿರ್ದಾತ್ಮನಾಥಂ ೧೩

ವ|| ಅದಂ ಕಂಡರಸಂಗನುಕೂಲನಾಯಕಂ ಈ ಪ್ರಣಯಪ್ರಕಾರಕ್ಕೆ ಸಹ ಚರಿಪಡೆವ ಸಂವಿಧಾನಂ ಸರಸಮಾದುದೆಂದು ಮೆಚ್ಚುತ್ತುಂ ಪೋಗೆ ಮುಂದೊಂದು ಸೌಧಶಾಲೆಯ ಮತ್ತವಾರಣದೊಳೊತ್ತೆಗೆ ಕುಳ್ಳಿರ್ದೊಡನೆಯ ಸೂ[2]ಳೆ[2]ಗೆ ತನ್ನ ತಂಗಿಯ ಬೇಳಾದ ಗಾಳುತನಮನಿಂತೆಂದಳ್

ಕುರುಳೊಳ್ ಕೊಂಕಿದ ಭಂಗಿಯಂ ಸಮಱ ವಕ್ಷೋಜಂಗಳೊಳ್ ಚಿತ್ರಮಂ
ಬರೆದೊಪ್ಪುತ್ತಿರೆ ಪಚ್ಚೆಮಾಲೆ ಮುಡಿಪಿಂಗೊಲ್ದಿಕ್ಕೆ ಮುಂಗೈಗೆ ಬೊ
ಪ್ಪರವಂ ಮುಟ್ಟೆ ಮುಸುಂಕಿ ದಂತವಲಯಂ ತಳ್ತೊತ್ತಿದಳ್ ಬೇಟಮಂ
ಕರೆದಳ್ ಕೂರ್ತು ಬೊಜಂಗನೊಲ್ಲದುಱಿದಂ ನೋಡಕ್ಕ ಸೌಭಾಗ್ಯಮಂ ೧೪

ವ|| ಅದಲ್ಲದೆಯುಮೊಲ್ವ ಬೊಜಗನುಱಿದುನ್ಮಳದಿನೊತ್ತೆಗೆ ಮೆಯ್ಯೊಡ್ಡಲಾಱದೆ ನೆತ್ತದ ನೆವದಿಂ ಪೊತ್ತುಗಳೆವ ಮಗಳ್ಗೆ ಕುಂಟಣಿಯೊರ್ವಳಿಂತೆಂದಳ್

ನೆತ್ತದ ಸಾರಿಯಂತೆ ಮೊಲೆ ಮೂಡಲೊಡಂ ಗುಣವೇಱ ಲಜ್ಜೆನಾ
ಣ್ಪತ್ತುವು ಗಾಳುಗಣ್ಬರಿದು ವಾಸೆಯ[3]ಪಾ[3]ಸಗೆಯಂತೆ ಬೇಡಳೊಂ
ದೊತ್ತೆಯನಿಲ್ಲ ಪೆಣ್ತನಕೆ ಪಾವುಗೆಯುಂ ಗಡಿಗೆಟ್ಟ ರೇಖೆಗಳ್
ಪತ್ತಿದುವಾದೊಡಂ ಬಱಿಯ ಸೋಲಮೆ ನೋಡಿರೆ ಮೂಲನಾಟಮಂ ೧೫

ವ|| ಅದಂ ಕೇಳ್ದು ನಾಗರಿಕನರಸಿನೊಳ್ ಮುನ್ನೆ ತಂಗಿಯುಂ ಚುನ್ನವಾಡಿದಕ್ಕನ ವಕ್ರ(ೋ)ಕ್ತಿಗೆ ಬಱಿಕೆ ಮಗಳಂ ನುಡಿದ ಕುಂಟಣಿಯ ಕೊಂಕುಸಂಗತಿವಡೆದು ದೆನುತುಂ ಬರೆ ತ್ತುತ್ತೊರ್ವಳ್ಗಿರವೇಟಗಾರ್ತಿ ಕಲಹದೊಳಿರ್ದ ಬೊಜಗನನೋಲಗಕ್ಕಲಂಕರಿಸಿ ಕಳಿಪಿ ಚ(ಲ)ವಿದುತ್ತವಳತನಮಂ ತನ್ನ ಮನದನ್ನಳಪ್ಪ ಕೆಳದಿಗಿಂತೆಂದಳ್

1 ದಂತಪ್ಪಿ (ಸೂ) 2 ಳ್ಗೆ (ಅ) 3 ವಾ (ಅಇಉ)

ನನೆಯಾಗಿರ್ದಾಂ ಮನೋನಾಥನ ಸಿರಿಮುಡಿಯೊಳ್ ವಕ್ಷದೊಳ್ ಹಾರಮಾಗಿ
ರ್ದು ನಿತಂಬಾಭಾಗದೊಳ್ ಪಂಟಿಸಿದ ದುಗುಲಮಾಗಿರ್ದು ಸರ್ವಾಂಗದೊಳ್ ಚಂ
ದನದಣ್ಪಾಗಿರ್ದು ಬಿಂಬಾಧರದೊಳರುಣಿಮಚ್ಛಾಯೆಯಾಗಿರ್ದು ಕಾಯಲ್
ನೆನೆವೇಂ ನೋಡಕ್ಕೆ ತಳ್ತಪ್ಪಿದೊಡೆ ಪೆಱರ ಕಣ್ಣೇಱುನಾಶಂಕೆಯಿಂದಂ ೧೬

ವ|| ಆ ನುಡಿಗನುಕೂಲನಾಯಕಂ ದಕ್ಷಿಣನಾಯಕಂಗೆ ತನ್ನೊಲವಿನ ಚೆಲ್ವು ಮನೀಕೆ ಚೆಲ್ವನಾಗೆ ನುಡಿದಳೆಂದು ಪೊಗೞುತ್ತಿರ್ಪನ್ನೆಗಮೆಂದುಮಿಲ್ಲದ ತಪ್ಪನಂದೇ ಮಾಡಿ ನೊಂದ ಮನದ ಕಂದಂ ಕಳೆಯಲೆಂದು ಸೂರುಳ್ತು ಕಾಲ್ವಿಡಿವ ಕಾದಲಂಗಟಿಲ್ದು

ಒಡಲುಂ ಜೀವಮುಮೊಂದಿದಂತಿರಲು ಕಂಪುಂ ಪೂವರಲ್ದಂತಿರೋ
ತೊಡಗೂಟಂ ಸಮಸಂದ ನಮ್ಮೊಳಗೆ ತಪ್ಪಂ ಮಾಳ್ಪ ನಿನ್ನೊಂದು [1]ಬಾ
ಯ್ವಿಡುವೀನಾದಮಿದೈದದೇ[1] ಕುಟಿಲ ಸೂರುಳ್ ನಲ್ಮೆಯೇ ನಲ್ಮೆಯು
ಳ್ಳೊಡದೇಕಪ್ಪುದು ವೀಣೆಯುಂ ಪಱಿಯೆ ಪಾಡುಂ ತೀರ್ದುದಿಂ ಸಾಲದೇ ೧೭

ವ|| ಅದಂ ಕೇಳ್ದು ವಿದೂಷಕಂ ಕೆಟ್ಟೆನಿನಿತು ನುಡಿವಾಕೆಯಾತನಂ ಬಿಡದೆ ಮಾಣಳೆನೆ ಕುಟಿಲನಾಯಕನೆಲೆ ಛಾಂದಸ ಬಿಡುವೊಡಿನಿತು ಸುಡುನುಡಿಯೇಕೆ ತುಪ್ಪೇಱಿದೊಲವಿಂಗೆ ತಪ್ಪುಕರಸಾಣೆ ಮತ್ತೆ ಪೊಸತಪ್ಪುದನಱಿಯೆ ನಿನಗಿದು ಪೊಸ ತೆಂದುಸಿರುತ್ತುಂ ಪೋಗೆ ಮತ್ತೊರ್ವಳ್ ತನ್ನನೊಲಿಸಿ ವ್ಯೆದೆಗೆದು ಬಲಿದು ಕಾಡುವ ವಿಟನ ಕಾಟಮಾಟ ವಿಟಂಬರಿಸೆ ಕೂಟದೊಳಿರ್ದಾಕೆಯಿಂತೆಂದಳ್

ಆನೆರಡಿಲ್ಲದೊಲ್ವ ತೆಱದಿಂದಿನಿಯಂ ಕಡುಗೂರ್ಪನಾದನಿ
ನ್ನೇನೆನಗೆಂಬವೊಲ್ ನೆಱೆದು ಕೂಸಿ ಬಾರದೆ ಸುಟ್ಟಪಂ ಮನೋ
ಜಾನಲನಿಂದೆ ಬೆಂದ ವಿಧಿ ಪೆಣ್ಣನೆ ಮಾಡಿದನೆನ್ನ ನಲ್ಲನಂ
ತಾನವನಾದೊಡೆನ್ನೊಲಿಸಿ ಕಾಡುವನೋ ತರಳಾಯತೇಕ್ಷಣೇ ೧೮

ವ|| ಆ ಪ್ರಣಯಮುಗ್ಧೆಯ ಮುಗ್ಧಾವಿಲಾಪನಕ್ಕೆ ಮೆಚ್ಚುತ್ತುಂ ಪೋಗೆ ಮತ್ತೊರ್ವಳ್ ನೆರೆಮನೆಯ ಮಱಿಸೂಳೆಯ ಸೊಬಗಿಂಗಟಿಲ್ದು ತನ್ನಂತೆ ಪಡಪಡುಗಿ ಗಡಣಕ್ಕೆ ಬಂದ ಹಡಣಿಗಿತ್ತಿ ಸೂಳೆಗಿಂತೆಂದಳ್

ಮಾಮರ್ಗಿಲಾಡದಿಪ್ಪುದು ಬೊಜಂಗರ ಸಂದಣಿ ಪಟ್ಟೆತಟ್ಟೆಕಾ
ಕರ್ಮದ ರತ್ನಭೂಷಣದ ಕಾಂತಿ ತಳಿರ್ತಪುದಿಂತು ಮೂಲನೀ
ಪೆರ್ಮೆಗೆ ನೋಂತಳೀಹರೆಯಮಿಾಪಡಪೀಸೊಬಗೀವಿಳಾಸಮೇಂ
ಕಾರ್ಮಟಿಯೊಳ್ ಬಸಂತನಿವಳಂಗಳದೊಳ್ ನೆಲೆಗೊಂಡುದಕ್ಕುಮೇಂ ೧೯

---

1 ಸೈತಿಡುತಿರ್ಪಾನಿನಿತೆಯ್ದದೇಂ (ಸೂ)

ವ॥ ಅಂತು ಜಕ್ಕಂಜರಿವ ಕಜ್ಜಮಂ ಕೇಳ್ದು

ಆ ಮನೆಯ ಕೇಳ್ದ ಬೊಜಗರ
ನೀಮನೆಯೊಳ್ ಕಾಣ್ಬೊಡೆಂತು ಸೈರಿಸುವಳಿವಳ್
ಕೋಮಲೆ ಮುಱುಕಿಸಿದ ಮುಖಂ
ತಾಮರಸಂ ವೀತಜಾತಿಕಾಲೌಚಿತ್ಯಂ ೨೦

ವ॥ ಎಂದು ವಿಟಂ ನಾಗರಿಕನೊಳ್ ನುಡಿಯುತ್ತುಂ ನಡೆಯೆ ಮತ್ತೊರ್ವಳ್ ಕಾರ್ಯಾಂತರದೆ ಬೇರ್ಸಲೆವೋದ ನಲ್ಲನ ಪಿಂಬಡಿಯೊಳ್ ಪಂಬಲಿಸುತಿರ್ದ ಬಿಂಬಫಲ ದಶನವಸನೆ

ಅರಲಂಬಿಂಗಱಸನ್ನೆದೋಱುವನನಂಗಂ ಚಂ[1]ದ್ರನುಂ[1] ಕೂಂಕುವಂ
ಕರದಿಂ ತೆಂಬೆಲರೆಂಬನಡ್ಡಸುಳಿವಂ ಚೈತ್ರಂ ಪಿಕಾರಾವದಿಂ
ಕರೆವಂ ನಲ್ಲನಗಲ್ದೊಡಿನ್ನಗಿದು ತಾವೇಗೆಯ್ವೊಡಂ ಪಲ್ಲವಾ
ಧರೆ ಕೇಳಂಜುವಳಲ್ಲೆನೀಹದಿರನೋಪಂ ಕಾಣ್ಬುಗ್ವೆಂದಂಜುವೆಂ ೨೧

ವ॥ ಆಕೆಯೆರಡಱಯದೊಲವಂ ಮನದೆಗೊಳುತ್ತುಂ ಬರೆ ಮತ್ತೊರ್ವಳುಱುವ ವಲ್ಲಭನ ಸುಳಿವಂ ಬೀದಿಯೊಳ್ ಕಾಣ್ಬಾಸೆಯಿಂ ಬರುತುಮಿರ್ದು

ನೆವದಿಂ ಕಾಯ್ದು ಕನಲ್ದು ಪೋದಿನಿಯನಂ ಕಣ್ಮುಟ್ಟೆನೊಳ್ ಕಂಡು ಕೈ
ರವಪತ್ರಾಯತನೇತ್ರೆ ಕೀಲಿಸಿದವೊಲ್ ಕೊಲ್ಸೇಡುಗೊಂಡಳ್ ಚಳ
ತ್ಪವನಾಪಾತಪತಾಕೆವೊಲ್ ನಡುಗಿದಳ್ ಘರ್ಮಾಂಬುವಿಂ ತೇಂಕಿದಳ್
ನವಲಜ್ಜಾರಸದೊಳ್ ಮುಳುಂಕಿದಳನಂಗಸ್ರೋತದೊಳ್ ಕೂಡಿದಳ್ ೨೨

ವ॥ ಮತ್ತಮೊರ್ವಳ್ ಚಿತ್ರಪ್ರಿಯಂಗೆ ಮಾತುಮಾತಿನೊಳ್ ಮುನಿದು ವಿರಹ ದುರಿಯ ಸೆಱಂಗು ಪೊಡೆದುದ್ದೀಪನವಸ್ತುಗಳ ವೈಪರೀತ್ಯಕ್ಕಗಿದು ಕೆಳದಿಗಿಂತೆಂದಳ್

ಮದನನ ಕೂಡೆ [2]ಕಾಯ್ದಪುದದೇ[2]ಕೆಗೆ ಕಾಯ್ದಪುವೆನ್ನ ಕೂಡಿ ಪಾ
ಡಿದ ಮಱಿದುಂಬಿಯೆನ್ನೆಸೆವ ಮೇಳದ ಕೋಗಿಲೆಯೆನ್ನ ಕೆಯ್ಯೊಳೋ
ದಿದ ಗಿಳಿಯೆನ್ನ ಹಿಂದೆ ನಡೆಪಾಡಿದ ಹಂಸಿಗಳಿಂತಿವಕ್ಕೆ ತ
ಕ್ಕುದನುಸಿ[3]ರ್ದಪ್ಪೆ[3]ನೆನ್ನಿನಿಯನಂ ಕರೆ ನೀಂ ತಿಳಿ ನೀಂ ತಳೋದರೀ ೨೩

ವ॥ ಅದಂ ಕಂಡು ಮುಂದಱಯದ ಮುಗ್ಧೆಯೆಂದುದಕ್ಕೆ ನಗುತ್ತುಂ ನಡೆದು ಮತ್ತೊಂದು ಮನೆಯೊಳ್

---

1 ದುವಂ (ಅ) 2 ತಾಮುಮೆನಗೀ (ಅಇಉ) 3 ರ್ದೆನ್ನ (ಅಇಉ)

ಮನೆವಾೞ್ಸೆಲ್ವುದು ಕಾಮಧೇನು ಕಱೆದಂತೊಲ್ದಿಚ್ಛೆಯಿಂ ಬಿಚ್ಚತಂ
ಮನೆವಾೞ್ಸೆಲ್ವುದು ಕಾಮದೇವನಳಿಯಂಬೊಕ್ಕಂತೆ ಸನ್ಮಾನದಿಂ
ಮನೆಯುಂ ಮಕ್ಕಳುಮೊಪ್ಪುತಿರ್ಪುವು ಬಸಂತಂ ಭಾವನಾದಂತೆ ಸ
ಜ್ಜನಚಿಂತಾಮಣಿಯಂ ಮಗಳ್ ಪಡೆದಳೀ ಸೌಭಾಗ್ಯಮಂ ಭಾಗ್ಯಮಂ ೨೪

ವ॥ ಎಂದೊಡನೆಯ ಕುಂಟಣಿಯೊರ್ವಳ್ ತನ್ನ ಮಗಳ ಸೊಬಗಿನ ಸೊಂಪಿನ ಪಡೆಪಾಳಿತನಮನೆ ನುಡಿವುದುಂ ಕೇಳ್ದು ವಿಟನಿಂತೆಂದಂ—ಪಸವೋಡಿದ ಹಯದ ಹಾಲಿನಿದ ಪ್ಪಂತಿರುಂಡುಟ್ಟು ಕೊಂಡು ತಣಿದ ಸೂಳೆಮನೆಯೊಳಲ್ಲದೆ ಖೇಲನಸುಖಂ ಸಲ್ಲದೆನೆ ನಾಗರಿಕನಿಂತೆಂದಂ

ಪಿರಿದಿತ್ತೊಡೆ ಸುಖದಿಂದನು
ಸರಿಪರ್ ಧನಮನುಭವಂತಿ ವೇಶ್ಯಾ ನ ಪುನಃ
ಪುರುಷ ಮೆನೆ ಪುರುಳನಲ್ಲದೆ
ಪುರುಷನನನುಭವಿಸಬಲ್ಲರೇ ಬೆಲೆವೆಣ್ಗಳ್ ೨೫

ವ॥ ಅದುಕಾರಣದಿಂ

ತ್ರಿಪದಿ॥ ಕುಡುವುದು ಕುಡದೊಡಂ ನಡೆಯದು ಪಿರಿದೀಯ
ದೊಡೆ ಸೊಡರ್ಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ
ಕುಡುವುದು ಹದಕೆ ಚದುರಿಗಂ ೨೬

ವ॥ ಎನುತ್ತುಂ ಬರೆ ಮತ್ತೊಂದೆಡೆಯೊಳ್ ತನುವುಮಂ ಮನೆಯುಮನ್ನ ಲಂಕರಿಸಿ ಬರವಂ ಪಾರ್ದಿರ್ದ ರಥಾಂಗಸಂತತಿಯಂ ತಿರುಳುಗೞಿಯೆ ಬಂದ ಚಿತ್ರೇಶ ರಂಗೆ ದಾರಿಕೆ ವಿದಾರಿಕೆಯಾದಂತೆ ನೊಂದಿಂತೆಂದಳ್

ನೋಡೆನೆ ಕಣ್ಗಳಂಗಯಿಸಲಾರ್ಪಡೆ ಗಂಡರ ಗಾಡಿಗೊಲ್ದು ಮಾ
ತಾಡೆನೆ ಬೆಂದ ಬಾಯ್ಪೊಱರ್ಗೆ ಮೆಚ್ಚಿ ಮುಸುಂಕದೊಡಿಚ್ಛೆಕಾಱರೊಳ್
ಕೂಡೆನೆ ತೋಳ್ಗೆ ಕೊಕ್ಕರಿಕೆ ಹುಟ್ಟದೊಡಿಂತೆನಗೆನ್ನ ಲೇಸನ
ಟ್ಟಾಡಿಪುದರ್ಥಿಯೇ ಹರಸಿ ಹುಟ್ಟದೆನೇ ನಿನಗೆಂದು ವಲ್ಲಭಾ ೨೭

ವ॥ ಎಂದು ತನ್ನ ಕಂಬಸಿಯ ತಂದಲಿಂದತಿಸ್ನೇಹಲತೆಯಂ ಬೆಳೆಯಿಸಿದಳ್. ಮತ್ತೊಂದೆಡೆಯೊಳ್ ಚಿತ್ರವಲ್ಲಭನುೞಿದ ವಿರಹಪರಿತಾಪದಿಂ ಬಾಡಿ ಪಾಡೞಿದ ಗಾಡಿ ಕಾರ್ತಿಯಂ ನೋಡಿ ಕೆಳದಿಯರ್ ತಮ್ಮೊಳಿಂತೆಂಬರ್

ಕೇಳಂ ಕೇಳಂ ಮೃಗೀಲೋಚನೆಗಸುನೆಱವೀತಾನನಂ ತಾನನಂ ವಾ
ಚಾಳಂ ಚಾಳಂ ಮರುಳ್ಮಾಡಿದನಳಿಪಳಿಪಂ ಕಾಱುವಂ ಕಾಱುವಂ ಹಿಂ
ದೋಳಂ ದೋಳಂ ನವಾಮ್ರಂ ವಿಚಕಿಲನಲಿನೀಜಾಲಕಂ ಜಾಲಕಂ ಕ
ರ್ಬಾಳಂ ಬಾಳಂದವಾಯ್ತುಂ ನೆರಪನೊಲವಿನಿಂಗಾಳ್ಮನೋಜಂ ಮನೋಜಂ ೨೮

ವ॥ ಎಂದವಳ್ದಿರೊಳೊರ್ವಳ್ ನಲ್ಲನಲ್ಲಿಗೆ ಪೋಗಿ

ಮಾರಂ ಮಾರಂಸವಂ ಮಾಡಿದನಬಲೆಗಿದೇಕನ್ನೆಯಂ ಕನ್ನೆಯಂದಿಂ
ದಾರಂ ದಾರಂಬೊಲೋತೊಂದಿದಳಿವಳಱಿಯೇನಲ್ಲಳೇ ನಲ್ಲಳೇ ನೀಂ
ಕೂರಂ ಕೂರಂದಲೆಂಬಂತೆಸಗೆ ಸುಖಮನಕ್ಕಾಡದಿರ್ ಕಾಡದಿರ್ ಸಂ
ಸಾರಂ ಸಾರಂ ಸಮಸ್ನೇಹಮನಱದಱದೊಲ್ದೀವಿರಾಗಂ ವಿರಾಗಂ ೨೯

ವ॥ ಎಂದು ತಂದು ಕೂಡಿದಳದಂ ದಕ್ಷಿಣನಾಯಕಂ ಸಾಹಿತ್ಯಸಾರೋದಯಂಗೀ ದೂದವಿ ಜತ್ತಕವಂ ನುಡಿದು ಜನಕವಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ ಮತ್ತೊಂದು ವಿನೋದಭವನಾಂಗಣದೊಳ್

ಇನಿಯರ್ ಬಿಚ್ಚದೆ ಮುಚ್ಚಿ ಬಾಳ್ಗೆ ಸೊಬಗಿಂ ಸೊಕ್ಕೇಱದರ್ ಬೀೞ್ಗ ಕಾ
ಮನ ಕೂರಂಬಿನ ಕೋಳ್ಗೆ ಸುಗ್ಗಿ ಪೊಸೆವೆಳ್ದಿಂಗಳ್ ಬನಂ ಬಂದಮಾ
ವಿನಿತುಂ ತಣ್ಣಿದುವಕ್ಕೆ ತೆಂಬೆಲರ್ಗಳಿಂ ತಣ್ಣಾಲೊಳೆಂದೊರ್ವಳ
ಚ್ಚನೆಯಾಟಂ ಸತಿ ಬೇಟದೇವತೆಗೆ ಪಾನೋನ್ಮತ್ತೆ ನಿಂದಾಡಿದಳ್ ೩೦

ವ॥ ಅದಂ ಕಂಡು ವಿದೂಷಕನಿವಳರ್ಚನೆಯಾಡೆ ಪೀಠಮರ್ದನಂಗೆ ನೊಚ್ಚ ನಾದುದೆಂದು ನಗಿಸುತ್ತಂ ಪೋಗೆ ಮತ್ತೊಂದು ಸೂಳೆವನೆಯೊಳ್

ಮುಡುಹಿನ ಮುಕ್ಕೆ ಸೊಕ್ಕದಿರದೇನಭಿಮಾನದ ಜೋಡೆ ಬಾಲಮಂ
ಬಡಿದಪೆಯಿತ್ತ ಚುಂಬಿಸುಡು ಗೋರಿಯರುಟ್ಟಿದಱಿೞದ್ದೆ ಪೆಬ್ಬೆರಳ್
ಕಡಿಯದರಂಟಸುಂಟಿಸುಡುಪಂಚಿಗಳೆಂಜಲಹಂಚೆಯೆಂದು ಬ
ಯ್ದೊಡನೊಡನೆತ್ತಿದರ್ಮಸಗಿ ಬೇಟದ ಬನ್ನಮನಕ್ಕತಂಗಿಯರ್ ೩೧

ವ॥ ಅದಂ ಕಂಡು ಪರಿಹಾಸಕನರಸನ ಮುಂದಿರ್ವರಿರ್ವರುಂ ಕಾಮದೇವಂಗೆ ಕಲೆಯ ಕವಳಿಗೆದೋಱದರಿವರ ಜೀವಿತಮಿಂತೆ ಸಲ್ಗುಮೆಂದು ಮ್ಮೆಯಿಕ್ಕಿ ನಗಿಸಿ ಮತ್ತೊಂದೆಡೆಯೊಳ್ ಮುನಿಸಿಂಗೆ ಮುನಿಸನೊಡ್ಡಿ ಕಂಟಿಸುವ ಕಾಮುಕಂಗಾತನ ಕೆಳೆಯ ನಿಂತೆಂದಂ

ಕರುಣಂ ಕೈಮಿಗೆ ಕಾಮನೆಚ್ಚುಡಿದ ಕೋಲ್ವೋಲ್ ನೋಡಿದಪ್ಪಳ್ ಸಕೇ
ಕರದಿಂ ಲಲ್ಲೆಯಿನಪ್ಪಿದಪ್ಪಳುಟ್ಟಿಪ್ಪಳ್ ಬಾಷ್ಪಮಂ ನೊಂದು ಕ
ಣ್ಮರಲಿಂ ಕಾಯ್ದೊದೆದಪ್ಪಳೊಲ್ಪರೆಡೆಯೊಳ್ ಬಲ್ಪೇಕೆ ಚಾಂಡಾಳ ಪೆಂ
ಡಿರ ಸೋಂಕಿಂ ಮರನಾದೊಡಂ ತಿಳಿವುವಲ್ಲಿಂ ಕಷ್ಟಮೇ ಮಾನಸರ್ ೩೨

ವ॥ ಏಟಿಂದು ಕೆಯ್ಯಂ ಪಿಡಿದೆತ್ತಿ ಶಯ್ಯಾಗೃಹಕ್ಕೆಯಿರ್ವರುಮನೊಡನೊಂಕಿದನಿತ್ತ ಮತ್ತೊಂದೆಡೆಯೊಳ್ ಬೊಜಗನೊರ್ವಳೊಲ್ಪಳಂ ನುಡಿದು ಬೇಳಾಗಿ ಕೇಳಿವನದೊಳಿಸಟಿ ಪಸೆಯೊಳ್ ಪೊರಳ್ದು ಪೊತ್ತುಗಳೆದಿರುಳಿನ ಜೊನ್ನದುಱಿವರಿಗೆ ನಿತ್ತರಿಸಲಾರದೆ

ಘನಸಾರೋಜ್ವಲಚಂದನದ್ರವಮೃಣಾಳೀಹಾರಕೇಯೂರಮಂ
ಡನಮಂತೇ ದೆಸೆಗೆಯ್ದಿದಂತೆ ಮೆಱೆಯುತ್ತುಂ ಕ್ಷೌಮದೊಳ್ ತಣ್ಣನ
ಪ್ಪಿನೆಗಂ ನೇತ್ರದ ನೀರ ಪೊಟ್ಟಣಮನಂದೊತ್ತುತ್ತುಮುರ್ವೀಶನಂ
ದನನೆಟ್ಟಿಂದೊಡನಾಡುವಗ್ಗಯ್ಸೆ ಇರ್ದತ್ತುತ್ತುಂಗಸೌಧಾಗ್ರಮಂ ೩೩

ವ॥ ಎಯ್ದಿನಂದು ಬಾಗಿಲೊಳ್ ನಿಂದಾಡುವ ವೈತಾಳಿಕರಂ ನಗಿಸುವ ಜೋಡಗರಂ ಪೊಗೞ್ವ ನಾಗಾರಿಯರೊಗ್ಗಂ ನಿಲಿಸುತ್ತುಮೊಳಗಂ ಪೊಕ್ಕು

ಪಸರಿಸಿದ ಕುಸುಮದೆಸಳ್ಗಳ
ಮಸುಳಗೆಯುಂ ಪಳುಕುವೆಸದ ರಸೆಗಸವಸದಿಂ
ಸಸಿವಸಿಯಿಸಿದವೊಲೆಸೆದುದ
ನಸಿಯಳ್ ನಸುವೆಸೆದು ಪಸುಗೆ ಕುಡೆ ಕುಳ್ಳಿರ್ದಂ ೩೪

ವ॥ ಆ ಪ್ರಸ್ತಾವದೊಳ್

ನವರಾಗಾಕುಳೆಯಪ್ಪ ವಲ್ಲಭೆಯವಸ್ಥಾಭೇದದಚ್ಚಂದ ದೂ
ದವಿ ಬಂದಾನತೆಯಾಗಿ ಶೈಶವನಿದಾನಂ ಕಲ್ಪದಿಂದೊಪ್ಪ ಮಾ
ಧವನಂ ಪಕ್ಕದೊಳಿರ್ದ ನಾಯಕಿ ನಗುತ್ತಂ ಬೇಱೆ ಕಣ್ಗೆತ್ತಿ ತೋ
ಱುವಿನಂ ಮೆಲ್ಲನೆ ನೋಡಿ ಕಣ್ಗೆನಿದು ಸಾರ್ದಿಂತೆಂದನಾ ಕಾಂತನಂ ೩೫

ನಿನಗಂ ಮದನಂಗಂ ರೂ
ಪಿನ ಪುರುಡುಂಟೆಱದೆಸಿಂತು ನಿನ್ನನೆ ನೆನೆವಂ
ಗನೆಯನಿಱಿದಿಱಿದು ಸುಡುವನೆ
ನಿನಗಕ್ಕಟ ಕರುಣಮಿಲ್ಲ ಹಾಳಿಯುಮಿಲ್ಲಂ ೩೬

ನೋಡಲೊಡರ್ಚಿ ನಿನ್ನ ಪರಿಜಂ ರಸಚಿತ್ರದೊಳಶ್ರುವಾರಿಯೊಳ್
ಕೂಡಿ ಮುೞುಂಕುವಳ್ ಸಖಿಯರೊಳ್ ಸತಿಕೂಡಿರೆ ನಿನ್ನ ಗೀತಮಂ
ಪಾಡಲೊಡರ್ಚಿ ಗಗ್ಗರಿಕೆಯೊಳ್ ಜರಿವಳ್ ಮನಮಿತ್ತು ನಿನ್ನ ಮಾ
ತಾಡಲೊಡರ್ಚಿ ಕಣ್ಮಲರನಂಗನೆ ಮೂರ್ಛೆಗೆ ಸಂದು ಮುಚ್ಚುವಳ್ ೩೭

ಕಳವಳಮಲ್ಲದಿಲ್ಲ ನುಡಿ ಕಣ್ಬರಿ ಕಣ್ಬನಿಯಲ್ಲದಿಲ್ಲ ಸು
ಯ್ಗಳ ಬಿಸುಪಲ್ಲದಿಲ್ಲುಸಿರ್ಗಳಂಗಭವಜ್ವರಮಲ್ಲದಿಲ್ಲ ಮೆ
ಯ್ತುಳವೆಳಗಲ್ಲದಿಲ್ಲಱಮೆಲ್ಲೆರ್ದೆ ತಲ್ಲಳಮಲ್ಲದಿಲ್ಲ ಕೋ
ಮಳೆಗೞವಲ್ಲದಿಲ್ಲವಯವಂಗಳಿದಂ ಕಳಿವಂದನಾವುದೋ ೩೮

ವ|| ಎಂದು ಚಿಂತಿಸಿದ ಲತಾಂತ ಕೋಮಳೆಯವಸ್ಥಾಂತರದಿಂದೆಚ್ಚಱಸಲೆಂದು

ಮುಸುಕಂ ಗಾಡಿಯುಮೊಂದೆ ನಿನ್ನ ಪರಿಯಂದಂ ನಿಂದು ನೀಂ ಬಂದೆಯೆಂ
ದುಸಿರ್ದಾನಟ್ಟಲೊಡಂ ಪೊರಳ್ದು ತಳಿರ್ವಾಸಿಂದೆೞ್ದು ಕೈವಿಾಱ ಜೋ
ಲ್ದು ಸಡಿಲ್ದುಳ್ಪುಡೆಯುಂ ಬೞಲ್ಮುಡಿಯುಮಸ್ತವ್ಯಸ್ತಮಾಗೆಯ್ದೆವಂ
ದಸಿಯಳ್ ಕಾಣದೆ ನಿನ್ನನೆನ್ನ ಕೊರಲಂ ಜೋಲ್ದತ್ತಳುದ್ವೇಗದಿಂ ೩೯

ವ|| ಅಂತುಮಲ್ಲದೆಯುಂ

ನನಗೇಕಾದುದು ಬೆಂದ ರೂಪೆಸೆವ ರೂಪಿಂಗಿಂತು ಹಾೞಾದ ಜ
ವ್ವನಮಿಾಜವ್ವನದಲ್ಲಿ ಕೂರದನ ಬೇಟಂ ಬೇಟದೊಳ್ ಕಾಯ್ವ ಚೈ
ತ್ರನ ಕಾಟಂ ಕೞವಂದವಾವುದೆನಗಿನ್ನೆಂತೆಂದೊಡಾನೆಂದೆನಂ
ಗನೆ ನೀಂ ಗರ್ವಿಸಿದಪ್ಪೆಯೆಂದು ಬಗೆದೋಱಂ ನಲ್ಲನೇನೊಲ್ಲನೇ ೪೦

ವ|| ಎಂಬುದುಮಾ ನಿತಂಬಿನಿ

ಒಲವೊಂದುಳ್ಳೊಡೆ ಸಾಲದೇ ಸರಸಮುಂ ಕೊಂಡಾಟಮುಂ ಕೂಟಮುಂ
ನಲವುಂ ಬೇಟ್ಪುದೆ ಮಾಟ್ಪ ಮನ್ನಣೆಯನೇಗೇಳ್ವಪ್ಪೆ ಬಾಳ್ಗಿಮ್ಮ ಕಾ
ದಲನಿಂದೇನೆಮಗಿಲ್ಲ ಬಿಜ್ಜಣಿಗೆಯೊಳ್ ನೀರ್ವಾಸಿನೊಳ್ ನಂದನಾ
ವಲಿಯೊಳ್ ಚಂದನದೊಳ್ ಮೃಣಾಲವಲಯಶ್ರೀಯೊಳ್ ಲತಾಗೇಹದೊಳ್ ೪೧

ವ|| ಎಂದು ಸುಯ್ದು ಬೞಲ್ದು ಬಸವೞದು ಮೈಮಱದಳದಲ್ಲದೆಯುಂ

ತನ್ನನೆ ಮಱದಳೆ ಮಱದಳ್
ತನ್ನ ಕುಲೋನ್ನತಿಯನಿಷ್ಟಬಂಧುಗಳಱವಂ
ಮುನ್ನಮೆ ಮಱದಳ್ ಗರುವಿಕೆ
ಯನ್ನಟ್ಟನೆ ಮಱದಳಿಂತು ಮಱದಿಂತೆಂದಳ್ ೪೨

ಕುರುಳಂ ಕೊಟ್ಟಡೆ ಕೊಳ್ಗುಮೇ ಮುಡುಹಿನೇಱಿಂಗಕ್ಕಟಾ ಎಂಗುಮೇ
ಬೆರಲಂ ಕೊಟ್ಟೊಡೆ ಮಾಣ್ಗುಮೇ ಮುನಿಸನಿನ್ನೇನಾದಪಂ ವಕ್ಷದೊಳ್
ಬಿರುದಂ ಕೊಯ್ದೊಡೆ ಬರ್ಕುಮೇ ಮನೆಗೆ ಮೇಣ್ ಹೀನಾಂಗಿಯುಂ ಮುಟ್ಟಲಾ
ಗರಸಿಂಗೆಂಗುಮೋ ನೋಡುವಂ ಸಖಿ ಬೞಿಕ್ಕೆಂತಾದೊಡಂ ಕೂಡುವೆಂ ೪೩

ವ॥ ಇಂತು ಪರಿಚ್ಛೇದಿಸಿದಳಿನ್ನೆಗಮೇತಕ್ಕೆಂದಱಿಯೆನೆಂದು ಮಾತಂ ಮಾಣ್ಬುದು ವಾತನಂ ಜನಾಂತಿಕದೊಳಾತಳೋದರಿ ಬಾಡಿದ ಕುವಳಯಕ್ಕೆ ಮೂಡಿದ ಚಂದ್ರಿಕೆಯಂತಿರೀಕೆಯ ಬರವು ಚೆಲ್ವನಾದುದಿನ್ನಿರಲಾಗದೆಂದು ಕಳುಪಿದಳಿತ್ತಲಾ ದೂತಿಯ ಮಾತಿಂಗೆ ನಾಗರಕಾದಿಗಳೊಳರಸನಿಂತೆಂದಂ

ಅಸಮಾಸ್ತ್ರಂ ತೆಗೆದೆಚ್ಚ ಕೂರ್ಗಣೆಯ ಬಲ್ಲೇಱಿಂಗೆ ಸಕ್ಪಾರಸೇ
ಕಸಮಾನಂ ಕಡುಕೆಯ್ದ ಕಾದಲರ ಮಾತಾರೋಹಣಸ್ನೇಹ ಸೇ
ಕಸಮಾನಂ ಬಗೆಗೊಳ್ವ ದೂದವರ ಮಾತಾಮಾತು ಬೇರ್ಕೆಯ್ಯೆ ಸಂ
ದಿಸುವಂತಕ್ಕಸು ನೆತ್ತಿಗೇಱುತಿೞಿವಂತಕ್ಕುಂ ವಿಯೋಗಾತುರರ್ ೪೪

ವ॥ ಎಂದು ತಮ್ಮೊಳ್ ನುಡಿಯುತ್ತಂ ನಡೆಯೆ ಮುಂದೊಂದು ಮಣಿ ಮಂಟಪಕ್ಕಲಂಕಾರಮಾದ ಮತ್ತವಾರಣಮಂ ಮಲಂಗಿ ಕುಳ್ಳಿರ್ದು ಮುಗ್ಧೆ ಮಧ್ಯೆ ಪ್ರೌಢೆಯೆಂಬ ವಿಟೀಕದಂಬಕದೊಳೊರ್ವಳ್ ತನ್ನ ವಲ್ಲಭನ ಮೋಹದ ಮುದ್ದುಗೆಯ್ತಮಂ ನೆನೆದು ಕೆಲದೊಳಿರ್ದ ಬರ್ದೆಗಿಂತೆಂದಳ್

ಅರಗಿಳಿ ಮಾತನಾಡಿದುದು ನಿನ್ನೊಡನಂತೆಳಸುತ್ತುಮಿರ್ದೆ ನೀಂ
ಪುರುಳಿಯ ಕೂಡೆ ಪಾರಿವದ ಲಲ್ಲೆಗೆ ಭುಲ್ಲಿಸುತಿರ್ದೆಯೆಂದು ಮಂ
ದರಗತಿಯಿಂದೆ ಹಂಸನೊಡನಾಡಿದೆಯೆಂದತಿಕೋಪದಿಂ ಪ್ರಿಯಂ
ಪುರುಡಿಸೆ ನಕ್ಕು ಚುಂಬಿಸುವೆನಾನುೞುತುಂ ಮೊಗಮೀವನಂತವಂ ೪೫

ವ॥ ಮತ್ತೊರ್ವಳ್ ತನ್ನ ಕನ್ನೆವೇಟದಿಂ ಕೂರಿಸಿ ಕೂರ್ತು ವಿಟನ ಗುಣಮನಿಂತೆಂದಳ್

ಇನಿಯಂ ಕೂರ್ಮೆಯ ಕೂಟದೊಳ್ ಗುರುಕಳಾಭಿಪ್ರಾಯದೊಳ್ ತಂದೆ ತಾಯ್
ತನುಸಂಸ್ಕಾರವಿಳಾಸದೊಳ್ ಸಖಿ ಸುಖಾಳಾಪಂಗಳೊಳ್ ಬಂದು ತೊ
ಟ್ಟನೆ ಮುಟ್ಟಿರ್ದೆಡೆಯೊಳ್ ವಿಧಾತ್ರನೆನಗಿನ್ನೇೞೇೞುಜನ್ಮಕ್ಕಮಾ
ತನೆ ಚಿತ್ತಪ್ರಿಯನಕ್ಕೆ ಸೂಕ್ತಿನಳಿನೀಹಂಸಂ ಸರೋಜೇಕ್ಷಣೇ ೪೬

ವ॥ ಎನೆ ಮತ್ತೊರ್ವಳ್ ಬೆಲೆವೆಣ್ಣ ಬೇಟಮೆಂಬುದು ಪರಭೃತದ ಸರಸದಂತೆ ಕೋಡಿನೊಳೆ ಮೆಱಿವುದದು ಕಾರಣದಿಂ

ಇತ್ತೊಡೆ ಬೇಟವಿಾಯದೊಡೆ ಕಾಟಮದುಂ ಬೆಲೆವೆಣ್ಣ ಬಾೞಕ
[1]ಬ[1]ತ್ತುವ ಬೇಟಮುಂ ಸುಡು ಪರಾತಿಯ ನೋಂಪಿಯ ಗಂಡರೀವ[2]ಕ[2]
ಟ್ಕಿತ್ತುರಿ ಕಪ್ಪುರಂ ತುಡಃಗೆ ದಾರವದಂಬುಲಮುಚ್ಚವಾಸಿಗಂ
ಸುತ್ತುವ ಬಣ್ಣ ಸಣ್ಣ ಮಿವು ಬೇಟದ ಕೂಟದ ಸುಗ್ಗಿಯೆನ್ನಿರೇ ೪೭

ವ॥ ಆ ಮಾತಿಂಗನುಗತಮಾಗಿ ಮತ್ತೊರ್ವಳ್ ಚತುರನಿತಂಬಿನಿಯಿಂತೆಂದಳ್

ಹರದನ ಬಡ್ಡಿಗೊಟ್ಟೊಡವೆ ರಾಜಕುಮಾರನ ತೇಜದೇೞ್ಗೆ ನಾ
ಣ್ಬೆರುದಿನ ಚಿತ್ರವಿದ್ದೆ ಕವಿಪಂಡಿತರೋದುವ ಕೊಂಕು ಚೆನ್ನಪೊಂ
ಗರ ಕುಡಿ ಮುಂಜೆಱಿಂಗು ನಿಡುಬಯ್ತಲೆ ಬಾರ್ತೆಯಿ ತೋರ್ಪ ದಂತವಂ
ಕರಹದ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆಗೀವಳೋ ೪೮

ವ॥ ಎಂದು ಗೊಟ್ಟಿಯ ಚತುರ ಚಾಟುವಚನಂಗಳನೆಲ್ಲರುಂ ಮೆಚ್ಚುತ್ತುಂಬರೆ ಮುಂದೊಂದು ಚಂದ್ರಕಾಂತ ಮಣಿಮುಂಟದುಪರಿಮತಳದ ಸಂಭೋಗಭವನದೊಳಗೆ

ಸವಿನಾಣ್ಗಾಣಿಸಿ ಬಯ್ವ ಬಯ್ಗುಳನೆ ಬಾಯಂ ಬಿಟ್ಟು ಲಲ್ಲೈಸಿ ಬೇ
ಡುವ ಬೇಡುತ್ತೊಡಗೂಡದೆಂದು ಕಡುಪಿಂದಂ ಪೊಯ್ವ ಪೊಯ್ದೆೞ್ದು ಪೊ
ಣ್ಮುವ ರೋಮಾಂಚದ ಸಾಲನೆತ್ತುವ ತವಿಲ್ತಾರ್ಕಂಡು ಹಮ್ಮೈಸಿ ಹಾ
ರವದಿಂದೆಚ್ಚಱುವಿಚ್ಚೆ ಪಚ್ಚೆ ನೆರೆದರ್ ತಮ್ಮಿಚ್ಚೆಯಿಂ ಕಾದಲರ್ ೪೯

ನೋಡುವ ಕಣ್ಗೆ ಮೆಯ್ಸವಿಯ ಮಾಡುವ ಕೂರುಗುಪೊಯ್ಗೆ ಮೆಯ್ಗಳಂ
ನೀಡುವ ಬಾಯ ಬಾಕುಳಕೆ ಪಲ್ಲಟಮಾಡುವ ಬಯ್ದ ಬಯ್ಗುಳಂ
ಬೇಡುವ ಹೊಯ್ದ ಹೊಯ್ಗೆ ಪುಳಕಾವಳಿಮೂಡುವ ಗಂಡು ಹೆಣ್ ತಡಂ
ಮಾಡುಗು ಮಾಡೆ ಕೂಡೆ ಕಳೆಗೂಡುವಲಂಪಿನೊಳೊಲ್ದು ಕೂಡಿದರ್ ೫೦

ಒಡನೊಳಪೊಕ್ಕು ಮೆಯ್ಗೆ ಪುಳಕಂಗಳ ಕೀಲಮುರ್ದಪ್ಪುಕಾಳಸಂ
[3]ಬಡೆ[3]ದಿರೆ ಕಾಸಿ ಬೆಚ್ಚು ತೊಳೆದಂತೆ ಬೆಮರ್ [4]ತಿಳಿದೇ[4]ೞಿ ಪೀರ್ದು ಬಾ
ಯ್ಬಡಗಿದೊ ಡಂಕಿನಂತೊಳಗೆ ಪೊಂಗಿದೊಡಂ ಕಿರೆ ಪೊಲ್ತರೋಪರಿಂ
ಪಡರ್ದ ರಥಾಂಗದೊಳ್ ಸಮನೆ ಸಂಪುಟದಿಂ [5]ಸಮೆದಿರ್ದ[5] ನಾರಿಯಂ ೫೧

---

1 ಬಾ (ಅಱಲು) 2 ಕಿ (ಸೂಸು) 3 ಬಿಡ (ಸೂಸು) 4 ಬಱಿಕೇ (ಸೂಸು)
5 ದೆಸೆವರ್ಧ (ಸೂಸು)

ವ॥ ಆಗಳಾ ಬೆರಲ ಕೊರಲ ಸರದ ಸುತಿ ಕೂಡೆ ರತಿ ಪಾಡೆ ಬಾಜಿಸುವ ವೀಣೆಯಂತೆ ಕಿವಿಗೆ ಸವಿಯನವಟಯ್ಸುವುದನಾಲಿಸಿ ಕೇಳ್ದು ವಿದೂಷಕಂ ವಿಟಕುಟಿಲದುಷ್ಟರೊಳೀ ಕಂದರ್ಪದುಂದುಭಿನಿನಾದನಾದೂತಿಕರೆದೊಯ್ದುಲರಬೊಜಂಗನಧ್ಯವಸಾಯಮೆಂದು ಪಚ್ಚೆನುಡಿಯುತ್ತುಂ ಬಂದೊಂದು ಕುಸುಮಕೋದಂಡಮಂಡಪದ ಮುಂದೆ ನಿಂದಲ್ಲಿ ನೆರೆದ ವಿಟಪೇಟಕದೊಳ್ ಕಾಮತತ್ವರಹಸ್ಯಮನೇನಾನುಮಂ ಕೇಳಲಕ್ಕುಮೆಂದುನೆರವಿಯೊಳ್ ಬೆರಸಿರ್ಪಿನರ್ವೊರ್ವಂ ತನ್ನಿನಿಯಳಳ್ಳಿರ್ದವೇಟಮಂ ನೆನೆದು ಕೆಳೆಯಂಗಿಂತೆಂದಂ

ಇರುಳಿನ ಪೊತ್ತದೊರ್ಮೆ ತಡೆದಾಂಬರುತೆನ್ನಯ ತಪ್ಪನಾಕೆಯೊಳ್
ನಿರವಿಸಿ ಶಯ್ಯೆಯೊಳ್ ಪೆಱಗುಗೆಯ್ಯೆ ಬಿಗುರ್ತು ಬೆಮರ್ತ ಬಿಲ್ದೆಳ
ಲ್ದುರಿದು ಕನಲ್ಕೆಯಿಂ ಕರಿದು ಕಾಡದೆ ಕಾದಳಟಲ್ಕೆ ಕಣ್ಣ ನೀ
ರ್ಪರಿವವೊಲಾಗಿ ಕಾಮರಸ ಸಮ್ಮನವಾಯ್ತು ರತಪ್ರಸಂಗದೊಳ್ ೫೨

ವ॥ ಮತ್ತಮೊರ್ವಂ ಗರವೇಟದ ಭೋಗಿಯಿಂತೆಂದಂ

ಬೆಲೆವೆಣ್ಣೆಂದೊಡೆ ಬೇಟವೆತ್ತಣದೊ ಕಾಮಾಂಧರ್ಗೆ ಚಿತ್ತಕ್ಕೆ ಕ
ಟ್ಟಿಲೆರಂದಾವಣದೂಟದೊಳ್ ನೆಗಟ್ಟುವದೇ ಸನ್ಮಾನಮುಳ್ಳಾದೊಡಂ
ಕುಲಟಾನಾಯಕಿಯೊಳ್ ಕುಲಾಂಗನೆಯೊಳುಂಟಾ ಕಾಂತೆಯೊಳ್ ಕೂಡಿ ಕೂ
ರ್ತೊಲವಾಯ್ತೆಂದೊಡೆ ನಂಬಲಕ್ಕುಮಿದನಾರುಂ ನಚ್ಚರೇಮಚ್ಚರೀ ೫೩

ವ॥ ಆ ಮಾತಂ ಮಾರ್ಕೊಂಡು ಸೂಳೆಯ ತೋಳೆ ತೊಟ್ಟಿಲಾಗಿ ಬಳೆದ ಜಾಣನಿಂತೆಂದಂ

ಅವಿದಗ್ಧರ್ ಕಡುಲೋಭಿಗಳ್ ಕೆಲಬರೀಯಲ್ ಮೆಚ್ಚಿಸಲ್ಕಾಱರೆಂ
ಬವರಿಂದಿಚ್ಚೆಯ ಮೆಚ್ಚು ಸಲ್ವುಪಡೆವುಂಟೆಲ್ಲೆನ್ನದಿರ್ ಮತ್ತಮಾ
ರ್ಪು ವಿಲಾಸಂ ಸಲೆ ಸೂಳೆ ಕೂರಲೆ ವಿಟಂಗಂತಾದೊಡಂತಾ ಪುರೂ
ರವಸಂಗೂರ್ವಸಿ ಕೂರ್ತಪಳ್ ಪಣವಧೂಸ್ನೇಹವ್ಯಪೋಹಂಗಳಂ ೫೪

ವ॥ ಎನೆ ಮತ್ತೊರ್ವಂ ಮೆಚ್ಚಱಿದೀಯಲುಂ ಪೊತ್ತಱಿದುಱಿಯಲುಂ ಬಲ್ಲ ಚದುರ ವಿಟನಿಂತೆಂದಂ

ಕುಡುವುದು ಕೂರ್ಮೆಯಲ್ಲಿ ಕಲೆಯಿಲ್ಲದೆ ಮನ್ನಿಪ ಸೂಳೆಗೇನನಾ
ದೊಡವಱನೇಹಮಂ ಮೆಱೆದು ಹೊಳ್ಳಿಸಿ ಬಿಟ್ಟಪನೆಂಬ ಡಾಳೆಯಂ
ಸುಡುವುದು ಸುಟ್ಟು ತೂಱುವುದು ತೂಱದ ಬೂದಿಯ ಹಿಟ್ಟುಗುಟ್ಟಿ ಬೊ
ಟ್ಟಿಡುವುದು ಮಿಕ್ಕುದಂ ಕದಡಿ ಕುಂಟಣಿಗೀವುದು ತೀವಿ ಹಂಚಿನೊಳ್ ೫೫

ವ॥ ಎನೆ ಮತ್ತೊರ್ವಂ ಬಸನದ ಮೆಚ್ಚುಪೊಚ್ಚರಾದ ಇಚ್ಛೆಕಾದಿನಿತೆಂದಂ

ನೆರೆ ಪರೆದೋಡೆ ಕೀಱಿ ಪೊಱಗಿಕ್ಕಿ ಜನಂ ಬೆಱಗಾಗಿ ಬೀದಿಯೊಳ್
ನೆರೆಯೆ ಕುಕಿಲ್ದು ಕೂಕಿಱಿದು ಕೊಂ[1]ಡೊಡ[1] ಸಾವವೊಲಾರ್ದು ಕೂಡದೇ
ನರಸಿಯದೊಂದು ಹಾದರವೊ ಜಕ್ಕಿಯರೂಟವೆ ಕೂಟದೇೞ್ಗೆಯೊಳ್
ಸುರುಕೆನಬಾರದೆಂಬ ಬೆಲೆವೆಣ್ಗಳ ಕೂಟಮನಿಕ್ಕು ಕಿಚ್ಚಿನೊಳ್ ೫೬

ವ॥ ಎನೆ ಮತ್ತೊರ್ವಂ ಬೇಟಮನೆ ಪಾಟಿಸಿ ಕೂಟದೊಳ್ ಸಂದ ರಸಿಕ ನಿಂತೆಂದಂ

ಸಿರಿ ಚೆಲ್ವಂ ಸಿರಿಯಲ್ಲಿ ರೂಪು ಮಿಗೆ ಚೆಲ್ವಂ ರೂಪಿನೊಳ್ ಮತ್ತೆ ಮುಂ
ಬರೆಯಂ ಚೆಲ್ವನಿನಿತ್ತುಮೆಯ್ದೆ ಕಡುಚೆಲ್ವಂ ಬೇಟದಿಂ ಬೇಟಮೆಂ
ಬರಸಂ ಮನ್ನಿಸಿದಂದನಾಯಕಮುಮೇಕಾಲಕ್ಷ್ಮಿಯೊರೂಪುಮಾ
ಕರೆಯಂ ಬೇವಿನ ಸುಗ್ಗಿ ಪಾಟ್ಮನೆಯ ಚಿತ್ರಂ ಕಾಡ ಚಂದ್ರಾತಪಂ ೫೭

ವ॥ ಆ ಭಿನ್ನರುಚಿವಚನಂಗಳ್ಗೆ ಮೆಚ್ಚುತ್ತುಂ ಬಂದು ಮುಂದೊಂದು ಸುರತ ಭವನದ ಪುರೋಭಾಗದೊಳ್ ತಣ್ಪಿಂ ಕಂಪುಂ ಪೊಂಪುಳಿಯಾದ ಚಂಪಕದ ಚಂಪೆಯ ದೊಳಗೆ

ನವ ಸಂಧ್ಯಾಪ್ರಾಗನುಷ್ಠಾನದ ಪರಿ ಹೊಸತೆಂದಾಳಿಯರ್ ನಮ್ಮನೋಗು
ಟ್ಟುವ ಕಾಮುಕ್ರೀಡೆ ಯಾಮತ್ರಿತಯದ ಕಡೆಯಂ ಕಾಣಿಸಿತ್ತೆಂದು ರತ್ಯು
ತ್ಸವವಂ ರತ್ಯಂತದೊಳ್ ನಿಚ್ಚಳಿಪಿನಿಯರ ಮೆಚ್ಚಿಂದಮಾಗಳ್ ವಿನೋದಾ
ದವಸಂತಂಗೀಗಳುಚ್ಚಾಟನಮನೆಸಗಿದತ್ತಾ ತ್ರಿಯಾಮಾವಿಹಾರಂ ೫೮

ವ॥ ಆಗಳ್ ನಾಗರಕಂ ದೇವರವಧರಿಸಿಮಿತ್ತಲ್

ತೀರ್ದುದು ಸುವರ್ಣಮುಡುಪನೊ
ಳಿರ್ದೊಡೆ ಪಡೆಪಾಗದೆಂದು ರವಿಯಂ ಕರೆಯಲ್
ಪೇಟ್ದಲರ ಧಾರೆವುಱಿದವೊ
ಲಿರ್ದಪನಿದೆ ಕಂದೆ ಪಡುವಗಡೆಯೊಳ್ ಚಂದ್ರಂ ೫೯

ವ॥ ಎಂಬುದುಮರಸಂ ಯಾಮಿನೀವಿರಾಮುಸಮಯಮನುಲಕ್ಷಿಸಿ

ನಗರೀನಾಯಕ ನಾಯಿಕಾವದನವೃಂದಂ ಸುತ್ತಿ ಸೊಪ್ಪಾದ ಮೈ
ಲಗೆವೆಳ್ದಿಂಗಳ ಸೊಂಪ ಸೈರಿಸದವೊಲ್ ಭೋಂಕಲ್ ಮರುಳ್ತೆಂದು ರಾ
ಜಗೃಹದ್ವಾರನಿವಿಷ್ಟನಾಗಿ ಸಖಸಂದೋಹಕ್ಕೆ ಬೀಱ್ಕೊಟ್ಟು ಸೆ
ಜ್ಜೆಗೆ ವಂದಂ ಸ್ತ್ರಿಮಿತಾಗಮಂ ಕುಪಿತಕಾಂತಾಪಾಂಗಮಾಳಾಹತಂ ೬೦

1 ದೊಡೆ (ಸೂಸ)

ವ॥ ಅನ್ನೆಗಮಿತ್ತಲ್

ಉದಿರ್ದೀ ಲೋಕಮಿಯತ್ತಮಾಳದಲರ್ವೊಲ್ ನೀರೋಡಿ ಬಾಡಲ್ಕೆ ಬಂ
ದುದು ನಕ್ಷತ್ರದ ಬಣ್ಣವಣ್ಣ ಱಯದೊಲ್ದಾನಂದದಿಂ ಪೀರ್ದು ತೀ
ವಿದ ಬೆಳ್ಳಂದಿಳಿದೀರೆ ಸಾರ್ಚಿದ ಚಕೋರೀಚಂದ್ರಿಕಾಪಾನಪಾ
ತ್ರದವೊಲ್ ಕಾಂತಿ ಕಟಲ್ದು ಸಾರ್ದನಪರಾಶಾದ್ರೀಂದ್ರಮಂ ಚಂದ್ರಮಂ ೬೧

ವಡುವಲ್ ಚಂದ್ರನ ಬೆಳ್ವೆಳ
ಗೊಡರಿಸುವರುಣೋದಯಾಂಶು ಮೂಡಲ್ ಕೈಕೊಂ
ಡೆಡೆಯಣ ತಮಮೊಪ್ಪಿದುದಿರು
[1]ಳುಡುಗಿದ[1] ಕತ್ತಲೆಯ ಬಟ್ಟೆಯ ಮಱುಗಳಿವೆನಿಸಲ್ ೬೨

ಜಲಜಲಿಸುವ ಬೆಳ್ದಿಂಗಳ್
ತೊಲಗಲೊಡಂ ಮುಂದುಗೆಟ್ಟು ಶಶಿಮಂಡಲದೊಳ್
ಮೊಲನೆಡಪೆ ಹರಿಣನಡಿಗೆಡೆ
ಮೊಲಗತ್ತಲೆಯಾಯ್ತು ಯಾಮಿನೀವಿರಸನದೊಳ್ ೬೩

ಕಮಲಿನಿಗಂ ಕೋಕದ್ವಯ
ಸಮುದಯಕಂ ಕೆಟ್ಟರಳಿದರೆಂದಿನನೆ ಪಸಾ
ಯಮನಟ್ಟಿದಂತೆ ಮೆಱೆದುದು
ನಿಮಿರ್ದರುಣೋದಯದೊಳೆಸೆವ ಸಂಧ್ಯಾರಾಗಂ ೬೪

ಗಗನಸ್ತ್ರೀ ಕನಕಾದ್ರಿಪಶ್ಚಿಮದ ನಾಡಂ ನೋಡಲುಂ ಪೋದಿರುಳ್
ಮೃಗಲಕ್ಷ್ಮಂಗೆಡೆಗೊಟ್ಟಳಂತವನ ಪಾದಕ್ಕೆನ್ನ ಸೊಂಪೆಂದು ಕೈ
ಮುಗಿಯಲ್ ಮಾಡಿದಳಬ್ಜಿನೀಕುಲಮನೆಂದೇಂ ಕಾಯ್ದು ಕೆಂಪೇಱದಂ
ತೊಗೆದೊಪ್ಪಿರ್ದನೊ ಲೋಕಲೋಚನಚಯಶ್ರೇಯಸ್ಕರಂ ಭಾಸ್ಕರಂ ೬೫

ತನುಲತೆ ಪೇಱ ಕಂಟಕಮನುಚ್ಚಲಿತಾನನಮುದ್ರೆ ಬಿಚ್ಚೆ ಸೋಂ
ಕಿನೊಳಳಿ ಬಾಳಿ ಸಂನಿಶಿಯೊಳಳ್ಕೞದುಳ್ಳೆಸಳ್ಗೊಂಕನೊಯ್ಯನೊ
ಯ್ಯನೆ ಕರದಿಂ ನಿಮಿರ಼್ಿ ಮಕರಂದದ ಮುಂಬದನಂ ತೆರಳ್ಚಿ ಪ
ದ್ಮಿನಿಯೊಳಿನಂ ಪ್ರವಾಸಪರಿಖೇದಮನಾಱಸಿದಂ ಪ್ರಭಾತದೊಳ್ ೬೬

ವ॥ ಅನಂತರಂ

---

1 ಉದುರಿತ (ಅಣಲು)

ಪಾಡಱಿದಂತರಂಗವಿರಹವ್ಯಥೆಯಂ ಬರೆ ತೋಡುವಂತೆ ಬಾ
ಯ್ಗೂಡಿ ಪೊದಟ್ಟಿ ಕಣ್ಬನಿಯ ಮುಂಬದದಿಂ ಪೊನಲೊಳ್ ಮುಱುಂಕಿ ತೇಂ
ಕಾಡಿ ಕೊರಲ್ಪೊಣರ್ಚಿ ಪುಳಕಂ ನೆಗೆದಪ್ಪಿನ ಹಮ್ಮುದಂಗಳಿಂ
ಕೂಡುವ ಗಗ್ಗರಿಕ್ಕೆ ಮೆಱೆದೊಂದಿ ನಿಮಿರ್ದುವು ಜಕ್ಕವಕ್ಕಿಗಳ್ ೬೭

ತನಿವಣ್ಣಂ ಪೊರೆಬಿಟ್ಟು ಕುತ್ತಿಸಟ್ಗಿಳೊತ್ತಿಂದೋಡಿ ನಿಂದೂಡುವ
ಬ್ದನಿಯೊಳ್ಗೀಸಗೆಯುಂಡು ಪಾಡುವಳಿಯಿಂ ಚಾಂಡಾಳಬಾಳಾಕಳ
ಧ್ವನಿಯೊಳ್ ಮಂದ್ರತೆಯಂ ತಗುಳ್ಚಿ ಕಿವಿಯೊಕ್ಕೀಸಂಗದಿಂ ಸೌಖ್ಯ ಸಾ
ಯನಿಕಂ ತಾನೆನಿಸಿತ್ತು ಸೆಜ್ಜೆವನೆಯೊಳ್ ಸುಪ್ರಾತಗೀತಾನಿಲಂ ೬೮

ನವರೋಮಾಂಚದ ಕೀಲ್ ಸಡಿಲ್ದು ತೊಡೆ ತೋಳ್ ಮೈಯೆಲ್ಲಮೆಚ್ಚತ್ತು ಚಿ
ತ್ರವಧೂಬಾಲಮೃಣಾಳಬಾಹುತಿಲಕಾಸಂಶ್ಲಿಷ್ಟರತ್ಯಂತಿಕೋ
ತ್ಸವಸಂಸ್ಕಾರಿಕಮಾಗೆ ಕಣ್ದೆಱೆದುಮೊಂದೇಕಕ್ಷಣಂ ನಿಂದು ಮೈ
ಸವಿದೆಟ್ದಂ ಮಣಿಮಂಚತಲ್ಪತಲದಿಂ ಸಾಹಿತ್ಯರತ್ನಾಕರಂ ೬೯

ಇದು ಪರಮಜಿನಸಮಯ ವನವಸಂತ ಸಂತಾನಾರಾಮ ರಾಮಚಂದ್ರ ಮುನೀಂದ್ರ
ಪ್ರಾಸಾದಾಸಾದಿತ ರತ್ನತ್ರಯಾಭರಣ ಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿ ಬಿರುದ ಕವಿಬಾಳಲೋಚನ ಜನಾರ್ಧನದೇವ
ವಿರಚಿತಮಪ್ಪ ಅನಂತನಾಥ ಪುರಾಣದೊಳ್
ಕೌಮುದೀಮಹೋತ್ಸವವರ್ಣನಂ
ಅಷ್ಟಮಾಶ್ವಾಸಂ

# ನವಮಾಶ್ವಾಸಂ

ಶ್ರೀರಮಣೀ ಕುಚಹಾರಂ
ಪೇರುರದೊಳ್ಕಣ್ಗೆ ನೀಡಿ ನಿಜರೋಚಿಃ ಕ
ರ್ಪೂರಮನುಪ್ಪವಡಿಸಿದಂ
ಕಾರಣಪುರುಷಂ ವಿನೇಯಜನಮುಖತಿಲಕಂ ೧

ವ|| ಅಂತುಪ್ಪವಡಿಸಿ ಪ್ರಾಭಾತಿಕಕ್ರಿಯಾಕರಣಪರಿಣತಾಂತಃಕರಣಂ ಕರಣತ್ರಯ ಶುದ್ಧ ಸಿದ್ಧಗುರುಪಂಚಕಪದಪ್ರಪಂಚಸಂಚಿತ ಸಪರ್ಯಾಶ್ಚರ್ಯಜಾತನಾಶ್ಚರ್ಯಗೀತಾತೋದ್ಯನೃತ್ಯಮಂಗಳಸಂಗೀತಪ್ರಚುರದರ್ಶಿತಪ್ರಭಾವಂ ಪ್ರಭಾವಭಾಸುರಭಕ್ತಿಭರನಮಿತನರೇಂದ್ರಸುರೇಂದ್ರಮಕುಟಮಣಿಕಿರಣಚಂದ್ರಚಕಿತನೃಗೇಂದ್ರಪೀಠೋಪಕಂಠಾಶ್ಲಿಷ್ಟರಾಜ್ಯರಾಮಣೀಯಭೋಗೋಪಭೋಗಸುಖಸಂಕಥಾವಿನೋದದಿನಿರ್ಪಲ್ಲಿ

ವಸುಧಾಮಂಡಳಮೆಯ್ದೆ ತೆತ್ತಿಸುವ ಚೈತ್ಯಂಗಳ್ಗೆ ದಾನಕ್ಕೆ ಪಾ
ತ್ರಸಮೂಹಂ ದಿಟಮೆಯ್ದದೆಯ್ದದು ದಿಶಾಚಕ್ರಂ ನೃಪೇಂದ್ರಾಜ್ಞೆಗಾ
ಗಸಮುಂ ಲೋಕಮುಮೆಯ್ದದೀತನ ಯಶಃಶ್ರೀನರ್ತನಕ್ಕೆಂಬಿನಂ
ಪಸರಂ ಬೆತ್ತುದು ಸಾರ್ವಭೌಮವಿಭವಂ ಭೂಪಾಲಸರ್ವಜ್ಞನಾ ೨

ವ|| ಅಂತು ನಿತ್ಯನಿರಂತರಸುಖಾನುಭವಭೋಗರಾಗಾವಿಳಾಸಪರಿಮಳಾಧಿವಾಸಿತಕುವಳಯಂ ಕುವಳಯದಳವಿಲೋಲಲೋಚನೆಯಪ್ಪ ರತ್ನಮಾಲಾಮಹಾಮಹಿಳೆಗೆ

ಉದಯಿಸಿ ರೂಪಲಕ್ಷಣವಿಲಾಸಗುಣಾವಳಿ ತನ್ನೊಳಚ್ಚನೊ
ತ್ತಿದುದೆನೆ ತೋರ್ಪಿನಂ ವಿಜಯನೆಂಬ ಕುಮಾರನ ಯೌವರಾಜ್ಯಸಂ
ಪದದೊಳಮಾಧಿರಾಜ್ಯನಿಜಲೀಲೆಯೊಳಂ ಪಿತೃವೃದ್ಧರಾಜ್ಯಸಂ
ಪದದೊಳವೊಪ್ಪಿದಂ ಸಿರಿಯ ಮುಪ್ಪುರಿವೊಲ್ಬುವನೈಕಭೂಷಣಂ ೩

ಜಸದಿಂ ಮೌಕ್ತಿಕಮೌಳಿಯಂ ದಿಗಧಿಪರ್ ಸಿಂದೂರಸೀಮಂತಮಂ
ದೆಸೆವೆಂಡಿರ್ನಿಜತೇಜದಿಂ ಮಹಿಮೆಯಿಂ ರಾಜನ್ವತೀನಾಮಮಂ
ವಸುಧಾವಲ್ಲಭೆ ತಾಳ್ದೆ ತಾಳ್ದಿದನನಂತಂ ಸಾಗಸಂಸಾರಸಂ
ತಸದಿಂದಂ ಪದಿನೈದು ಲಕ್ಕೆಬರಿಸಂ ಸಾಮ್ರಾಜ್ಯಸೌಖ್ಯಂಗಳಂ ೪

ವ|| ಅಂತು ಜಗತ್ಪೂಜ್ಯಮಾದ ರಾಜ್ಯಲಕ್ಷ್ಮೀಸಪ್ತಾಂಗಸಂಗತಿಯೊಳ್ ಹರ್ಷರಸಪುಳಕಸಸ್ಯಮನುತ್ಕರ್ಷಂಮಾಡಲು ಕಾರುಣ್ಯಧಾರಾವರ್ಷಪುಣ್ಯಘನಾಘನಮನೋಲಗಿಸಿ ಘನತೆಗಾಲಂಬನಮಾಗಲವಸರಂಬಡೆದಂತೆ

ಒದವಿದ ಕಾರೊಳದ್ರಿಗಳ ಬೇಗೆ [1]ತೆರಳ್ದಿದು ದೇಡಹು[1]ಂಡನಾ
ದುದು ಬಿಸಿಲೇಱಿತ್ತು ಕಟ್ಟಿದುದು ಸಂಬಳಮಂ ಕಳಹಂಸವಾಳಿ ಮೆ
ಟ್ಟಿದುದು ತುಡುಂಕಿ ಸೋಗೆ ಮೊಳೆಯಾಳ್ಮಿಡುಕು[2]ತ್ತಿದ[2] ಮಿಂಚು ಕೆಚ್ಚಲೊ
ತ್ತಿದುದು ಪಯೋಧರಾವಳಿ ತಳರ್ನಡೆಯಿಟ್ಟುದು ಪಶ್ಚಿಮಾನಿಳಂ ೫

ಕೆಂಗೊನರ್ವೋಯ್ತು ಸಲ್ಲಕಿ ಕದಂಬಮರಲ್ದುದು ಜಂಬು ದೋರೆವ
ಣ್ಣೊಂಗಲನಾಂತುದತ್ತ ಕತರಂ ಪರಲೊತ್ತಿದುದಿತ್ತ ಕೇತಕಂ
ಪೊಂಗಱಗಟ್ಟಿತೆಂದು ಪಲ[3]ವೊಯ್ಯೆಯಿ[3]ನೀಕ್ಷಿಸುವಂತಿರಾದುವೆ
ತ್ತಂ ಗಿರಿಕುಂಜದೊಳ್ಕುಣಿದು ಕೂಗುವ ಸೋಗೆಯ ಕಣ್ಣ ಪೀಲಿಗಳ್ ೬

ಅವನೀದೃಶ್ಯಾಂಜನಕ್ಷೇಪಣವಿಪುಳಕಪೋಲಂ ಶಿಖಂಡಿ ಸ್ಫುರಿತ್ತಾಂ
ಡವರಂಗಂ ಸಾಂದ್ರಚಂದ್ರೋದಯಮಮರಸರಿತ್ಪದ್ಮಪತ್ರೋದನೀಲೀ
ನಿವಹಂ ಪರ್ಜನ್ಯದೋಹಕ್ಷಮಬಹುಮಹಿಷೀಸಂಕುಲಂ ಯಾಮಿನೀಸಂ
ಭವಶುಂಭನ್ಮಂದಿರಂ ನಿಂದುದು ಪಿಕರುಚಿರೋತ್ತಾಳಮಂಭೋದಜಾಳಂ ೭

ಮೇಲಲೆವ ಮುಗಿಲ ಹೊದಱನ
ಮೂಲೆಗಳಂ ನೆಗೆದ ಕೊರಡು ಕೊಂಡವೊಲೆತ್ತಂ
ಸಾಲಟ್ಟುವೆರಲವಟ್ಟೆಯೊ
ಳಾಲಿವರಲ್ವೆರಸು ತೋರವನಿ ಕೊಳ್ಗಾರೊಳ್ ೮

ಗಜಗಳ್ಮೆಳ್ಪಿಸೆ ಗೋಣ್ಮರಲ್ದು ಮಡಪಿಟ್ಟಂ ಬಿರ್ಚಿ ಚಂಚೂಪುಟಂ
ದೆಱೆದಳ್ಕೆತ್ತಿದಿರ್ವಾಜಿ ಪೀರ್ದು ನಭದೊಳ್ಪಾರ್ಥಾರೆಯಂತೀರೆ ನೈ
ಮಱುಕಂ ಸೊರ್ಕಿನಳುರ್ಕೆಗಾಲಿವರಲಂ ಪೊಯ್ದಣ್ಣೆ ಕಲ್ಲಾಡಲುಂ
ತಿಱುಕಲ್ಲಾಡಲದೇಂ ತಗುಳ್ದುವೊ ಮನಸ್ಸಂಪ್ರೀತಿಯಿಂ ಚಾತಕಂ ೯

ಪೂತೆಱಗಲುಮುದಬಿಂದುಗೆ
ಬಾತೆಱಗಲುಮಿಟ್ಟ ವೊಟ್ಟೆಗೋತೆಱಗಲುಮೇಂ
ಕೇತಕಮುಂ ಚಾತಕಮುಂ
ಪೋತಕಮುಂ ಕಾರ ಮುಗಿಲೊಳಡಹಡಿಸಿದುವೋ ೧೦

---

1 ಶಳ್ಪಿ (ದೇಡು) ಮು (ಸೂಸು) 2 ತ್ತೆಳ (ಸೂಸು) 3 ವನಲಕ್ಷ್ಮಿಯ (ಸೂಸು)

ನನೆಗೋಲ್ಕಬ್ಬಿನ ಬಿಲ್ಮದಾಳಿಕುಳಲೇಖಾವರೌರ್ವಿಯೆಂಬರ್ಮನೋ
ಜನಬಿಲ್ಲಂ ಪುಸಿಯಲ್ತು ಮಾಡುತಿಗೆ ನಾನಾವರ್ಣದಿಂ ಮಿಟ್ತುವೆಂ
ದೆನಸುಂ ಬಾಯ್ಬಿಡೆ ಕಾಮುಕಾವಳಿ ಪಯೋಭೃತ್ಕೃಷ್ಣವಕ್ಷಸ್ಥಳೀ
ವನಮಾಲಾಮಯವೇಂ ಪೊದಟ್ದಿಸದುದೋ ಗೀರ್ವಾಣಬಾಣಾಸನಂ ೧೧

ವಾಸವಚಾಪಮೆಂಬ ಮಣಿಮಂಟಪದೊಳ್ ಮೊಬಿಗೆಂಬ ವಾದ್ಯಮಂ
ಗೋ[1]ಷಿಸಿ[1] ಮೇಘಮೆಂಬ ತೆರೆಯಿಂದೆ ತಟನ್ನಟಿ ಬಂದು ನಾಟ್ಯವಿ
ನ್ಯಾಸದೆ ಕೊಂಕಿ ನಿಂದು ಕುಸುಮಾಂಜಳಿಯಂ ಕುಡೆ ಮುತ್ತುಮಾಣಿಕಂ
ಸೂಸಿದುವೆಂಬಿನಂ ಪರೆದುವಾಲಿವರಲ್ಗಳುಮಿಂದ್ರಗೋಪಮುಂ ೧೨

ಬಱಿಬಱಿನಾಗೆ ತಾಳಿಸಿದನುರ್ವರೆಯಂ ರವಿ ಸುಟ್ಟನೆಮ್ಮನಿಂ
ತಱಿಗುಲಿಯೆಂದು ವಾರಿದಕೆ ಮುದ್ದಿಸಿ ಹುಯ್ಯಲನಿಕ್ಕುವಂದದಿಂ
ಟಱಟಱಱೆ ಕುಱೆಕುಬೆಚೆಟಟಟಟಜಟವೆಂದುವೆತ್ತಲುಂ
ಕೆಱೆಕೆಱೆ ಬಾವಿ ಬಾವಿ ತೊಱೆ ಪೊರ್ದೆಱೆದಪ್ಪುದೆ ದರ್ದುರವ್ರಜಂ ೧೩

ಹಿಮರೋಚಿ: ಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂ
ಕುಮದಿಂ ಭಾವಿಸಿ ಚಂದನಾಂಬುಗಳ ನೀರಂ ಪೊಯ್ದು ಹಾರೀತರ
ತ್ನಮಯಿಶುಕ್ತಿಯೊಳಿತ್ತಿ ಬಯ್ತುನಜನೆಂಬಂತಾಯ್ತು ಹೊತೆಟ್ಗಿಯೊಳ್
ಸುಮನಸ್ಸಾಯಕನಸ್ತ್ರಸೌರಭರಮಾಸಾಕೇತಕಂ ಕೇತಕಂ ೧೪

ಇನನಿದಿರೆಟ್ದಿ ಕಾರ್ಮುಗಿಲ ಬಾರಿಗೆ ಬಿಟ್ದಿನೊ ತಳ್ತ ಬಳ್ಳಿವಿಂ
ಚಿನ ಬಲೆಯಲ್ಲಿ ಸಿಕ್ಕಿದನೊ ಹೊಯ್ವ ಸಿಡಿಲ್ಗೊಳಗಾಗಿ ನಿಂದನೋ
ಘನಜಳಧಾರೆಯಿಂ ಕರಗಿ ಹೋದನೋ ತನ್ನನೆ ಕಾಣನೆಂದು ಪ
ದ್ಮಿನಿ ನಲವಾಡಿದಳ್ ಮಧುಕರಧ್ವನಿಯಿಂ ಪಲವಾಗಿ ಬಾಡಿದಳ್ ೧೫

ಬಿರಿಮುಗುಳಾದ ಜಾದಿಯೊಳಲುಂಬಿ ಮುಸುಂಬನರಲ್ದಮೊಲ್ಲೆಯಂ
ಮುರಿದು ಕರ್ದುಂಕಿ ಸೋಂಕಿ ಗಿರಿಮಲ್ಲಿಗೆಯುಳ್ಳಿಸಳಂ ಕದಂಬಕೇ
ಸರಮನೆಱಂಕೆಯಿಂ ಕೆದಱಿ ಲೋಧ್ರಲತಾಂತದ ಬಂಡನುಂಡು ಗಾ
ವಂಸಿದುವಾದಮುಗ್ಗಲಿಸಿ ಕೇದಗೆಯೊಳ್ ಮದಭೃಂಗಮಾಳೆಗಳ್ ೧೬

---

1 ಸನೆ (ಅ)

ಅಂತು ಮೊಗಮಂ ನೋಡಲಿಳೆಯೆ ಕಣ್ದೆಱೆದಂತೆ
ಮಣಿಬೀಡು ರಜ ಧರಣಿಯೊಳ್ನೆಗೆದುಪೋರಂತೆ

ಕಲ್ಲಪೊಗರೆಯೊಳಿಟ್ಟ ಕಾರ್ಮುಗಿಲ ಮೊಟ್ಟೆಗಳ್
ತಾಮೆನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್

ತರದೆ ಪಾಱುದುವು ಬೆಳ್ವಕ್ಕಿ ನೂಲ್ದೆಗೆದಂತೆ
ನೆರೆದ ಕಾಮನ ಬಿಲ್ಗೆ ಬಿಳಿಯದಿರು ಬಿಗಿದಂತೆ

ಕರಡಿ ಕೈಯಿಟ್ಟೆಡೆದು ತಿನಲೆ ವಲ್ಮೀಕಮಂ
ಕೈಯಿಟ್ಟು ಬರೆದೆಗೆದುದೋಱಲೆಯನನೇಕಮಂ

ಭೋರೆಂದು ಕೊಳುವ ಪೆರ್ಮೞೆಗೆ ಕರಿ ಕರಿಣಿಯಂ
ತನ್ನ ಪರಿಯುದವಣಿಯೊಳಿಕ್ಕಿತ್ತು ಕರಿಣಿಯಂ

ಚಿಕ್ಕವಂ ಮೊಲೆಯೆಡೆಯೊಳಿಕ್ಕಿ ಪಿಡಿದುದು ಮತ್ತೆ
ಪುಲ್ಲೆಗಳ ಪಿಂಡೊಡೆಯದೊಡನೆ ಮೆಯ್ವಿದಿರುತ್ತೆ

ಕಿವಿಯೊಳಗೆ ಗೋಣ್ಕುಸಿದು ಕುಸಿದು ಬಾಲಮನುಡುಗಿ
ಕುತ್ತುಱೊತ್ತಂ ಪಿಡಿದು ಪಿಡಿದುವಿನಿಸಂ ನಡುಗಿ

ನೆರೆದಿಳೆಯುಕುಂಬೆನ್ನನಿೞಿಯಲೊಲ್ಲದೆ ಹರಿಣ
ನಿರ್ದುದು ಸಿಡಿಲ್ಗೆ ಬಿೞ್ಪುದೆಂದು ನಿಜಹರಿಣಿ

ಸಿಡಿಲ ದನಿಗಗಿದು ಶಬರನನಪ್ಪಿದಳ್ ಶಬರಿ
ಬೆಂಬಿಡಿದು ಸೋಗೆನವಿಲೊಳ್ ಸೆಣಸುತಿರೆ ಕಬರಿ

ಬಸಿಱನಪ್ಪಿದ ಮಱುಗಳಂ ಹೊತ್ತು ಸಾಲ್ಗೊಂಡು
ಮರದ ಪೋೞಲ್ಗೆ ಸಾರ್ದುವು ಕೋಡಗದ ಹಿಂಡು

ಪೊಕ್ಕು ಕುಕ್ಕಱುಸಿ ಜೋಂಪಿಸಿ ಕಲ್ಲ ಪೊಗರೊಳಂ
ನೆಮ್ಮಿ ಪುಲಿ ಸಮಱುದುವು ಕಟವಾಯ ಸವಿಗಳಂ

ತೊರೆದುಗುವ ತೋರಮೊಲೆಗಳನುಂಡು ಕಱುಪಿಂಗೆ
ಪಾಲಧಾರೆಗಳೊಕ್ಕುಂ ನೊರೆಯ ಪಿಂಡಲು ಪೊಂಗೆ

ಬೆನ್ನಮೇಲಣ ಪನಿಯೊಳುಣ್ಮೆ ನೆಗೆತರವೆರ್ಮೆ
ಕೋಡೆಕೊಂಡುವು ಮಿಕ್ಕನಿಱುವುತುಂ ಕಾಡೆರ್ಮೆ

ಪಸಲೆಯೊಳ್ಪಸುರೇಱೆ ಪರಪಿನೊಳ್ಪೊರೆಯೇಱೆ
ಗಿಡುಗಳೊಳ್ ದನಿ ದೋಱೆ ಗೊಡಲೆಯೊಳ್ನೊರೆವೇಱೆ

ನಿಱಿನಿಱಿದು ತೆರೆಯಿಱಿದು ಕಿಱುಮೞಲ ದಿಣ್ಣೆಯೊಳ್
ಪರಿವ ಬರಿವೊನಲೆಸೆದುವೋರೊಂದು ತಾಣದೊಳ್
ನೆಲವುತ್ತಿನೊಳ್ಪೊನಲು ಪುಗೆ ಪಾವು ಪೊಱಮಟ್ಟು
ಪಡೆಗಳಂ ಕೊಡೆಗಳಂತೆತ್ತಿದುವು ಕಡೆಪಟ್ಟು
ವಾಹಿನೀತೀರಮಂ ಮಿಾಂಗಳಿದಿರೇಱಿದುವು
ಪುಗುವ ಕಾಟ್ಪೂರಮಂತದು ದೀಪ್ತಿಯಂದದಿಂ
ಮೆಱೆವ ಮೇಷಾಂಗಮಂ ನಲ್ಲರ್ಗೆ ರಾಗಮಂ
ಸುರತಸುಖಭೋಗಮಂ ವಿರಹಿಗುಬ್ಬೇಗಮಂ

ವ॥ ಅಂತು ಬಂದ ವರ್ಷಾಗಮದೊಳಕಾಲಕನಕಧಾರಾವರ್ಷವರ್ಷಧರಪರ್ವತಸ್ತೋಮಾಭಿರಾಮ ರತ್ನಪ್ರಾಸಾದ ಶಿಖರ ನಿರ್ಯೂಹಪರ್ಯಂಕಮಂಡಳದೊಳಿರ್ದ ಪರಿವ ಮುಗಿಲ ಪಾಱುವ ಬಳಾಕದ ಸುರಿವ ಕರಕದ ಸೂಸುವ ತಂದಲ ಸುೞಿವ ತಂಬೆಲರ ಸುತ್ತುವ ಚಾದಗೆಯ ಬಿತ್ತರಂ ಬಡೆದ ವಿಯತ್ತಳಮೆಂಬ ಚಿತ್ರಶಾಲೆಯಲ್ಲಿ

ಗಗನೀ ಚಿತ್ರಿಕೆ ಬಾಲಭಾನುಕರಮಂ ಕಣ್ಣಿಟ್ಟು ಕೊಯ್ದಿಟ್ಟ ಬ
ಟ್ಟಗೆಯಿಂ ಕಜ್ಜಳಸಜ್ಜಿತಾಬ್ದಫಳಕಪ್ರಾಗ್ಭಾಗದೊಳ್ ದಿಟ್ಟಗಂ
ಬಗೆಗಂ ಕೌತುಕಮಪ್ಪಿನಂ ಬರೆವವೊಲ್ಚೆಲ್ವಾದುದಂ ನೋಡಿದಂ
ಜಗದೀಶಂ ನವನಾಗಬಂಧಘಟನಾಸೌಧಾಮಿನೀಧಾಮಮಂ ೧೭

ನೋಡಿದ ಕಣ್ಗಳ್ ತುಱುಗೆಮೆ
ಗೂಡದ ಮುಂ ಪರೆದು ಪೋಣ್ದು ಸೊಂಕಿದ ನಭಮು
ಳ್ಪಾಡಿಸಿದುದು ಮಸ್ತಕಮಂ
ಮಾಡಿದುದು ದೇವನಂಗುಳಿಚ್ಛೋಟನಮಂ ೧೮

ಇದೇಂ ಭ್ರಮೆಯೊ ಮಾನವರ್ಗಮುಮ ಜೀವನಂ ಜೀವನ
ಪ್ರದಕ್ಕೆ ದೊರೆ ಜನ್ಮನಂ ದಿವಿಜಚಾಪದಿಂ ಚಾಪಳಂ
ಪೊದಟ್ದಿ ಸಿರಿಯೆಂಬುದಿಂತೊಗೆದ ಮಿಂಚುವೋದಂಚೆಯೊ
ಳ್ಪದೃಕ್ಷಮೆನಲೊಲ್ಲರೀ ಭವದೊಳುಂಡೊಡಂ ಕಂಡೊಡಂ ೧೯

ಘನರುಚಿಯೆಂದೊಡಂ ಸುರಶಾಸನಮೆಂದೊಡಮಬ್ಜಪತ್ರಜೀ
ವನಕಣಮೆಂದೊಡಂ ಹೊನಲ ಬುದ್ಬುದಮೆಂದೊಡಮೆಯ್ದೆ ತೋರ್ಪ ಮಿಂ
ಚಿನ ಪೊಳಪೆಂದೊಡಂ ಜಲಧರೋಪಲವರ್ತುಲಮೆಂದೊಡಂ ಜಡಾ
ತ್ಮನುಮಱಿದಿಕ್ಕಿ ಮಾನಸರ ಮಾನಸವಾಳ್ಗಭಿಧಾನಮೆನ್ನಿರೇ ೨೦

ಮಱೆಯಂ ಕಾಲನಿದೇಕೆ ಮೈಮಱವಿರೆಂದೂರ್ಡಂಗುರಂ ಪೊಯ್ವವೊ
ಲ್ಪಱೆ ಪೊಯ್ದೆತ್ತುವ ಬಂಧುವರ್ಗಶಬಮುಂ ಕಂಡುಂ ಕೆಲರ್ಚಿಂತಿಸರ್
ಮಱೆಮೆಯ್ಯಂ ಪಲವಾದ ಪೋದ ಭವಮುಂ ಜಾತಿಸ್ಮರರ್ಕಂಡೊಡಂ
ಮಱೆದಿರ್ಪರ್ಗಡ ಕಾಣದರ್ಕಟಱಿವರೇ ವ್ಯಾಮೋಹಬಂಧಂಗಳಂ ೨೧

ಊಡಿದೊಡುಡಿಸಿದೊಡಂ ಕೊಂ
ಡಾಡಿದೊಡಂ ಮತ್ತಮೞಿವ ತನು ಉೞಿದಪುದೇ
ಕೋಡಗದ ಕೆಯ್ಯಮಾಲೆಗೆ
ಬಾಡಿರ್ದಪುದೆಂದು ಬಱಿದೆ ನೀರ್ದಳಿವಂದಂ ೨೨

ವ॥ ಅಂತು ನಿಜಾಂತರಂಗದೊಳ್ ಬಗೆದು ಶರೀರಭೋಗನಿರ್ವೇಗಪರನಾಗಿ ಸಭಾಭವನಕ್ಕೆ ಬಂದು ಸಾಮ್ರಾಜ್ಯಭಾರಮಂ ವಿಜಯಕುಮಾರನೊಳ್ನಿಲಿಸುವ ಬಗೆಯಿಂ ಮಂತ್ರಿಪುರೋಹಿತಾಂತರ್ವಂಶಿಕಾದಿಪರಿಜನವನಿತುಮಂ ಬರಿಸಲೊಡಂ

ಜನಕಂ ಶ್ರೀ ಸಿಂಹಸೇನಂ ನಿಜಜನನಿ ಜಯಶ್ಯಾಮೆ ಬಂಧುಪ್ರತಾನಂ
ತನುಜಾತರ್ ಮಂತ್ರಿಗಳ್ಮಂಡಳಿಕಮುಕುಟಬದ್ಧರ್ಕಳೆಂದೆಲ್ಲರುಂ ಬಂ
ದು ನಿಜಶ್ರೀಪಾದಪೀಠಾಂತದೊಳಿರೆ ಹೃದಯೋದ್ಯೋಗಮಂ ಪೇೞ್ದು ಕಾರು
ಣ್ಯನಿದಾನಂ ಪುಣ್ಯಸಿಂಧುಪ್ಲವಮೊಗೆತರೆ ದಂತಾಂಶುವಿಂತೆಂದನಾಗಳ್ ೨೩

ಕೇಳಿರೆ ಭವಜಳನಿಧಿಕ
ಲ್ಲೋಳಾವಳಿಯೊಳಗೆ ಮೂಡಿಯುಂ ಮುೞುಗಿಯುಮಾ
ವೇಳಂ ಧರ್ಮಬಹಿತ್ರನಿ
ರಾಳಂಬಂ ಕುದಿವುದಕಟ ಜಡಜನಮನಿತುಂ ೨೪

ಆವೆಡೆಯೊಳುಮಿಲ್ಲ ಸುಖಂ
ಕೈವಲ್ಯದೊಳಲ್ಲದನ್ನೆಗಂ ದೇಹಿಗಳಂ
ತೀವುವ ಕೆಡಹುವ ಯಂತ್ರಘ
ಟಾವಳಿಗಳ ಹೊರಳೆಯಂತೆ ವಿಧಿ ತಿರಿಗಿಸುಗುಂ ೨೫

ಕ್ರಮದಿಂದುತ್ತಮಮಧ್ಯಮಾಧಮವಿಧಕ್ಷೇತ್ರಂಗಳೊಳ್ಪುಟ್ಟಿ ಭೋ
ಗಮನುಣ್ಬಾರ್ಯರ ಬಾಳ್ಕೆ ಪಲ್ಯಗಣನಂ ಪಲ್ಯೋಪಮುಂ ಸಾಗರೋ
ಪಮಿತಂ ಜ್ಯೋತಿರನಂತಕಲ್ಪಜರೊಳಾಯುಃಪಿಂಡಮೆಂಬಾಗಳ
ಯ್ಯಮನುಷ್ಯರ್ಕಳ ಜಾತಿಮೃತ್ಯುಸಮಯಂ ಪೋಲಲ್ಕೆ ಸಲ್ತಕ್ಕುದೇ ೨೬

ವ॥ ಅಂತುಮಲ್ಲದೆಯುಂ

ಅದನೇಗೇಳ್ದಪಿರಣ್ಣ ನಾರಕರನಂತಾನಂತದುಃಖಂಗಳೊಳ್
ಕುದಿಯುತ್ತಿರ್ಪ ದುರಂತದುಃಸ್ಥಿತಿಗಳಂ ಪೇಳ್ವಂಗೆ ಮೆಯ್ಯೊಡೆ ಪೇ
ಳ್ವುದು ಕೇಳ್ವಂಗಣವೆತ್ತಿ ತುತ್ತನಿಟಿಪಲ್ಕೈವಾರದ[1]ನ್ನೊಂದು[1]ಕ
ರ್ಮದ ಸಾಮರ್ಥ್ಯಮೆ ದೇಹಿಗೆಯ್ದಿಸುವುದಂತಾ ನಾರಕಾವಸ್ಥೆಯಂ ೨೭

ಓಳಿಯನಿರ್ದುದೇೞು ನರಕಂಗಳೊಳಗ್ರಿಮರತ್ನಶರ್ಕರಾ
ವಾಳುಕಪಂಕಧೂಮರುಚಿ ನಾಲ್ಕೆಡೆಯೊಳ್ಕರನಿತ್ತು ಸೀಸಕು
ತ್ಕೀಳಮೆನಿಪ್ಪ ಘರ್ಮಮುೞಿದಿರ್ದ ಸಮೇತತಮಸ್ತಮಃ ಪ್ರಭಾ
ಭೀಳಮಹಾತಮಃ ಪ್ರಭೆಯೊಳಾರಸಮಂ ಬಲಿವಂತುಶೀತಳಂ ೨೮

ವ॥ ಅಲ್ಲಿ

ಕಾಗೆಯ ಗೂಗೆಯೊಟ್ಟಿಯ ಸೃಗಾಲದ ಕತ್ತೆಯ ಬಾಯ್ಗಳಂತೆ ಮೆ
ಯ್ಯೋಗಡಿಸಂತು ಪೆರ್ಮಡುಕೆನಾತದ ಯೋನಿಮುಖಂಗಳಿಂದೆ ಬಿ
ಟ್ಟಾಗಳನೇಕಶಸ್ತ್ರಮುಖದಿಂ ತನುಜಾಳತಿಯೋದನೋವಿನೊಳ್
ಕೂಗಿಡೆ ಭವ್ಯನಾರಕರನೋವದೆ ಕಂಡು ಪುರಾಣನಾರಕರ್ ೨೯

ಮೃಗಮುಂ ಬೆನ್ನಟ್ಟುವ ಕು
ನ್ನಿಗಳಂತಿರೆ ಗೂಗೆಯಂ ಕರಂ ಮುಸುಱುವ ಕಾ
ಗೆಗಳಂತಿರೆ ತಗೆಯುತ್ತುಂ
ಬಿಗಿಯುತ್ತುಂ ಬಯ್ದು ಬಗ್ಗಿಸುತ್ತುಂ ಸುತ್ತಂ ೩೦

ಪಿಡಿವರ್ಕಟ್ಟುವರಿಕ್ಕಿ ಮೆಟ್ಟುವರೊಱಲ್ವಂತುರ್ದುವರ್ಗುರ್ದುವರ್
ಸುಡುವರ್ ಸುಂಟಗೆಕಾಸುವರ್ಬರಿಯ ಬಾಡಂ ತೋಡುವರ್ಕೊಯ್ದು ಬೆ
ನ್ನೆಡೆಯಿಂದಂತದನುರ್ಚುವರ್ಸಮನೆ ಸೀೞ್ವರ್ಕುತ್ತುವರ್ ನೆತ್ತರಂ
ಕುಡಿವರ್ ಕೋಪದೊಳೆಯ್ದೆ ರೂಪಿಡೆ ವಿಭಂಗಜ್ಞಾನಮಾವೈರದಿಂ ೩೧

ಕೊಯ್ಯೆ ಪೊರಳ್ಚಿ ಕುತ್ತೆ ಮೊಱೆದಿಕ್ಕಿ ಪಡಂಗಡಿದೊಟ್ಟೆನೆತ್ತಿಯಂ
ಪೊಯ್ಯೆ ಬಟಲ್ದು ವೈತರಣಿಯಂ ಪುಗೆ ಕಾಯ್ದುಱಿಲೋಹವಾರಿ ಚುಂ
ಚುಯ್ಯೆನೆ ಸುಟ್ಟು ಹುಣ್ಣರಳೆ ಮೆಯ್ಯನಿತುಂ ಬಗಿಯಾಗಿ ಬಾಯ್ಗಳಿಂ
ಹುಯ್ಯಲನಿಕ್ಕುವಂ ಕೊಳಱು ಕೊಳ್ಗುದಿಗೊಂಡು ಮುಗ್ಗುವರ್ ೩೨

1. ಮುಮ್ಮ (ಸೂ ಸು)

ಪೊಸಸುಣ್ಣ ಸೊಡು ಬಾಡಿರೆ
ಬಸಮುಱಿದು ಬಱಲ್ದು ನೆಱಲ ಕಳಕಳದಿಂ ಪೊ
ಕ್ಕಸಿಪತ್ರವನದ ಕೊರೆಲೆ
ಕುಸುಮದ ಕೊನೆಕೊಯ್ದು ಕೊಱೆದು ಕುಱುದಱಯಪ್ಪರ್ ೩೩

ಅಱನಂ ಮಱೆದಾಚಾರಮ
ನುಱದೊಲ್ದಂತೆಸಗಿ ಬಿಟ್ದಿರೆ ನರಕದೊಳಿಂದಿಱು
ದಿಱುದಿಱುದು ಸುಡುವ ತೆಱದಿಂ
ದಱುಪುವುದು ಭವಂಗಳಂ ವಿಭಂಗಜ್ಞಾನಂ ೩೪

ವ|| ಆ ವಿಭಂಗಜ್ಞಾನದಿಂ ಜಾತಮಾದ ಪರಸ್ಪರೋದೀರಿತ ವೈರಂಗಳೊಳ್ಕಂಡ ಕೋಪಮಾರ್ಟ್ಪಿ ದಂಡಖಂಡನಂಗಳಲ್ಲದೆಯುಂ ಕರಾಳರಪ್ಪ ತಳಾಱರೂಕ್ಷರಾಕ್ಷಸರ್ಪಿಡಿದು

ತನಿಗಳ್ಳ ತವಕಿಗಂ ಬಾ
ಡಿನ ಬಾಕುಳನೀತನೆಂದು ಲೋಹದ ರಸಮಂ
ತನು ಕುಡಿಯೆ ಕುಡಿಯಿಪರ್ಕ
ಲ್ಲನೆ ಕಾಸಿದ ಕೆಂಡಮಂ ಮೊಗಂಗಿಡಿಗಿಡಿವರ್ ೩೫

ಪುಸಿನುಡಿವಂಗೆ ಬಾಯ್ಕಿನಗಮೆಯ್ದದು ನಾಲಗೆಯೊಂದು ಸಾಲದೆಂ
ದೆಸಱಿಸಱಾಗಿ ಸೀಳ್ದು ನಿಡುನಾಲಗೆಯಂ ಕಟದೆಲ್ವು ಸೀೞೆ ಸೀ
ೞಿಸಿ ಕಟವಾಯ್ಗಳಂ ಹುಸಿಯೊಳಾದ ಫಳಂ ಸವಿನೋಡಿದೆಂದು ಗಾ
ತ್ರಿಸುವರನೇಕರೂಕ್ಷವಿಷತಿಕ್ತಕಠೋರಮೆನಿಪ್ಪ ಖಾರಮಂ ೩೬

ಕರೆದಪಳಿಂದೊಡಾ ಸುಳಿದಳಿಂದೊಡೆ ಮಾಲೆಯನಿತ್ತಳಿಂದೊಡಾ
ಸರಿಸದೆ ಬಾಯ ತಂಬುಲಮನಟ್ಟಿದಳಿಂದೊಡೆ ಮೆಲ್ಪ ಬಾಯ್ಗಳು
ಬ್ಬರಿಸುವ ಮೂಗಿನೊಳ್ಪರಿವ ಕಣ್ಗಳೊಳಾಲಿಪ ಕರ್ಣದೊಳ್ತಗು
ಳ್ದುರಿಪುವಯಶ್ಯಲಾಕೆಯನೆ ತೆತ್ತಿಸುವರ್ ಪರವೆಣ್ಗೆ ಕೂರ್ಪರಂ ೩೭

ನೇರಿದುವಿದೆ ಬಿಟ್ಟದುವಿದೆ
ತೋರಿದುವಿದೆ ಚಕ್ಕನಪ್ಪಿಕೊಳ್ಳೆಂದಿಱುವರ್
ಜಾರೆಯರ ಮೊಲೆಗೆ ಕೂರ್ಪರ
ಪೇರುರದೊಳ್ಕನಲೆಕಾಯ್ದ ಲೋಹದ ಗುಂ ೩೮

ಕಡಿದೊಡೆ ಕೋದೊಡೆ ಸೀೞ್ದೊಡೆ
ಬಿಡಿಸಿದೊಡೆ ಬಿಸುಟ್ಟೊಡುರುಪಿ ಸುಟ್ಟೊಡೆ ಹೞಿಯಂ
ತೊಡಲಿರ್ಪುದು ವಿಕ್ರಿಯೆಯಿಂ
ಸುಡು ಸುಡು ನಾರಕರ ನಮೆವ ಸಮೆಯದ ಸಾವಂ ೩೯

ಒಂದಕ್ಕೊಂದಿರ್ಮಡಿಯೆನೆ
ಸಂದೇೞುಂ ನರಕದವರ್ಗಳೊಡಲುನ್ನತಿಯಂ
ಬೆಂದಾಯುಷ್ಯಮುಮಧಿಕಂ
ಕುಂದದ ಕೋಟಲೆಯ ಕುದಿಪಮುವರ್ಗೆನಿವಿರಿದೋ ೪೦

ತವದಾಯುಷ್ಯಮುಮೇೞ್ಗುಂದದೊಡಲುಂ ಪಾಪಕ್ಕೆ ಪಕ್ಕಾಗಿ ಕೂ
ಡುವಿನಂ ಕೋಟಲೆ ಕೋಟಿ ಕೂಡೆ ಸಹಜಂ ಶಾರೀರಜಂ ಮಾನಸೋ
ದ್ಭವವಾಗಂತುಕಮುಗ್ರರಾಕ್ಷಸಕೃತಂ ತಾನೆಂಬ ದುಃಖಾಗ್ನಿ ಪಂ
ಚವಿಧಂ ಪಂಚತೆ ಮುಟ್ಟೆ ಪಂಚುಪಜೀಂಮಾೞ್ಕುಂ ನಾರಕಾನೀಕಮಂ ೪೧

ನರಕಂಗಾಣದ ಕಣ್ಗಳತ್ತಣದು ಘೋರಾಕಾರದುರ್ವಾರದು
ಸ್ತರದುಃಖಾಕರಮೆಂದು ಬಿತ್ತರಿಸಲೇಕೀ ಲೋಕದೊಳ್ತೀವೆ ಹೇ
ೞಿರೆ ಕುತ್ತಂ ಪಗೆ ಮುಚ್ಚು ನಿರ್ಧನತೆ ದೈನ್ಯಂ ಯಾಚ್ಞೆ ಭೂಪಾಲ ತ
ಸ್ಕರ ದಾಯಾದ ವಿಷಾಗ್ನಿಬಾಧೆಯಿವು ಕೇಳೀ ನಾರಕಾವಸ್ಥೆಯಂ ೪೨

ಬೇಡರ ಕೋಲ್ಗೆ ವಾಗುರಿಗೆ ಶಸ್ತ್ರಕೆ ಕೂಳಿಗೆರಳ್ದ ನಾಯ ಕೂ
ರ್ದಾಡೆಗೆ ನೇಣ್ಗೆ ಚಮ್ಮಟಿಗೆಗಂಶುಕಕಿಟ್ಟೊಳಗಾಗಿ ಬೆಟ್ಟಿದರ್
ಬಾಡಿಸುವೇಱ ಬಾಡಿಸುವ ಹೇಱುವ ಕಟ್ಟುವ ಕುಟ್ಟುವಾವಗಂ
ಹೊಡುವ ದುಃಖದಿಂ ತಿರಿಕಜಾತಿಯ ಕೋಟಲೆ ಕುಂದದೊರ್ಮೆಯುಂ ೪೩

ಇದು ಜೀವಕ್ಕೆ ಚತುರ್ಗತಿಭ್ರಮಣಮಿಂತೀ ಭ್ರಾಂತಿಗಂ ಕರ್ತೃವಾ
ವುದು ಕರ್ಮಂ ಬೞಿಸಲ್ವ ಕರ್ಮರಿಪುವಂ ಗೆಲ್ವೊಂದು ಬಲ್ಗೈದುವಾ
ವುದೊ ಸದ್ದರ್ಶನದೀಕ್ಷೆ ದೀಕ್ಷೆಯಫಲಂ ಕೈವಲ್ಯಮಿಂ ಪೇೞಿದಾ
ವುದುವಿಲ್ಲೆಂದನಿದಂ ವಿನೇಯಜನಚಿತ್ತಾಂಭೋಜಿನೀಭಾಸ್ಕರಂ ೪೪

ತಡೆಯದು ಜವ್ವನಂ ಪದವಿ ನಿಲ್ಲದು ಕೊಲ್ಲದೆ ಮತ್ತೆ ಕುತ್ತಮೋ
ಗಡಿಸದೊಡಂ ಕಿಡಲ್ಪರಸಿ ಪುಟ್ಟಿದುದೆಂದಱಿದೀ ಪ್ರಪಂಚಮಂ
ಬಿಡುವ ಮನೀಷೆಯಂ ಕೆಡದ ನಿತ್ಯಸುಖಂ ಬಿಡದಾರ್ಗದೇಂ
ಕಿಡುವುದೆ ಕೆಟ್ಟುಪೋಗಿ ಕಿಡದಂತುಟು ಬರ್ಪೊಡೆ ಲಾಭಮೆನ್ನಿರೇ ೪೫

ಇಂತಿರೆ ಬೆಸಸಿದ ದಿವ್ಯೋ
ದಂತಾಮೃತವರ್ಷಮೆಸಗೆ ಹರ್ಷಮನವನೀ
ಕಾಂತನನಂತಮನಂತಂ
ಗಿಂತೆಂದರ್ ವಿನಯವಿನಮಿತೋಜ್ಜ್ವಲಮಕುಟರ್ ೪೬

ಪರುಷಮೆ ಮುಟ್ಟೆ ಕರ್ಬುನಮೆ ನಿನ್ನ ಪದಾಂಬುಜಸೇವಕರ್ಗೆ ಸಂ
ಸರಣ ನಿ[1]ಪಾ[1]ತಮೇಂ ಬಳಿಕ ದೇವರ ದೇವರಲೋಕಮೆಮ್ಮನಿಂ
ತಿರಿಸದೆ ಬರ್ಪುದೆಂದೆಮಗೆ ನೀಂ ದಯೆಗೆಯ್ವುದನುಜ್ಞೆಯಂ ಕೃಪಾ
ಪರ ಪರಮಾರ್ಥವೇದವಿದ ವೇದವಿದಧ್ಯವಸಾಯತತ್ಪರಾ ೪೭

ಪೃಥುಹೃದಯರ್ ಸಾಸಿರ್ವರ್
ಪೃಥಿವೀಶರ್ ಬಗೆದರಿಂತು ನುಡಿದಘಸಂಘೋ
ನ್ಮಥನಂಗೆ “ ಯಥಾ ರಾಜಾ
ತಥಾ ಪ್ರಜಾ ”ಯೆಂಬಿನಂ ಸಭಾಜನಮನಿತುಂ ೪೮

ಹೃದಯನಿಮಿತ್ತ ಮಿತ್ರವನಿತಾಸುತಬಂಧುಸಮೂಹ ನಮ್ಮನ
ಭ್ಯುದಯಸುಖೋಚ್ಚಳತ್ಪುಟಕಸಂಕುಳವರ್ಮ ಮದೀಶ ದಿವ್ಯವಾ
ಗ್ವಿದಿತ ಸುಧರ್ಮಮಾ ಸಭೆಯೊಳಿಂದು ವಿರಕ್ತನೃಪಾಳಜಾಳಮಿ
ರ್ದುದು ತೆಗೆಯಾಳನಾಯ್ತು ತೆಗೆದಂತೆ ಕೊಳಲ್ಕಪವರ್ಗದುರ್ಗಮಂ ೪೯

ಪರಿಷನ್ಮಂಡಲಮಿಂತನಂತಪರಿನಿಷ್ಕ್ರಾಂತ ಪ್ರಬುದ್ಧಪ್ರಮೋ
ದರಸಾವೇಶದಿ ನಿಂದುದಾ ಸಮಯದೊಳ್ಸಾರಸ್ವತಾದಿತ್ಯವ
ಹ್ನ್ಯರುಣಪ್ರಸ್ಫುಟಗರ್ದತೋಯತುಷಿತಾವ್ಯಾಬಾಧಕಾರೇಷ್ಟರೆ
ಣ್ಬರುಮೆಯ್ತಂದರಮರ್ತ್ಯಲೋಕಮುನಿಮುಖ್ಯಬ್ರಹ್ಮಕಲ್ಪಾಗ್ರದಿಂ ೫೦

ವ॥ ಬಂದು ಸಮುಚಿತಪ್ರದೇಶದೊಳ್ನಿಂದು

ಅವರಭವನಂಘ್ರಿಯೊಳ್ ಸೂ
ಸುವ ಮಂದಾರಪ್ರಸೂನದೊಳ್ಪಾಯ್ದುವು ಮು
ನ್ನವನತಮಕುಟಮಣಿಪ್ರಭೆ
ನವರತ್ನದ ತುಂಬಿವಿಂಡು ಮಂಡಳಿಸಿದ ವೊಲ್ ೫೧

ವ॥ ಅಂತು ವಿನಮಿತೋತ್ತಮಾಂಗರುಂ ವಿನಯಭರಾಕುಂಚಿತಾಂಗರುಮಾಗಿ

---

1 ಪೋ (ಅಇಉ)

ತೃಣಮಾತ್ರಂ ತ್ರಿಜಗದ್ವಿಭೂತಿ ನಿನಗಂಘ್ರಿದ್ವಂದ್ವಪಂಕೇರುಹ
ಪ್ರಣತಂ ದುಶ್ಚ್ಯವನಾದಿದೇವನಿವಹಂ ನಿಶ್ಶ್ರೇಯಸಶ್ರೀವಧೂ
ಪ್ರಣಯಂ ನಿನ್ನನಲಂಪಿನಿಂದಿದಿರ್ಗೊಳಲ್ಕಿರ್ದತ್ತೆಲೇ ವಿಶ್ವಭೂ
ಷಣ ನೀಂ ಭೂತಳರಾಜ್ಯಮಂ ಬಿಸುಟೆಯೆಂಬೀಕಾರ್ಯಮಾಶ್ಚರ್ಯಮೇ ೫೨

ಪರಮಜ್ಞಾನನಿಧಾನ ನಿನ್ನ ಪದಪದ್ಮಾಸಕ್ತಿಯಿಂದೆಮ್ಮ ನಿ
ರ್ಜರಜನ್ಮಕ್ಕೆ ಕೃತಾರ್ಥವರ್ತನೆ ವಚಃಪೀಯೂಷದಿಂ ಪಾರಣಾ
ಚರಣಂ ಕರ್ಣಪಥಕ್ಕೆ ಸಂಭವಿಸಲಾವೇಟ್ಟಿಂದಮೇಂ ಮುಕ್ತಿದೇ
ವರನುಂ ಬೋಧಿಪೊಡಳ್ಕಱಿಕೊಳ್ಳರೆಯದೇ ಖದ್ಯೋತಮುದ್ಯೋತಮಂ ೫೩

ಸಾರಸ್ವತಾದಿಗಳ್ ಜಗ
ದಾರಾಧ್ಯನನಂತು ನುತಿಯನುಜ್ಜೀವಿಸಿದರ್
ಶಾರದಸಮಯಂ ಪೂರ್ಣಸು
ಧಾರುಚಿಗತ್ಯುಜ್ಜ್ವಳತ್ವಮಂ ಪ್ರಕಟಿಸವೊಲ್ ೫೪

ವ॥ ಅಂತು ಬಿನ್ನವಿಸಿ ಲೋಕಾಂತಿಕದೇವರುಂ ತದ್ವಾಸಕ್ಕೆ ಸಂದರತ್ತಲ್

ಅವಧಿಯಿನಭವನ ನಿಷ್ಕ್ರಮ
ಣವಿಶೇಷೋತ್ಸವಮನಱಿದು ನಿಜಪೌಲೋಮೀ
ಭವನವನಜ್ಯೋತಿಃ ಕ
ಲ್ಪವಾಸದಿಕ್ಪಾಲಜಾಲ ಹೇಳಾಲೋಳಂ ೫೫

ಕೆದಱುತ್ತಂ ಕುಸುಮೋಪಹಾರಚಯಮಂ ನಾನಾವಿಮಾನಪ್ರತಾ
ನದ ರತ್ನಾಂಶುಗಳಿಂದಮಿಂದ್ರಧನುವಂ ಬೀಱುತ್ತುಮೈರಾವತೋ
ನ್ಮದ ಸೌರಭ್ಯಸುಗಂಧಿಗಂಧವಹನಂ ಮುಂದಟ್ಟುತುಂ ಬಂದನಾ
ತ್ರಿದಶೇಂದ್ರಂ ನಿಖಿಳಾಮರಪ್ರಮುಖಸಪ್ತಾನೀಕಿನೀಸಂಯುತಂ ೫೬

ವ॥ ಅಂತು ಚತುರ್ನಿಕಾಯ ನಿಕಾಯ ಸಮೇತಮಾ ಸಾಕೇತಪುರಕ್ಕೆ ವಂದರ ಮನೆಯಂ ಪೊಕ್ಕು ಸಭಾಭವನಮನಳಂಕರಿಸಿರ್ದ ಭುವನತ್ರಯಾಭರಣನ ಪಾದಪೀಠದೊಳ್ ಕೆದಱುವ ಪಾರಿಜಾತಪ್ರಸೂನಪ್ರತಾನಕಾನತ ಕಿರೀಟಮಣಿಗಣಚ್ಛವಿಗಳಿಂ ಕದಂಬದಳದ ಬಂಬಲಂ ಪಡೆದು ಪರಿನಿಷ್ಕ್ರಮಣಮಂಗಳೋದ್ಯೋಗಮನೇಕಮುಖದಿಂ ಪೊಗೞ್ದು ತನ್ನ ಬೆಸದಿಂ ಸಮೆದ ಪುಣ್ಯಜನೇಶ್ವರನ ಪುಣ್ಯಪುಂಜದ ಪಂಜರದಂತಿರ್ದಭಿಷವಣಮಂಡಪಕ್ಕೆ ಭುವನಮಂಡಪಮಾಣಿಕ್ಯಕಳಶನಂ ತಾನೆ ಕೈಗೊಟ್ಟು ಬಿಜಯಂಗೆಯ್ಸಿ

ಮಂಗಳದ್ರವ್ಯಾನುಲೇಪನಮಾಲಾಪರಿಕರಪರೀತಕರಸರಸಿರುಹೆಯರಪ್ಸರಸೆಯರಂ ಮಜ್ಜ
ನಪೀಠದಿಕ್ಕೆಲದೊಳ್ನಿಲಿಸಿ ವೃಂದಾರಕದುಂದುಭಿಗಭೀರಮಂಗಳಾಚಾರಚಾರುನಿರ್ಘೋಷಂ
ಮಾರುತಮಾರ್ಗಮಂ ಮೂವಳಸುವಳಸೆ

ಇದು ಜನ್ಮಾಭಿಷವಕ್ಕಮುಜ್ಜರಿ ಸುಮೇರುಪ್ರಸ್ಥಿತಾಯಾಸಮಿ
ಲ್ಲದೆ ಚೆಲ್ವಾಯ್ತೆನೆ ದುಗ್ಧವಾರಿನಿಧಿಗಂಗಾಸಿಂಧುಸೀತಾನದೀ
ನದ ದಿವ್ಯಾಂಬುಗಳಿಂ ಸುಧರ್ಮನುಱಿದಿಂದ್ರರ್ನಿಂದು ಕೂಗಾಡೆ ಮಾ
ಡಿದನಾಸೇಚನಮಂ ಜಗತ್ಪತಿಗೆ ಸತ್ಕಾರ್ಯಂ ತ್ರಿಕಲ್ಯಾಣದೊಳ್ ೫೭

ಅನಂತರಮನಂತಕರ್ಮವಿಜಯಂಗೆ ರಾಜ್ಯಾಭಿಷೇ
ಚನಂ ನೆಱೆಯೆ ಪಟ್ಟಮಂ ನೆರೆದು ಕಟ್ಟೆ ಬೊಟ್ಟಿಟ್ಟರಂ
ದನಂತಪದಪಂಕಜದ್ವಯದ ರೇಣುವಿಂದಾತನಾ
ವಿನಮ್ರನಿಟಿಲಾಗ್ರದೊಳ್ ಸಚಿವರುಂ ಚಮೂನಾಥರುಂ ೫೮

ವ|| ಆ ಸಮಯದೊಳ್

ಉಱಿದುರ್ವೀತಳರಾಜ್ಯಮಂ ಬಿಸುಟು ನಮ್ಮಂ ಪೋದಪಂ ಸ್ವಾಮಿಯುಂ
ದಬಿಲಲ್ಕಾಗದು ಘಾತ್ಯಘಾತಿವಿಜಯಪ್ರಸ್ಥಾನಮೆಂದಟ್ಟಿಱಿ
ಗ್ಗಲಿಕೆಯಂ ವಿಾಱಿ ಜಗದ್ವರಂ ತಿಳಿಪಿದಂ ತಾಮೆಲ್ಲರುಂ ಮಾಳ್ಪುದಂ
[1]ಪೊಲು[1]ತ್ಸಾಹಮನೆಂದು ಕೂಡೆ ಪಡೆವಳ್ಳಂ ಡಂಗುರಂಬೊಯ್ಸಿದಂ ೫೯

ವ|| ಆಗಳಾಡಂಗುರಗಳೆಂಬ ರಿಗ್ಗವಣೆಯ ಪಱಿಗಗ್ಗಲಿಸುವ ನಗರ ನರ್ತಕಿ
ಯರ ಚಿತ್ತ್ರದಂತಿರೆತ್ತುವ ತೋರಣದ ಕಟ್ಟುವ ಗುಡಿಯ ಮೊಳಗುವ ಬದ್ದವಣದ
ಬೆಳಗುವ ಕನ್ನಡಿಯ ತೀವುವ ಕಳಶದ ಭಾವಿಸುವ ಬಣ್ಣಪುರದ ಸೂಸುವ ಸೌರಭ್ಯದ
ಪಾಸುವ ಮಾಲೆಯ ಪಾಡುವ ಮಾಂಗಳಿಕದ ಆಡುವ ನರ್ತನದ ಬಿತ್ತರಿಸುವ ಬೀದಿಗಳ
ಕತ್ತರಿಸುವ ರಂಗವಲ್ಲಿಯ ನರ್ತಿಸುವ ವೈತಾಳಿಕರ ಕೀರ್ತಿಸುವ ವಂದಿಗಳ ಪೂರೈಸುವ
ಶಂಖದ ಸೂಳೈಸುವ ಭೇರಿಗಳ ಸೂಳ್ಪಡೆವ ಕಹಳೆಗಳ ಕೋಳಾಹಳಮೆಸೆಯೆ ಮದಿಲಮಾ
ಳಿಗೆಗಳ ನಾಟಕಶಾಲೆಗಳೊಳ್ ಕೂಡೆ ನಿಂದು ನೋಡಲ್ ನೆರೆದ ಪುರಜನದ
ಸಂಭ್ರಮಂಗಳಿನಾ ಪುರದ ಕ್ಷೋಭಮನಂತನಾಥ ಪ್ರಾವ್ರಾಜ್ಯಪ್ರಕರಕ್ಕಮನಂತವಿಜಯ
ಪಟ್ಟಬದ್ಧಾನುಕ್ರಮಕ್ಕಂ ಸಕ್ಕಸಮನಾಗಿರೆ ತೆಕ್ಕನೆ ತೀವಿ ತುಱುಂಕಾಡುತಿರ್ದುದಿತ್ತಲ್

1 ಪುರದು (ಅಃಉಱು)

ಅವನೀಭೂಷಣನಂಗಸಂಗಮೆಮಗಿನ್ನಿಲ್ಲಿಂದೆ ಕಣ್ಣೆವಿ ನೋ
ಡುವವೆಂಬಂತಿರನಂತಭೂಷಣಮಣಿಪ್ರದ್ಯೋತಿ ಕೈಗಣ್ಮೆ ಪೊ
ಣ್ಮುವಿನಂ ವಾಸವನೊಲ್ದಲಂಕರಿಸಿ ಪೌಳೋಮೀಮುಖಾಮರ್ತ್ಯವಾ
ರವಧೂಕೋಟಿಗಳಿಂ ಮಹಾಮಹಿಮನಂ ನೀರಾಜನಂ ಮಾಡಿದಂ ೬೦

ವ॥ ತದನಂತರಂ

ಪುಳಕಂ ಕೈಮಿಗೆ ನೋಡಿ ನೋಡಿ ಮಗನಂ ಹರ್ಷಾಶ್ರುವಿಂ ಸೇಸೆಯಂ
ತಳಿಯುತ್ತುಂ ತೆಗೆದಪ್ಪಿಕೊಂಡು ಪರಸುತ್ತುಂ ನಿಂದ ತಾಯ್ತಂದೆಯಂ
ಲಲಿತಾಪಾಂಗದಯಾಸ್ಮಿತಪ್ರಸರದಿಂ ತಳ್ಕೈಸಿ ಬೀಳ್ಕೊಂಡು ಮಂ
ಗಳಲಕ್ಷ್ಮೀಮಸೃಣೋಪಮಂ ಶಿವಿಗೆಯಂ ಶ್ರೀನಾಥನೊಲ್ದೇಱಿದಂ ೬೧

ವ॥ ಆಗಳ್

ನೆರೆದು ಪೊತ್ತ ನೃಪಾಳಜಾಳಕಿರೀಟಕೋಟಿಮಣಿಪ್ರಭಾ
ಪರಿಕರಂ ಧೃತವರ್ಮೌಕ್ತಿಕಾತಪವಾರಣಕ್ಕೆ ಕದಂಬಝು
ಲ್ಲರಿಗಳಪ್ಪಿನಮುಂದುಸಾರದದಂತೆ ತಾಳ್ದಿದುದಿತ್ತಲುಂ
ಸುರಶರಾಸನದಿಂದಮೆಣ್ದೆಸೆ ತಟ್ಟಗಟ್ಟಿದ ಭಂಗಿಯಂ ೬೨

ವ॥ ಅದಲ್ಲದೆಯುಂ

ಮಂಡಳಿಸಿರೆ ಸಾಸಿರ್ವರ್
ಮಂಡಳಿಕರ್ ಪುಷ್ಪಕಂಗಳಿಂ ಪೊತ್ತುದಿಳಾ
ಮಂಡನನ ಶಿಬಿಗೆ ತಾರಾ
ಮಂಡಳದಿಂ ಬಳಸಿ ನಿಂದ ಶಶಿಮಂಡಳಮಂ ೬೩

ವ॥ ಅದಲ್ಲದೆಯುಂ

ನೀರಾಜಿಸುವಾರಾಧಿಸು
ವೋರಂತಿರೆ ನಿಂದು ನೋಟ್ಪ ಪೌರರ ನಯನೋ
ದಾರಚ್ಛವಿಯೊಳ್ ದುಗ್ಧಪ
ಯೋರಾಶಿಯ ನಾವೆಯಂತೆ ನಡೆದುದು ಯಾನಂ ೬೪

ಗಗನತಳಂಗಳೊಳ್ ಖಚಿತರತ್ನಕದಂಬದ ಕಾಂತಿ ಬಣ್ಣವ
ಣ್ಣಿಗೆಯ ಮುಗಿಲ್ಗಳಂ ಕೆದಱಿ ತಚ್ಛಿಬಿಕಾಶಿಖರಂ ಪಳಂಚೆ ಮೇ
ಲ್ಮುಗಿಲನದಂಬರೇಚರರ ಸೂಳ್ಪಿಗಲೊಳ್ಸುರಭೂಜದಂಡಮ
ಲ್ಪುಗುವಲರ್ದಂಡದೊಳ್ಮುಗಿಲ ಮುತ್ತಿನ ಬೆಳ್ಸರಿಯಾಯ್ತು ಸುತ್ತಲುಂ ೬೫

ವ॥ ಅದಲ್ಲದೆಯುಂ

ಒಡೆವಂದಗ್ಗದ ಭೂಭುಜರ್ಮಕುಟಬದ್ಧರ್ಪೊತ್ತುಕೊಂಡೊಯ್ದರೇ
ಬಿಡಿಯಂ ಖೇಚರವಲ್ಲಭರ್ ಬಱಿಯಲಂಪಿಂ ಪೊತ್ತು ಕೊಂಡೊಯ್ದರೇ
ಬಿಡಿಯಂ . . . . . . . . . . . ಪೊತ್ತುಕೊಂಡೊಯ್ದರೇ
ಬಿಡಿಯಂ ಶಕ್ರರೆ ಪೊತ್ತರತ್ತಲವತಾರೋದ್ಯಾನದೇಶಂಬರಂ ೬೬

ಆಡುವ ಖೇಚರಾಮರನರ ಪ್ರಮುದಾಕರಲಾಸ್ಯಮೆತ್ತಲುಂ
ಪಾಡುವ ಸಿದ್ಧಕಿಂಪುರುಷಕಿನ್ನರಕನ್ನೆಯರಿಂಪುವಾದ್ಯದೊಳ್
ಕೂಡುವ ಯಕ್ಷರಾಕ್ಷಸರ ಕೆಯ್ಯ ಘಟಾವಣೆ ದಿವ್ಯಯಾತ್ರೆಯೊಳ್
ಕೂಡೆ ಮಹೋತ್ಸವಂಬಡೆದುವಂದು ಸಹೇತುಕನಂದನಂಬರಂ ೬೭

ವ॥ ಆ ನಂದನದ ಮಧ್ಯಪ್ರದೇಶದೊಳ್

ನನೆಗಂ ಕೆಂದಳಿರ್ಗಂ ಫಳಕ್ಕಮಳಿವೃಂದಂ ಕೋಕಿಲಂ ಕೀರಮೆಂ
ಬಿನಿತುಂ ತಪ್ಪುತಡಂ ಕರ್ದುಂಕಲನೆಗಂ ಭೂಜಂಗಳಂ ಮುತ್ತೆ ಮು
ತ್ತಿನ ಮಾಣಿಕ್ಯದ ಪಚ್ಚೆಯಚ್ಚವೆಳಗಿಂ ಬೆಚ್ಚಂತೆ ಚೆಲ್ವಾಯ್ತು ದೇ
ವನ ದೀಕ್ಷಾಮಣಿಮಂಡಪಂ ಧನದಕೃತ್ಯಂ ಶಕ್ರಸತ್ಕಾರಿತಂ ೬೮

ವ॥ ಆ ಮಂಡಪದ ಮಕರತೋರಣದ್ವಾರೋಪಕಂಠದೊಳ್ನಿಂದು ದೇವರಾಜಂ ರಾಜಾಧಿರಾಜನಿಂದಿಳಿದು ಮನುಜದಿವಿಜಯಕ್ಷರಾಕ್ಷಸವಾನವ್ಯಂತರಾನಂತಕೋಟಿ ದುಂದುಭಿಧ್ವಾನಂ ಬಾನಮೆಸೆಯೆ ಬಳ್ವಳಬಳೆಯೆ ಬಂದು ಪೊಕ್ಕು

ಸೊದೆಲೋವೆ ಮೆಱೆವ ಮಣಿಮಾ
ಡದ ರನ್ನದ ನಡುವಣಿಂದುಕಾಂತಶಿಲಾಪ
ಟ್ಟದ ಮೇಲಭವಂ ವಿಧುಬಿಂ
ಬದ ಮೇಲಣ ಲಕ್ಷ್ಮಬಿಂಬಮೆನೆ ಕುಳ್ಳಿದುಂ ೬೯

ವ॥ ಅಂತು ಪೂರ್ವಾಭಿಮುಖನಾಗಿ ಕುಳ್ಳಿರ್ದು

ತ್ರಿದಶಾಧೀಶ್ವರನಾಂತ ಹಸ್ತಪುಟದೊಳ್ ಕೊಟೀರಮಂ ಕೊಟ್ಟು ಬೆ
ರ್ಚಿದೊಡೇಂ ದೇವರಚಕ್ರಿ ಕೂರ್ತು ಕುಡುವಂ ನಿಶ್ಶ್ರೇಯಸಶ್ರೀಯ ಚಿ
ತ್ರದೊಳಾನಿರ್ದಪೆನೆಂದು ಸಂತಸದಿನಾನಂದಾಶ್ರುವಂ ಸೂಸುವಂ
ದದಿನಲ್ಲೊಕ್ಕುವು ಬಿಟ್ಟ ಕೇಶಭರದಿಂ ಮಂದಾರಕಾಕುಟ್ಮಳಂ ೭೦

ತೊಲಗಿಸಿದ ವಸ್ತ್ರಭೂಷಣ
ಕುಲದಿಂ ತ್ರಿಭುವನ ವಿಭೂಷಣಂ ನಿಜಸುಖ ಸ
ತ್ಫಲಭರಿತಮಾಗಿ ಸೊಗಯಿಸಿ
ದೆಲೆಲೆಕ್ಕದ ಪಾರಿಜಾತಮಿರ್ಪಂತಿರ್ದಂ ೭೧

ವ॥ ಆಗಳ್ ಪುಳೋಮಜಾತಾಸಮೇತಮಿಂದ್ರಾಣಿವೃಂದಮನಿತುಂ ನೀರಾಜನ ಭಾಜನವ್ಯಗ್ರಹಸ್ತಪ್ರವಾಳೆಯರಾಗಿ ಸುತ್ತಿಱಿದು ನಿಂದಿರೆ ಮಾಂಗಲ್ಯ ವಸ್ತುಸಂಗತಹಸ್ತ ರಾಗಿ ದೇವೇಂದ್ರರೊಡನೆ ತಳ್ತಿರೆ ಸೌಧರ್ಮೇಂದ್ರನುಮೀಶಾನೇಂದ್ರನುಂ ಮಂಗಳಮಂಟ ಪದುಭಯದ್ವಾರದೊಳ್ ಪೆಱಗಣೊಳಗಣ ಕಳಕಳಮಂ ನಿವಾರಿಸುತ್ತುಮಿರೆ

ಸಮತೆ ಸಮಸ್ತಭೂತದೊಳೊಡಂಬಡೆ ಪಂಕರುಹಾಸನಕ್ಕೆ ಸಂ
ದಮರ್ದಿರೆ ಸೌಖ್ಯಮಂ ನೃಪತಿ ಪಂಚಪದಾಂಚಿತ ಪಂಚಮುಷ್ಟಿ ಪಂ
ಚಮಗತಿಯೆಯ್ದಿಸಲ್ ನೆಱೆವುದಂ ತಱಿಸಂದಪವರ್ಗಮಾರ್ಗದೊಳ್
ಸಮನಿಸಿದಂದದಿಂ ಕಿೞಿಪಿದಂ ಕುಟಿಲಾಳಕಜಾಳಕಂಗಳಂ ೭೨

ಇತ್ತ ನಮುಸ್ಸಿದ್ಧೇಭ್ಯಯೆ
ನುತ್ತುಂ ಪತಿ ಕಿತ್ತ ಕುಂತಳಂಗಳನಿಂದ್ರಂ
ಮುತ್ತಿನ ಪಡಲಿಗೆಯೊಳ್ ತಳೆ
ದಿತ್ತಂ ಪಾಲ್ಗಡಲ ಸಿರಿಗೆ ನೀಲದ ತೊಡವಂ ೭೩

ವ॥ ಅದಲ್ಲದೆಯುಂ

ತ್ರಿದಶಜನೇಶನೊಯ್ದು ಬಿಡೆ ಪಾಲ್ಗಡಲೊಳ್ ನವಕಂಬುವೆಂಬ ಪ
ದ್ಮದ ಮಱಿದುಂಬಿಯಂತೆ ಸಿರಿ ನೀಡಿದ ನುಣ್ದೆರೆಯೆಂಬ ತೋಳ್ಗೆ ದಂ
ತದ ಬಳೆಯಂತಿರಲ್ ಸುಳಿದ ಸುತ್ತುವ ಬೆಳ್ನುಳಿಯೆಂಬ ಚಂದ್ರಬಿಂ
ಬದ ಕಱೆಯಂತೆ ತೋಱಿದುದು ಕುಂತಳವಾಗಳನಂತನಾಥನಾ ೭೪

ವ॥ ಆ ಬಾಹ್ಯಾಭ್ಯಂತರಮೆಂಬ ತಿರೋಧಾನಂ ತೆಗೆದು ಪರಮಪಾವನತಪಸ್ತ ರುಣಿಯ ವಿವಾಹಮಹೋತ್ಸವಮನಾಂತ ಪರಮಪುರುಷನಂ ನಿವಾಳಿಸುವರ್ಚಿಸುವ ಪೊಡೆ ಮಡುವ ಪೊಗೞ್ವ ಸಕಳಜನದ ಜಯಜಯಧ್ವಾನಂ ದಿವಿಜಾನಕಧ್ವಾನದೊಡನೊಡನತ್ತುಳ ಗಮಾಗೆ

ಮನದನುರಾಗಮಂ ಪಡೆವ ಮಂಗಳಲಕ್ಷ್ಮಿಯ ನೋಟ್ಪ ಕಣ್ಗೆ ಮೋ
ಹನಕರಮಿಂತಿವಂ ಪಡೆವರಾರೆನುತುಂ ದಿವಿಜೇಂದ್ರಸಂಕುಳಂ
ತನತನಗಿಟ್ಟು ತೊಟ್ಟು ತಲೆಸುತ್ತಿ ಕರಂ ಮಣಿದತ್ತನಂತಜಿ
ಜ್ಜಿನವರನಿಟ್ಟು ತೊಟ್ಟು ಕಳೆದಿಕ್ಕಿದ ವಸ್ತ್ರವಿಭೂಷಣಂಗಳಂ ೭೫

ಶ್ರೀದೈತೆಯಂ ಬಿಸುಟ್ಟು ತ
ಪೋದೈತೆಗನಂತನಾಥ ಜಿನಪತಿಯುಂ ತಾ
ನಾದಂ ಜ್ಯೇಷ್ಠದ ಕೃಷ್ಣ
ದ್ವಾದಶಿಯಪರಾಹ್ಣಸಮಯದೊಳ್ ರೇವತಿಯೊಳ್ ೭೬

ಸಾಕ್ಷಿತ್ರಾಯಕನಾಗಿ ಮು
ಮುಕ್ಷುಮಹಾಪದಮನಾಂತ ಮುನಿಭರ್ತೃಗೆ ಬೋ
ಧಾಕ್ಷಿಮನಃಪರ್ಯಯಮಂ
ತಾಕ್ಷಣದೊಳೆ ತೆಱೆದೆಸೆದುವು ಕಣ್ದೆಱೆವಿನೆಗಂ ೭೭

ಧೀರತೆಯನೊಡನೆ ತೊಱೆದು ತ
ಪೋರಮಣಸಹಸ್ರಮಂತು ಬಳಸಿರ್ಪಿನೆಗಂ
ತಾರಾನಿಕರಂ ಬಳಸಿದ
ಮೇರುವಿನಂತಿರ್ದನಾ ಜಗತ್ರಯತಿಲಕಂ ೭೮

ವ॥ ಆ ಪರಮೇಶ್ವರನ ಚರಣಸರಸಿರುಹಮಂ ಭಕ್ತಿಭರದಿನರ್ಚಿಸಿ ಪೂಜಿಸಿ ಪೊಗಟ್ದು ಪೊಡೆವಟ್ಟಾಡಿ ಪಾಡಿ ಪರಿಪುಷ್ಟಾಂತರಂಗನಾಗಿ

ನಯನಾಂಭೋಘೃತವರ್ಧಿತೇಶ ವಿರಹಾಗ್ನಿಜ್ವಾಲೆಯಂ ರತ್ನಮಾ
ಲೆಯನಿಂದ್ರಾಣಿಯುಮಿಂದ್ರನುಂ ಪಡೆಪಿನಂ ಸಂತೈಸಿ ತಾಯ್ತಂದೆಯುಂ
ನಯದಿಂ ರಾಜಗೃಹಕ್ಕೆ ತಾಂ ಕಳಿಪಿ ಪೋದಂ ದೇವದೇವೇಶನಂ
ಪ್ರಿಯಕ್ಕಾನತನಾಗುತುಂ ಶತಮುಖಂ ದೇವೇಂದ್ರವೃಂದಾನ್ವಿತಂ ೭೯

ವ॥ ತದನಂತರಂ

ವಿಮಳಾಧೀಶ್ವರಧರ್ಮಸಂತತಿಯನಿತ್ತಲ್ಕರ್ಮಭೂಮಧ್ಯದೊಳ್
ಸಮಯಾಚಾರದ ಮಾರ್ಗವರ್ತನದ ಪಾಂಗಿಲ್ಲೆಂಬ ಕಾರುಣ್ಯಭಾ
ವಮೆ ಹೃತ್ಪ್ರೇರಕಮಾಗೆ ಭವ್ಯಜನಭಾಗ್ಯೋಪಾಸ್ತಿಯಂ ಪಾಲಿಸ
ಲ್ಕೆ ಮುನೀಂದ್ರಂ ತಳರ್ದಂ ದ್ವಿತೀಯದಿನದೊಳ್ ಷಷ್ಠೋಪವಾಸಾಂತ್ಯದೊಳ್ ೮೦

ವ॥ ಅಂತು ಪೂರ್ವನಿವೇದಿತಪುಣ್ಯಾಶ್ರಮಾರಣ್ಯದಿಂ ತಳರ್ದು ಅಯೋಧ್ಯಾಮುಖನಾಗಿ ಬರ್ಪಲ್ಲಿ

ಕ್ರಮನವನೀರಜಾವಳಿಗಳಿಂದಿಳೆ ನೀರಾಜನಮಾಗೆ ದೋರ್ಲತಾ
ಸಮುದಯಹಸ್ತಪಲ್ಲವದಿನೆಣ್ದೆಸೆ ಪಲ್ಲವಿತಂಗಳಾಗೆ ಜೋ
ಲ್ದಮೃತಫಲಂಗಳಿಂತಿರೆ ಕಮಂಡಲು ಜಂಗಮ ಪಾರಿಜಾತದಾ
ರಮೆಯವೊಲಾಯ್ತು ಪಿಂದೆ ಸಮುದಾಯ ಸಮಾಗಮನಂ ಮುನೀಂದ್ರನಾ ೮೧

ವ॥ ಆ ಪ್ರವಿಷ್ಟಪುರೀಮಧ್ಯವೀಥೀ ಭಾಗದೊಳ್

ಲಲನಾಯಾಚಕಸೂತಿಕೊಳ್ದಹನ ದೀನಾನಾಥದುಃಕರ್ಮದುಃ
ಕುಲನಂದಿಸ್ಖಲಿತಾಂಗ ಕಾಮುಕಗೃಹದ್ವಾರಂಗಳಂ ಬಿಟ್ಟು ಸ
ತ್ಕುಲಗೇಹೋತ್ತಮ ಮಧ್ಯಮಾಧಮವಿಚಾರಂ ಪಿಂಗಿ ಮಾನಾಪಮಾ
ನಲವಂ ತೋಱದೆ ಬಂದನಿಂದುಗತಿಯಿಂ ಯೋಗೀಂದ್ರವೃಂದಾರಕಂ ೮೨

ಸಮತಾಭಾವತುಳಾತುಳೀಕೃತಮನಂ ಲಜ್ಜಾಭಿಮಾನವ್ಯಪೇ
ತಮುದಂಚನ್ಮುಖನೌನಿತಂ ದ್ರುತವಿಲಂಬೋತ್ತಾನಹೀನಂ ಯುಗ
ಪ್ರಮಿತಾವರ್ಜಿತಲೋಚನಂ ವಿಗತದೋಳಾಂದೋಳನಂ ಕಣ್ಣ ಪು
ಣ್ಯಮದೇನೊಪ್ಪಿದುದೋ ಮುನಿಪ್ರವರನೀಯರ್ಯಾ ಸಿದ್ಧಿವೇಳಾಕ್ರಮಂ ೮೩

ವ॥ ಅಂತು ಸಾಗಾರಾಗಾರವೀಥಿಕಾವಳಯಂ ಸನಾಥಮಾಗೆ ನಡೆತರ್ಪಾಗಳ್

ಇದೆ ಬರುತಿರ್ದಪಂ ಮುನಿಪನೆಂಬ ಮುನೀಂದ್ರನಿವೇದಕಂಗೆ ತಾಂ
ಹೊದೆದುದನಿತ್ತು ವಾರವನಿತಾಜನಪುತ್ರಕಳತ್ರಮಿತ್ರಸ
ನ್ಮುದಸಹ ಮಂಗಳಾನಕರವೋಜ್ಜ್ವಳ ಮಂಗಳಬಂಧಹಸ್ತನಂ
ದಿದಿರ್ಗೊಳಲೆಳ್ದನಾಗಳೆ ವಿಶಾಖನೃಪಂ ಪರಮಾನುರಾಗದಿಂ ೮೪

ವ॥ ಆ ವಿನೇಯಜನಜಂಗಮಪಾರಿಜಾತ ಪಾರಿಜಾತನಂದನಮೆಂಬಂತೆ ಪೊಳೆವ ತೋರಣದ ಮಿಳಿರ್ವ ಕೆಂಗುಡಿಯ ಕಳಶಮುಕುರಸ್ತಬಕದ ಫಳಕುಸುಮವಿಸರದ ಮಂಗಳ ಗಾನದ ದುಂದುಭಿಧ್ವನಿತಕೋಕಿಳಾಳಾಪದ ಮಹೋತ್ಸವವಚ್ಚರಿವಡೆಯೆ ಚೆಚ್ಚರಮಿದಿರ್ಗೊಂಡು

ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾ
ಸಿದ ದುಗುಲಕ್ಕೆ ಬಾಸರದ ಮಾಸರಮಂ ಕುಡೆ ಬಂದ ಯೋಗಿರೂ
ಪದ ನಿಧಿಯಂ ಗೃಹಾಂಗಣದೊಳೀಯೆ ಮುದಶ್ರುಜಳಂಗಳರ್ಘ್ಯಪಾ
ದ್ಯದ ಬಹುಮಾನಮಂ ನಿಱಿಸಿದಂ ಪೊಡೆವಟ್ಟು ವಿನೇಯಭೂಷಣಂ ೮೫

ವ॥ ಅಂತು ಗುರುಭಕ್ತಿಪೂರ್ವಕಂ ವಂದಿಸಿ ನಿಲ್ವುದೆಂದು ನಿಲಿಸಿ ನಿಜ ಗೃಹಾಂತರ್ವನಶುದ್ಧಪ್ರದೇಶಮಧ್ಯಾಸಿತಕಲ್ಯಾಣಪೀಠದೊಳ್ ಸಕಲಕಲ್ಯಾಣಭಾಜನನಂ ಬಿಜಯಂಗೆಯ್ಸಿ

ಪದಪಂಕೇಜದಳಂಗಳಂ ತೊಳೆದು ತತ್ಪುಣ್ಯಾಂಬುವಂ ಪೊತ್ತು ಮ
ಸ್ತದೊಳಾರಾಧಿಸಿ ವಿಶ್ರುತಾಷ್ಟವಿಧದಿಂ ಶುದ್ಧಾನ್ನಮಂ ಮೆಲ್ಲನಿ
ಕ್ಕಿದನಾ ಭೂಪತಿ ಕೆಯ್ಯೊಳಿಕ್ಕಿದನೆ ಪಾತ್ರಕ್ಷೇತ್ರದೊಳ್ಬಿತ್ತನಿ
ಕ್ಕಿದನಾ ಬೀಜದಿನಪ್ಪ ಸತ್ಫಲಮನಂತಿಂತುಂತೆನಲ್ಬರ್ಕುಮೇ ೮೬

ವ || ಅಂತು ನಿರಂತರಿತ ಪರಮ ತಪಶ್ಚರಣಧಾತ್ರಗಾತ್ರಸಂಧಾರಣಪಾರಣಾನಂತರಂ

ಸಾಮಯಿಕಪ್ರಾಯಶ್ಚಿ
ತ್ತಾನವೌಸಿಕನಕ್ಷಯಂ ಭವೇದ್ದಾನಮೆನು
ತ್ತಾಮುನಿಪಂ ಕೆಯ್ಯೆತ್ತಿದೊ
ಡಾ ಮನೆಯೊಳ್ನೆಗೆದುದಿಂತು ಪಂಚಾಶ್ಚರ್ಯಂ ೮೭

ಸಮುದಿತ ನವವಿಧಪುಣ್ಯಂ
ಕ್ರಮಸಪ್ತಗುಣಾಬ್ಧಿ ಭವ್ಯಜನಕುಲಲಕ್ಷ್ಮೀ
ರಮಣಂ ತಣಿಪೆ ಸಹಸ್ರಂ
ಸಮುದಾಯಕ್ಕಾದುದೆಯ್ದೆ ನೈರಂತರ್ಯಂ ೮೮

ಮಂದಾನಿಳನೆಸಗಲೊಡಂ
ವೃಂದಾರಕನಿಲಯಮೆಂಬ ಜಳಧರತಳದಿಂ
ಬಂದುದಲರ್ಮಟಿ ಪೊನ್ಮಟಿ
ದುಂದುಭಿಗಂಭೀರಗರ್ಜಿತಂಬೆರಸಾಗಳ್ ೮೯

ಅನುರಪಟಹಂಗಳೊಡನೊಡ
ನಮರರ ಸಂಕೀರ್ತನಂಗಳೊಗೆದುವಹೋದೇ
ಯಮಹೋಪಾತ್ರಮಹೋದಾ
ನಮೆ ಎನುತ್ತುಂ ಪ್ರಸವಸಂಗಳವನರಮನೆಯೊಳ್ ೯೦

ಪೂರ್ಣಮನೋರಥನಭಿನವ
ಕರ್ಣಂ ಕವಿಕಾಮಧೇನು ತದ್ಬಹುರತ್ನಂ
ಸ್ವರ್ಣ ಮನೋರಥಚಾತು
ರ್ವರ್ಣಕ್ಕಿತ್ತಂ ವಿನೇಯಜನಮುಖತಿಲಕಂ ೯೧

ವ || ಅಂತು ಪಂಚಾಶ್ಚರ್ಯಂ ನೆಗಟ್ಟಿ ಪೊಬಲನಿತುಮಾತನಂ ಪೊಗಟ್ಟಿ ತನ್ಮು
ನೀಂದ್ರವೃಂದಾರಕಂ ಸಾಧುಸಂಘಸಮೇತಂ ಸಹೇತುಕವನಕ್ಕೆ ಬಿಜಯಂಗೆಯ್ವಾಗಳ್

ಎನಗಿಂದೈಹಿಕಪಾರಮಾರ್ಥಿಕಸುಖಂ ಕೈಸಾರ್ದುದಿಂದೆಯ್ದೆ ಪಾ
ವನಮಾಯ್ತೆನ್ನ ಮನುಷ್ಯಜನ್ಮಮೆಸಕಂಬೆತ್ತೆನ್ನ ಗಾರ್ಹಸ್ಥ್ಯಮೀ
ದಿನದೊಳ್ ಸೌಷ್ಠವಮಾದುದಾನೆ ಕೃತಕೃತ್ಯಂ ದೇವ ನಿನ್ನಂಘ್ರಿ ಕೋ
ಕನದಂ ಮೆಟ್ಟಿದುದೀಗೃಹಪ್ರಘಣಮಂ ತ್ರೈಲೋಕ್ಯಚಿಂತಾಮಣೀ ೯೨

ವ॥ ಎಂದು ಗದ್ಗದೀಭೂತೇಪ್ಸಿತಕಂಠಕಂದಳನುಂ ಹರ್ಷೋತ್ಕರ್ಷಿತ ಬಾಷ್ಪವಾಃ ಪೂರನುಂ ಪುಳಕಕಳಿಕೋತ್ಕಳಿತತನುಲತಾದಂಡನುಮಾಗಿ ವನಜವದನದ ರುಚಿಯಂ ಮೆಚ್ಚಿ ಬಿಡಲಾಱದ ಮಱಿಯಂಚೆಯಂತೆ ಕಾರುಣ್ಯಜಲಧಿಯ ಗೌರವಮನಾ ವಿಶಾಖ ನೃಪಾಲನಗಲಲಾಱದೆ ಕಳಿಪುತ್ತುಂ ಕಳಿಯೆ ಪೋಗಿ ತದಾನುಗ್ರಹಮಂ ಮಿಱಲಣ್ಮದೆ ಕಣ್ಮಲರ ಮಾಲೆಯನೆ ಬಟಿಗಳಿಪಿ ಬಂದನಿತ್ತಲ್

ಚರ್ಯಾತಿಚಾರಮಾರ್ಗದೊ
ಳೀರ್ಯಾಪಥಶುದ್ಧಿ ನೆಗೞೆ ನಿಂದಂ ಜಗದಾ
ಚಾರ್ಯಂ ಮೇರುಮಹೀಧರ
ಧೈರ್ಯಂ ತದ್ವನದ ಧವಳಶುದ್ಧೋಪಲದೊಳ್ ೯೩

ಸಮಪಾದನ್ಯಾಸಮಾಲಂಬಿತಭುಜಯುಗಳಂ ನಾಸಿಕಾಕುಟ್ಮಳಾಗ್ರ
ಸ್ತಿಮಿತಾಲೋಕಂ ಸುಷುಮ್ನಾಪರಿಗತಮರುತಂ ಮಾರುತಾಯತ್ತನಿರ್ವ್ಯಾ
ಪ್ತಮನಂ ಚಿಂತಾನಿವೃತ್ತಪ್ರಶಮಿತಕರಣಂ ನಿಂದು ಕೈಯಿಕ್ಕಿದಂ ಸಂ
ಯಮಿ ಬಾಹ್ಯಾಂತರ್ಯನಿಷ್ಟಂ ಪ್ರತಿಕೃತನುತಯೋಗಂ ಸಂಶುದ್ಧೋಪಯೋಗಂ ೯೪

ಸ್ವಪರಪ್ರಕಾಶ ಭಾಸುರ
ಮಪರಂ ಮುನಿಗಿಂದುಕಾಂತಪಾತ್ರದೊಳಚ್ಚಾ
ಚ್ಛಪಯಂ ನಿಂದವೊಲೆಸೆದುದು
ಜಪನವಿಕಲ್ಪಪ್ರಪಂಚಹೀನಧ್ಯಾನಂ ೯೫

ವ॥ ಅಂತು ಮಾಸ್ಯೈಕಮಾತ್ರಪ್ರಕಲ್ಪಿತಪ್ರತಿಮಾಯೋಗನಿರತನಿರ್ದಲ್ಲಿ

ದಿವಿಜಾರಾಧ್ಯನ ನಿಂದ ಮುನ್ನಡಿಗೆ ವಾನವ್ಯಂತರರ್ ಮಾಟ್ಪಿರ
ಷ್ಟವಿಧಾಭ್ಯರ್ಚನಮಂ ವನಪ್ರಮದೆಯರ್ ಮೆಟ್ಟಿರ್ದ ಕಲ್ಲಾಯ್ತುಗ್ಮಿಮಾ
ಸವಿತದ್ಯೋತಿಯಿನೆಂದು ಕೆಂದಳಿರ ಜೊಂಪಂ ಶೀರ್ಷದೊಳ್ ಪಾದಪ
ಲ್ಲವದೊಳ್ ಪಂಕಜಮಾಂಕೆಯಾಗೆ ಮೆಱೆವರ್ ತಂತಮ್ಮ ಸದ್ಭಕ್ತಿಯಂ ೯೬

ವ॥ ಅದಲ್ಲದೆಯುಂ

ಅರಗಿಳಿ ಪಣ್ಗೆ ಬಂದುಣಿಸಲಮ್ಮವು ತುಂಬಿ ಮರಲ್ಪರಲ್ಗೆ ಝೋಂ
ಕರಿಸವು ಕೋರಕಕ್ಕೆ ಕುಕಿಲೆನ್ನವು ಕೋಗಿಲೆ ಮಂದಮಾರುತಂ
ತರುಲತಿಕಾದಳಂಗಳುಲಿವಂತಲುಗಾಡದು ತತ್ತಪೋವನಾಂ
ತರದೊಳಗಾ ಜಿನೇಂದ್ರಮುನಿನಾಥ ಸಮಾಧಿವಿರೋಧಭೀತಿಯಿಂ ೯೭

ವ॥ ಮತ್ತಮಾಮುನೀಂದ್ರಚಂದ್ರನೆಂಬ ಹಿಮವನ್ಮಹೀಧರದಿನೊಗೆದ ಶಾಂತರಸಮರುತ್ತರಂಗಿಣೀಪ್ರವಾಹಂ ಸ್ಥಾವರಜಂಗಮಂಗಳೊಳನಂಗವಿಕಾರವೈರಸ್ವಭಾವದಾವಪಾವಕನಿರಸನಮನೊಡರ್ಚಲೊಡನೆ

ಶರಭಂ ಕೇಸರಿಗಳ್ಗೆ ಕೇಸರಿ ಕರೀಂದ್ರಂಗಳ್ಗೆ ಕಾಡಾನೆ ಬೇ
ಡರ ಕರ್ಪಿಂಗೆ ಪುಳಿಂದರರ್ಬಿಸುವ ಶಾರ್ದೂಲಕ್ಕೆ ಶಾರ್ದೂಲಮು
ಚ್ಚರಿ ಸಾರಂಗಮೃಗಕ್ಕೆ ಚಿತ್ರಕಮೃಗಂ ಪಾವಿಂಗೆ ಪಾವಲ್ಲಿ ಮುಂ
ಗುರಿಗಳ್ಗಂಜದೆ ಬಿಟ್ಟು ಪೊರ್ದಿದವಲಂಪಿಂ ಜಾತಿವೈರಂಗಳಂ ೯೮

ವ॥ ಅಂತುಮಲ್ಲದೆಯುಂ

ಅಲೆಯೆ ಬಸಂತಂ ತೆಂಬೆಲ
ರೊಲೆಯೆ ಮನೋಜಂ ಲತಾಂತಶರಸಂತತಿಗಂ
ದೊಲಿಯೆ ತನುಲತೆಗಳೊಡನ
ಗ್ಗಲಿಸುವ ಸಾಜದೊಳೆ ತಳ್ತುವಾ ಮುನಿವನದೊಳ್ ೯೯

ಕವದಿಂ ನಾಲ್ಕೆರಡು ವಿಭೇ
ದವನಾಳ್ದು ಮುನಿಯೊಳೆಸೆದುದು ಕವಲಿಂಕವಲಿಂ
ವಿವಿಧಮೆನಿಪ್ಪ ಮತಿಶ್ರುತ
ಮವಧಿಮನಃಪರ್ಯಯಂ ಚತುರ್ವಿಧಬೋಧಂ ೧೦೦

ಮತಿ ನಾಲ್ಕೀಹೆಯವಗ್ರಹಂ ನೆಗಟ್ದವಾಯಂ ಧಾರಣಂ ಲಿಂಗಜಂ
ಶ್ರುತಮಾಶಬ್ದಜಮಿರ್ತೆಱಂ ಸಕಲಸಿದ್ಧಾಂತಾಂಗಪೂರ್ವಪ್ರಪಂ
ಚತರಂ ಮತ್ತವಧಿಕ್ರಮಂ ಭವಗುಣಾಧಿಪ್ರತ್ಯಯದ್ವೈತಕಂ
ದ್ವಿತಿಯಾಂಗಂ ರುಜುಭಾವಮಾ ವಿಪುಳಭಾವಾಖ್ಯಂ ಮನಃಪರ್ಯಯಂ ೧೦೧

ಅಷ್ಟಗುಣಸಿದ್ಧಪದವಿಗ
ಮಷ್ಟಮಹಾಪ್ರಾತಿಹಾರ್ಯರುಚಿಗಂ ಸಮ್ಯ
ಗ್ದೃಷ್ಟಿಯ ನೋಟ್ಪಿಣುಕೆಂಬಿನ
ಮಷ್ಟಮಹಾಋದ್ಧಿಯಂ ಮುನೀಶ್ವರನಾಂತಂ ೧೦೨

ವ|| ಅಂತು ಸಮನಿಸಿದ ಚತುರ್ವಿಧಾಗಮಶುದ್ಧಿಯೊಳಷ್ಟವಿಧಶುದ್ಧಿಯೊಳ
ಮಧಿಕೃತನಾಗಿ ಬೞಿಯಂ

ಕ್ರಮದಿಂದಾಗಮಯುಕ್ತಿದುರ್ಧರತಪಂ ತತ್ತ್ವಂ ಷಡಾವಶ್ಯಕಂ
ಸಮಯಾಚಾರವಿಡಂಬಾಗಮೆನಸುಂ ಮೆಯ್ವೆತ್ತು ಸನ್ಮಾರ್ಗದೊಳ್
ಸಮುದಾಯಂ ನಿಲೆ ಧೀರನೇಕಕನನಂತಂ ಭವ್ಯಪುಣ್ಯಾನುರು
ದ್ಧಮನಂ ಧರ್ಮವಿಹಾರದೊಳ್ ತಳರ್ದನಾ ಪುಣ್ಯಾಶ್ರಮಾರಣ್ಯದಿಂ ೧೦೩

ವ|| ಅಂತು ತಳರ್ದು ವಿಹಾರಿಸುವಲ್ಲಿ

ಅಣಿಮಾದ್ಯಷ್ಟಗುಣಂ ಚತುರ್ವಿಧವಿಬೋಧಂ ತೀರ್ಥಕೃನ್ನಾಥನೆಂ
ದೆಣಿಸಂ ತನ್ನನನಾಥನಂತೆ ಬಗೆದೆಲ್ಲಾಪ್ರಾಣಿಯಂ ತನ್ನ ಕ
ಣ್ಬೊಣರಿಂದೋವುವನಿಂತುಟಾತ್ಮಹಿತಮೆಂದೆಂಬೀತನೊಳ್ ತನ್ನ ಮೇ
ಲಣ ಮೋಹಂ ತನಗೆಂತುಟೆಂದಱಿಯೆನೀ ತ್ರೈಲೋಕ್ಯಮಾಣಿಕ್ಯನಾ ೧೦೪

ಆರೇನನಾವ ತತ್ತ್ವದೊ
ಳಾರಾದೊಡಮೊಡನೆ ಪೇೞ್ವ ಕೋಷ್ಠಮತಿಪ್ರ
ಸ್ಫೂರತರಬುದ್ಧಿಋದ್ಧಿಯ
ಗೌರವದಿಂದೊಪ್ಪಿದಂ ಜಗತ್ತ್ರಯತಿಲಕಂ ೧೦೫

ಪರಮಾಣುಮಾತ್ರದಿಂದಂ
ಬರಪಥದೊಳ್ನಡೆವನೊಡಲನೊದವಿಸಿದೀಯರ್ಾ
ಪರಿಶುದ್ಧಿನಿಮಿತ್ತಂ ಮುನಿ
ಪರಮಾತ್ಮಂ ಶ್ರೇಣಿಚಾರಣಪ್ರಾಭವದಿಂ ೧೦೬

ಕಟ್ಟಿದಿರೊಳೊಂದು ವಜ್ರದ
ಬೆಟ್ಟರೆಯುಂ ನಡೆವ ಸಮಯದೊಳ್ ತನ್ನ ಪದಂ
ಮುಟ್ಟಿದೊಡದೊಡೆವುದೆನೆ ನೇ
ರ್ಪಟ್ಟುದು ತನ್ನುಸಿಗೆ ವಿಶ್ರುತಪ್ರತಿಘಾತಂ ೧೦೭

ಮಾಣದೆ ತಪದಿಂ ಮುನಿಗೀ
ರ್ವಾಣನ ತನು ತಪ್ತಮಾಗಿಯುಂ ಕಂದದೆ ನೇ
ರಾಣಿಯ ಪೊಳೆಪಂ ತಳೆದುದು
ಮಾಣಿಕಮುಂ ಬೆಳಗಿದಂತೆ ದಹನಕ್ರಿಯೆಯಿಂ ೧೦೮

ಅಂತರ್ಮುಹೂರ್ತದೊಳ್ ಸಿ
ದ್ಧಾಂತಮನುದಿತಾಂಗಪೂರ್ವಮೇಕಾಕ್ಷರಮಂ
ಬಂತೆವೊಲುಚ್ಚರಿಸುವನ
ತ್ಯಂತವಚೋಬಲದಿನಾ ಮುಮುಕ್ಷುಲಲಾಮಂ ೧೦೯

ರೋಗಿಗಳ ರೋಗಮೆಲ್ಲಮ
ನಾಗಳ್ ಕೆಡಿಸುವುದು ತನ್ನ ತನುವಿನಮಳಸು
ಯೋಗಮೆನಿಪೌಷದರ್ಧಿಯಿ
ನಾ ಗುಣನಿಧಿ ಸಕಲಗುಣಶುಭಂಕರನಾದಂ ೧೧೦

ರಸಹೀನಂ ಕೆಯ್ಗಳೊಳಂ
ರಸಮಯಮಪ್ಪುದು ವಿಚಿತ್ರಮೇಂ ಕಾಣಲೊಡಂ
ಪಸಿಯುಂ ತೃಷೆಯುಂ ಕೆಡುವುದು
ರಸ[1]ಋ[1]ದ್ಧಿಯಿನಾ ಮುನೀಂದ್ರಚಂದ್ರನ ಮುಖಮಂ ೧೧೧

ಕಟಕಕ್ಕಮಿರ್ದ ನೆಲೆ ಸಂ
ಕಟಮೆನಿಸದೆ ತೆಱಪುಗುಡುವವೊಲ್ ಪಾನೆಯ ಕೂಟ್
ಕಟಕಂ ನೆರೆದುಂಡೊಡಮು
ತ್ಕಟಮಪ್ಪಕ್ಷೀಣಋದ್ಧಿಯಂ ಮುನಿ ತಳೆದಂ ೧೧೨

ವ|| ಅಂತು

ಪರಿಮಿತಯೋಗಯೋಗ್ಯತರಮಪ್ಪ ನದೀನದಮುಧ್ಯಶೈಲಶೇ
ಖರಶಿಲೆಯೊಳ್ಮಹಾಗಹನದೊಳ್ತರುಮೂಲದೊಳಿರ್ದು ಯೋಗಮಂ
ನಿರವಿಸಿ ಭವ್ಯಸಂತತಿಗೆ ಪುಣ್ಯಮನಾರ್ಜಿಸಿದಂ ಮುನೀಶ್ವರಂ
ಚರಿಯಿಸೆ ಖೇಡಖರ್ವಡಮಡಂಬದ ಪತ್ತನದಂತರಾಳದೊಳ್ ೧೧೩

ವ|| ಅಂತು ಮಾರ್ಗಪ್ರವರ್ತನಾರ್ಥಂ ಛದ್ಮಸ್ಥಕಾಲಮನೆರಡುವರ್ಷಂಬರಂ ಧರ್ಮವಿಹಾರಂ ಮೌನವ್ರತದಿಂ ಕಳಿಪಿ ಸಕಲಕೇವಲಬೋಧಲಾಭದ ಮೂಲಧನಮಂ ಮಡಗಿದೆಡೆಗೆ ಬರ್ಪಂತೆ ಮಹಾವ್ರತಹೇತುವಪ್ಪ ಸಹೇತುಕವನಕ್ಕೆ ಮಗುಟ್ದು ಬಂದು ಧವಳವಿಮಳಮಪ್ಪ ವಿಪುಳಾವನೀರುಹದ ಮೂಲದೊಳ್ಸಿದ್ಧಶಿಲಾತಳಪ್ರತಿಬದ್ಧಮೆನಿಪ ಶುದ್ಧೋಪಲೋಪರಿಮತಳದೊಳ್ ಬದ್ಧಪಲ್ಯಂಕಾಸನನುಂ ಪೂರ್ವಾಭಿಮುಖನುಮಾಗಿ

1 ಋ (ಅಇಉ)

ಮನಮಿರೆ ಪುರ್ವಿನ ನೊದಲೊಳ್
ಮನದೊಳಗಿರೆ ವಾಯು ಕರಣತತಿ ವಾಯುವಿನೊ
ಳ್ಕುನಿದಿರೆ ಪದ್ಮಾಸನದೊ
ಳ್ತನುವಿರೆ ಯೋಗೀಂದ್ರನಾತ್ಮಚಿಂತೆಯೊಳಿರ್ದಂ ೧೧೪

ವ॥ ಅಂತರ್ಕ್ಷೀಣ ಯೋಗಲಕ್ಷಿತಮಪ್ಪ ಸಮರುಜುಸಂಸ್ಥಾನಕ್ಕೆ ಪರಮಪದ ಭಾವದಿಂ ನೂಲ್ದೆಗೆದಂತೆ ನಿಱಿಗೆವಡೆದ ಬಾಹ್ಯಸಾಮಗ್ರಿಯೊಳ್ ವ್ಯಗ್ರನಾಗಿ ಸಮ್ಯಕ್ತ್ವ ಜ್ಞಾನದರ್ಶನಸಿದ್ಧಪರಮೇಷ್ಠಿಗುಣಾಷ್ಟಕನಿವಿಷ್ಟಚೇತಸಂ ಚತುರ್ವಿಧಮಪ್ಪ ಧರ್ಮಧ್ಯಾನ ದೊಳತ್ಯಂತಮಪ್ಪ ಪರೋಕ್ಷಸೂಕ್ಷ್ಮಪದಾರ್ಥಂಗಳುಮಂ ಸರ್ವಜ್ಞಭಾಷಿತ ಜ್ಞಾನಬಲದಿಂ ನಿಶ್ಚಯಿಸುವಾಜ್ಞಾವಿಚಯದೊಳಂ ಭೇದಾಭೇದರತ್ನತ್ರಯಭಾವನಾಬಲದಿಂ ಸ್ವಪರ ಕರ್ಮನಿರ್ಮೂಳನಚಿಂತೆಯೊಳೆಸಗುವ ಉಪಾಯವಿಚಯದೊಳಂ ಶುದ್ಧಚೈತನ್ಯರೂಪಂ ಸಂಸಾರಿಕಸುಖದುಃಖಸ್ವರೂಪನಲ್ಲನನಾದಿಕರ್ಮವಶದಿಂ ನರಕಾದಿದುಃಖಕ್ಕಂ ಪುಣ್ಯೋದ ಯದಿಂ ದೇವಾದಿಸುಖಕ್ಕಂ ಭಾಜನಮಕ್ಕುಮೆಂಬ ಫಲಚಿಂತನವಿಪಾಕವಿಚಯದೊಳ ಮನುಪ್ರೇಕ್ಷೆಗಳೊಳ್ ಲೋಕಸ್ವರೂಪಮುಮಂ ಚಿಂತಿಸುವ ಸಂಸ್ಥಾನವಿಚಯದೊಳಂ ನಿಶ್ಚಿಂತ ಚಿತ್ತನಾಗಿ

ಕರಣತ್ರಯದಿನನಂತಾ
ನುರೋಧಮಂ ಕ್ರೋಧ ಮಾನ ಮಾಯಾ ಲೋಭೋ
ತ್ಕರಮಂ ದುರಿತತಮಃಖರ
ಕರನುಱದೀರಾಱಱೊಳ್ ವಿಸಂಯೋಜಿಸಿದಂ ೧೧೫

ವ॥ ಅನಂತರಂ ವಿಶ್ರಮಣಾದಿಯೊಳ್ ನಿಸ್ತರಂಗನಾಗಿ ಮತ್ತಂ ಪೂರ್ವಕ್ರಮ ದಿನಪ್ರವೃತ್ತಮಪೂರ್ವಮನಿವೃತ್ತಮೆಂಬ ಕರಣತ್ರಿತಯದಿಂ ಮಿಥ್ಯಾತ್ವಂ ಸಮ್ಯಜ್ಮಿ ಥ್ಯಾತ್ವಂ ಸಮ್ಯಕ್ಪ್ರಕೃತಿಗಳೆಂಬ ದರ್ಶನಮೋಹನೀಯಂ ಬೆರಸು

ಈಯೇೞುಂ ಪ್ರಕೃತಿಗಳುಮ
ನೀಯುಂದದಿನೆಯ್ದೆ ಕಿಡಿಸಿ ಶುದ್ಧಾತ್ಮತೆಯಿಂ
ಕ್ಷಾಯಿಕಸಮ್ಯಗ್ದೃಷ್ಟಿ
ಶ್ರೀಯಂ ತಳೆದಂ ಮುಮುಕ್ಷುಕುಳಕಳಹಂಸಂ ೧೧೬

ವ॥ ಮತ್ತಮನಂತರಂ ಚಾರಿತ್ರಮೋಹೋದಯಕ್ಕಂ ಜ್ಞಾನವೈರಾಗ್ಯ ಸಂಪತ್ತಿ ಗಮಿತರೇತರಾತಿಕ್ರಮಣಮಂತರ್ಮುಹೂರ್ತದೊಳಸದಳಮಪ್ಪಿನಂ ಪ್ರಮತ್ತಾಪ್ರಮತ್ತಾ ಪರಾವರ್ತನಸಹಸ್ರಂಗಳಂ ಕಱಿಪಿ ಶುದ್ಧೋಪಯೋಗಯೋಗ್ಯತೆಯಿಂ ಕ್ಷಪಕಶ್ರೇಣಿ ಪ್ರಯೋಗಾದ್ಯಪ್ರವೃತ್ತಕರಣದಿಂ ಪರಿಣತಮಪ್ಪಾದಪ್ರಮತ್ತಗುಣಸ್ಥಾನದೊಳ್ ಸ್ಥಿತಿಬಂಧಾ

ಪಸರಣಸಹಸ್ರಂಗೆಯ್ದು ಅಪೂರ್ವಕರಣಕ್ಷಪಕನಾಗಿ ಪೃಥಕ್ತ್ವವಿತರ್ಕವಿಚಾರದ್ವಿಚತ್ವಾರಿಂಶದ್ಭೇದ ಪ್ರಥಮಶುಕ್ಲಧ್ಯಾನಾಧೀನಮಾನಸವಾಯುಃಕರ್ಮಮಲ್ಲಿವಿನಂ ಜ್ಞಾನಾವರಣಾದಿ ಸಪ್ತವಿಧಕರ್ಮಂಗಳಂ ಸ್ಥಿತ್ಯನುಭಾಗಕಾಂಡಕ ಘಾತಕ ಗುಣಶ್ರೇಣಿ ನಿರ್ಝರಾದಿಗಳನನುಕ್ರಮದಿಂ ಕಿಡಿಸುತ್ತುಂ ಪ್ರತಿಸಮಯಮನಂತಗುಣಪ್ರಭಾವಭಾಸುರವಿಶೋಧಿಪರಿಣಾಮದಿನನಿವೃತ್ತಕರಣಕ್ಷಪಕತ್ವಂ ಕಳಿದು ಪೂರ್ವೋಕ್ತಸ್ಥಿತಿಕಾಂಡಕಾದಿಕ್ರಿಯೆಗಳಿನಂತರ್ಮುಹೂರ್ತದೊಳ್ ನರಕತಿರ್ಯಗ್ಗತಿತತ್ಪ್ರಾಯೋಗ್ಯಾನುಪೂರ್ವಿವಿಕಳತ್ರಯಸ್ತ್ಯಾನಗೃದ್ಧಿತ್ರಿತಯಾತಪೋದ್ಯೋತಸ್ಥಾವರಸಾಧಾರಣೈಕೇಂದ್ರಿಯ ಸೂಕ್ಷ್ಮಂಗಳೆಂಬ ಷೋಡಶಪ್ರಕೃತಿಗಳ್ಗೆ ನಿರಯಮನೊಡರ್ಚಿ ಬಲ್ಲಿಯಮಂತರ್ಮುಹೂರ್ತದೊಳಪ್ರತ್ಯಾಖ್ಯಾನಪ್ರತ್ಯಾಖ್ಯಾನ ಭೇದಕ್ರಿಯೆಯಿಂ ಕ್ರೋಧಮಾನಮಾಯಾಲೋಭಂಗಳೆಂಟುಮಂ ನಿಷ್ಕಂಕಟಂ ಮಾಡಿದಿಂಬಲ್ಲಿಕ್ಕೆ ತತ್ಪರಿಣಾಮವಿಶೇಷಕ್ಕೆ

ತೆರಳುತ್ತುಂ ಬರೆ ನಾಲ್ಕು ಸಂಜ್ವಳನಮೊಂಭತ್ತುಂ ಕಷಾಯಂಗಳಂ
ತರಭೇದಕ್ರಿಯೆಯಿಂ ಬಲ್ಲಿಕ್ಕೆ ಸಮಯಾನದ್ಯಾವಳೀಕಾಲದೊಳ್
ಗುರುಮುಖ್ಯಂ ವಿಕಳಂ ನಪುಂಸಕವಧೂವೇದಕ್ಕೆ ಪುಂವೇದಮಂ
ಸರಿಗಂಡಂ ಕಿಡೆ ಹಾಸ್ಯರತ್ಯರತಿಶೋಕೋದ್ಭೀಜುಗುಪ್ಸಾನ್ವಿತಂ ೧೧೭

ವ|| ಮತ್ತಮನಿವೃತ್ತಕರಣದಿಂ ಅಂತರ್ಮುಹೂರ್ತದೊಳ್ ಪ್ರತಿಸಮಯಪ್ರವರ್ತಮಾನಸಂಜ್ವಳನಚತುಷ್ಕಾನುಭಾಗಮನಪೂರ್ವಸ್ಪರ್ಧಕಂ ಮಾಡಿ ಬಲ್ಲಿಯಮುಚಿತಕೃಷ್ಟಿಕ್ರಿಯೆಯಿಂ ಪೂರ್ವಸ್ಪರ್ಧಕಾನುಭಾಗಮನನಂತಗುಣಹಾನಿರೂಪದಿಂ ಕುಂದಿಸುತ್ತುಂ ದ್ವಾದಶಕೃಷ್ಟಿಕ್ರಿಯಾಂತರ್ಮುಹೂರ್ತದಿಂ ಚತುಷ್ಕಷಾಯಂಗಳ ಸಮಸ್ತಾನುಭಾಗಮಂ ಕೃಷ್ಟಿಪ್ರವಿಷ್ಟಂ ಮಾಡಿ ಸಮನಂತರಂ ಪ್ರತ್ಯೇಕತ್ರಿವಿಧಕ್ರೋಧಮಾನಮಾಯಾಸಂಜ್ವಳನಕೃಷ್ಟಿಗಳನನುಕ್ರಮದಿಂ ಬೇಱಿಬೇಱಿ ಕಿಡಿಸಿ ತತ್ಕಷಾಯತ್ರಯಮಂ ಲಯಕ್ಕೆಸಲಿಸಿ ಲೋಭಸಂಜ್ವಳನಮನನಂತರಂ ಪ್ರಥಮಕೃಷ್ಟಿಗತಾನುಭಾಗದಿಂ ಭಂಗಿಸಿ ಬಲ್ಲಿಯಮೆರಡನೆಯ ಕೃಷ್ಟಿಗತಾನುಭಾಗಮಂ ಭಂಗಿಸುತ್ತುಂ ಬಾದರಸಾಂಪರಾಯಕೃಷ್ಟ್ಯನುಭಾಗಮನನಂತಗುಣ ಹಾನಿರೂಪದಿಂ ಕುಂದಿಸಿ ಸೂಕ್ಷ್ಮಸಾಂಪರಾಯಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತದಿಂ ಬಾದರಲೋಭಸಂಜ್ವಳನಮಂ ಕಿಡಿಸಿ ಸಾಮಯಿಕಛೇದೋಪಸ್ಥಾಪನಾಶುದ್ಧಿಪರಿಣಾಮಸಮ್ಯಕ್ತ್ವನತನಿವೃತ್ತಿ ಕರಣಲಕ್ಷಣಕರಣಕ್ಷಪಕಗುಣಸ್ಥಾನಮಂ ದಾಂಟಿ ಸಮನಂತರಂ

ರೂಪಱಿಯೆ ಸೂಕ್ಷ್ಮಲೋಭಸ
ಮಾವಸ್ಥಿತ ಸೂಕ್ಷ್ಮಸಾಂಪರಾಯಕ್ಷಪಕಂ
ಭಾವತರವಾರಿಯಿಂದ
ಪ್ಪಾವಿಶಂತಿಮೋಹಬಳಮನುನ್ಮೂಳಿಸಿದಂ ೧೧೮

ವ॥ ಸಮನಂತರಂ ಕರಣಲಬ್ಧಿಯ ಪರಮೋತ್ಕರ್ಷದಿಂ ವೀತರಾಗದ್ವೇಷ ಯಥಾಖ್ಯಾತಚಾರಿತ್ರಕ್ಷೀಣಕಷಾಯಗುಣಸ್ಥಾನ ಸಂಸ್ಥಿತಾನೇಕತ್ವವಿತರ್ಕವಿಚಾರಾಖ್ಯಾನ ಧ್ಯಾನಪರಿಣತನಪರಿಮಿತಪ್ರದೇಶನಿರ್ಝರಾದಿಕ್ರಿಯಾಕಳಾಪಂ ನಿದ್ರಾನಿದ್ರಾಪ್ರಚಲಾ ಪ್ರಚಲೆಗಳನುಚಿತಕತಿಪಯಸಮಯದಿನಾತ್ಮದ್ವಿಚರಮಸಮಯದೊಳ್ಕಿಡಿಸಿ

ಚರಮಾವಸ್ಥಿತವೀತರಾಗಹೃದಯಚ್ಛದ್ಮಸ್ಥವೇಳಾರುಜಾ
ನ್ಯರುಣೋದ್ಯೋತಿ ಸಮುದ್ವಿತೀಯ ವರಶುಕ್ಲಧ್ಯಾನ್ಯದಿಂದಾ ಜಗ
ದ್ಗುರುಬೋಧಾರವಣೀಯಪಂಚಕದ ಕೇಡಿಂ ಮಾಡಿದಂ ದರ್ಶನಾ
ವರಣಂ ನಾಲ್ಕುಮನಿಕ್ಕಿದಂ ತವಿಸಿದಂ ಪಂಚಾಂತರಾಯಂಗಳಂ ೧೧೯

ವ॥ ಅಂತು ಘಾತಿಚತುಷ್ಟಯಮೆಂಬ ಕಟ್ಟಿಲೆ ಕಿಟ್ಟಿಲೆ ಕೀಟಿಂದಲೆಯಾಗಿ ನಿರವಶೇಷಂ ಪಡೆಯಲೊಡಂ

ಸಕಲದ್ರವ್ಯಪದಾರ್ಥತತ್ತ್ವಭೃತಲೋಕಾಲೋಕಕಿಂಚಿತ್ಕರಂ
ಡಕಮಂ ಕೆಯ್ಯೊಳಗಿಟ್ಟು ಕಾಣಿಸುವುದೀ ಪ್ರದ್ಯೋತಿ ದಿವ್ಯಾಂಗದೀ
ಪಿಕೆಯೊಳ್ ನಿಶ್ಚಳನಾಗಿ ನಿಂದು ಬೆಳಗಿತ್ತೆಂಬಂತೆ ವಿಶ್ವಪ್ರದೀ
ಪಕಮೆಂಬಭ್ರದೊಳಾಯ್ತು ಕೇವಲವಿಬೋಧೋದ್ಬುದ್ಧಭಾನೂದಯಂ ೧೨೦

ಕಿಂಬಿತೆನೆ ಚೈತ್ರಮಾಸಂ
ಪಿಂಬಗಲೊಳ್ ಚರಮತಾರೆ ತಾನರ್ಥಿಯಿನೀ
ಕಾಂಬಕದಿಂ ಮುಕ್ತಿಪ್ರಮ
ದಾಂಬಕನೀಳಾಬ್ಜಹಿಮಕರಂ ಸೊಗಯಿಸಿದಂ ೧೨೧

ಜರೆ ರೋಗಂ ತೃಷೆ ನಿದ್ರೆ ಮೃತ್ಯು ಜನನಂ ಸ್ವೇದಂ ಮದಂ ಚಿಂತೆ ಭೀ
ತಿ ರತಿ ಗ್ಲಾನತೆ ವಿಸ್ಮಯಂ ಕ್ಷುಧೆ ವಿಷಾದಂ ಮೋಹನಂ ದ್ವೇಷ ರಾ
ಗ ರಸಂಗಳ್ಪದಿನೆಂಟು ದೋಷಮಿವಜೀಂದಂ ಪಿಂಗಿದಾಪ್ತಂ ಜಗ
ದ್ಗುರು ನಿಃಕೇವಳಬೋಧರೂಪನೆಸೆದಂ ಸಾಹಿತ್ಯರತ್ನಾಕರಂ ೧೨೨

## ಗದ್ಯ

ಇದು ಪರಮಜಿನಸಮಯ ವನವಸಂತ ಸಂತಾನಾರಾಮ ರಾಮಚಂದ್ರಮುನೀಂದ್ರ ಪ್ರಸಾದಾಸಾದಿತ ರತ್ನತ್ರಯಾಭರಣ ಕಿರಣಪ್ರಸನ್ನಾಂತಃಕರಣ ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್ ಕೇವಲಜ್ಞಾನಕಲ್ಯಾಣವರ್ಣನಂ ನವಮಾಶ್ವಾಸಂ

# ದಶಮಾಶ್ವಾಸಂ

ಶ್ರೀಕಾಂತೆಯ ಲೋಚನಕುಮು
ದಾಕರಮನಲರ್ಚಿ ವಿಮಳಕೇವಳಬೋಧಾ
ಲೋಕದೆ ನಿರ್ಮಳಪೂರ್ಣಸು
ಧಾಕರನಾದಂ ವಿನೇಯಜನಮುಖತಿಲಕಂ ೧

ಇಳೆಯಿಂದೈಸಾಸಿರಂ ಬಿಲ್ವರಮೊಗೆದು ವಿಯತ್ಪೀಠದೊಳ್ನಿಂದನತ್ಯು
ಜ್ವಳಕೋಟ್ಯರ್ಕಪ್ರಭಾಜಾಳಮನೆ ಕಡೆದು ಕಣ್ಣಿಟ್ಟು ನುಣ್ಮಿಂಚಿನೊಳ್ ಕ
ಣ್ಗೊಳಿಪನ್ನಂ ಬಣ್ಣವಿಟ್ಟಂತೆಸೆವ ತನು ತನುಜ್ಯೋತ್ಸ್ನೆಯಿಂ ದಿ[1]ಙ್ಮಾಭೋ[1]
ವಳಯಂ ತೀಂಕಾಡಿ ಪಂಕಪ್ರಶಮನಪರಮಜ್ಞಾನಹೀನಸ್ವರೂಪಂ ೨

ವ್ಯವಧಾನಂ ಕರಣಂ ಕ್ರಮಂ ತನಗದಿಲ್ಲೇಕಕ್ಷಣಂ ಹಸ್ತಪ
ಲ್ಲವರೇಖಾತ್ರಯಮಾ ಜಗತ್ತ್ರಿತಯಮೆಂಬಂತೆಯ್ದೆ ಕಾಲತ್ರಯಂ
ಸ[2]ವ[2]ಸಲ್ವಂತಿರೆ ಕಾಣ್ಬ ಕೇವಲವಿಬೋಧಂ ಘಾತಿಚಾತುಷ್ಕವಿ
ಪ್ಲವದಿಂ ಪುಟ್ಟೆ ವಿಶುದ್ಧಬುದ್ಧನಭವಂ ಕೈಕೊಂಡನಾರ್ಹಂತ್ಯಮಂ ೩

ಸಕಳಜ್ಞಾನಸುಖಾದ್ಯನಂತವಿರತಿ ಸ್ವಾಭಾವಿಕಾಕ್ಷಾಯಿಕಾ
ಧಿಕ ಸಮ್ಯಕ್ತ್ವ ಸದಾನಲಾಭ ಮಹಿಮಾಭೋಗೋಪಭೋಗಾದ್ಯಶೇ
ಷಕೃತಾರ್ಥೀಕೃತಭಾವಮಂ ತಳೆದನಿರ್ದಲ್ಲಿರ್ದು ಸಿದ್ಧಸ್ವರೂ
ಪಕನುಂ ತಾನೆನೆ ನಿಂದನಕ್ಷಯನನಂತಂ ನಿರ್ಮಳಂ ನಿಷ್ಕಳಂ ೪

ಪರಮಶ್ರೀಪರ್ಯಂಕಮ
ನಿರದಾಯುರ್ನಾಮಗೋತ್ರವೇದನವಸ್ತ್ರಾ
ಭರಣಂಗಳನುಱದೆಱಗ
ಲ್ಪರಮಪರಂಜ್ಯೋತಿರಾತ್ಮನನಿಶಂ ನಿಂದಂ ೫

ಪುದಿದುದು ದೇವತೂರ್ಯರವಮೆಣ್ದೆಸೆಯಂ ದಿವದಿನ್ನಮೇರುಪು
ಷ್ಪದ ಸರಿ ಬಂದು ಘುಯ್ಯನೆಱಗಿತ್ತು ವಿಯತ್ತಳದೊಳ್ಪೊದಟ್ಬಿದೊ
ರ್ದೊದಲೊಳೆ ದೇವಕೋಟಿ ಜಯ ಮನ್ಮಥಭಂಜನ ಜೀವಕರ್ಮದು
ರ್ಮದಹರ ನಂದನಂದ ಭುವನತ್ರಯಭೂಷಣ ಎಂಬ ಘೋಷಣಂ ೬

---

1 ಙ್ಮಭೋ (ಅಇಉ) 2 ಮ (ಅಇ)

ತಿಳಿದುದು ನೀರ್ಗಳಂತೆ ಗಗನಂ ಗಗನಸ್ಥಳದಂತೆ ಧಾತ್ರಿ ನಿ
ರ್ಮಳತರಮಾಯ್ತು ಧಾತ್ರಿ ರಜಮಂ ಬಿಡುವಂದದೆ ಮಂದಮಾರುತಂ
ಸುಳಿದುದು ಮಂದಮಾರುತನ ಬೆಂಬೞಯಿಂದನ[1]ಳಾರ್ಚಿ[1] ದಕ್ಷಿಣಂ
ಬಳಸಿದುದಾವ ಮಹೋತ್ಸವದೊಳಚ್ಚರಿಯಾದುದು ಪಾಂಚಭೌತಿಕಂ ೭

ಭವನಾವಾಸದೊಳಾಯ್ತು ಶಂಖರವಮುಂ ತದ್ವ್ಯಂತರಾವಾಸದೊಳ್
ಕಿವಿ ಶಬ್ದಂಗಿಡಿಸಿತ್ತು ದುಂದುಭಿನಿನಾದಂ ಜ್ಯೋತಿರಾವಾಸದೊಳ್
ಕವಿತಂದತ್ತು ಗಜಾರಿರಾವಮೊಗೆದತ್ತಾಕಲ್ಪಜಾವಾಸದೊಳ್
ನವಘಂಟಾಧ್ವನಿ ಸಾಱುವಂತು ಭವನವ್ಯಾಬಾಧಮಂ ಬೋಧಮಂ ೮

ಜಲಜಲಿಪ ಪೊನ್ನ ಬಣ್ಣದಿ
ನೆಲರ್ವಟ್ಟೆಯ ಕಣ್ಗೆವಂದ ನಿಧಿಗೆಱಗಿದುವು
ಜ್ವಲಮಕುಟದೀಪವರ್ತಿಗ
ಳೊಲವಿಂ ಕಲ್ಪಾಮರೇಂದ್ರರೆಱಗದ ಮುನ್ನಂ ೯

ಜಿನಚಂದ್ರನ ಬೋಧವಿಲೋ
ಚನಚಂದ್ರಿಕೆ ಬೆಳಗೆ ಮೆಚ್ಚಿ ತಲೆದೂಗುವವೋ
ಲನಿಮಿಷಪತಿಗಾಸನಕಂ
ಪನಮಾದುದು ಮುಗಿದುವೊಡನೆ ಕರಸರಸಿರುಹಂ ೧೦

ವ॥ ಅಂತು ಸಕಳವಿಮಳಬೋಧಸ್ವರೂಪಂ ಸತ್ಪಥದೊಳುದಯಂಗೆಯ್ದಿರ್ದುದಂ ಸುಧರ್ಮಂಗನಧಿಬೋಧಾಕ್ಷೇಪವಿಕ್ಷೇಪಂ ಪ್ರತ್ಯಕ್ಷಂ ಮಾಡಲೊಡಮಾದಿಶಾಮುಖಕ್ಕೇೞಡಿಯಂ ನಡೆದು ಪೊಡೆವಟ್ಟು ನಿಂದು ಧನಾಧ್ಯಕ್ಷನಂ ಸಮವಸರಣವಿರಚನೆಗೆ ನಿರೂಪಿಸಿ

ಪ್ರತಿಹಸ್ತಾಮರಕಾಮಿನೀಸಮುದಯಂ ಮಾಣಿಕ್ಯದೀಪಾಕ್ಷತಾ
ಕ್ಷತಮಂದಾರನಮೇರುದಾಮ ನವರತ್ನಾ[2]ಮಂ[2]ತ್ರವ್ಯೆ ಚಿತ್ರ್ಯದೊಳ್
ಶತಪತ್ರಂ ಶತಕೋಟಿ ಕೂಡಿ ಬರೆ ಪೌಳೋಮಿಸಮೇತಂ ಶತ
ಕ್ರತು ನಿರ್ವರ್ತಿಸಲೞ್ಕಱಿಂ ತಳರ್ದನಾ ಚಾತುರ್ಥ್ಯಕಲ್ಯಾಣಮಂ ೧೧

ಕರಿಸೇನಾನಕ್ರಚಕ್ರಂ ತುರಗಬಲತರಂಗತ್ತರಂಗಂ ಚಳತ್ಪ
ಪ್ಪರಥಪ್ರೋಡ್ಡೀನಫೇನಂ ಚಟುಳಭಟಪಯೋಜಂತುಸಂತಾನಕಂ ಶಾ
ಕ್ವರಮಾಳಾವಿಭ್ರದಭ್ರಂ ನಟನಯುವತಿಗಾಂಧರ್ವಿಕಾವೃಂದತೀರಾಂ
ತರವಲ್ಲೀವೇಲ್ಲನಂ ಬಂದುದು ಸುರವರಸಪ್ತಾಂಗಸೇನಾಸಮುದ್ರಂ ೧೨

---

1 ಲೋರ್ಮಿ (ಅಇಉ)   2 ಶಾ (ಅಉ)

ಸುರುಚಿರಕಾಯಕಾಂತಿ ನವಚಂಪಕಮಾಲೆ ಶಿರೀಷಮಾಲೆಯಂ
ಪರಪುವ ತೋಳ್ಗಳೆತ್ತಿದ ನಮೇರುಲತಾಂತದ ಮಾಲೆ ನೀಳ್ದ ಪಂ
ಕರುಹದ ಮಾಲೆಯಂ ಮಿಗುವ ಪುಷ್ಪಕಮಾಲೆ ತಗುಳ್ದು ಪುಷ್ಪಮಂ
ಜರಿಗಳ ಮಾಲೆಯಾದುವಮರಪ್ರಮದಾಸಮುದಾಯಮಾಲೆಗಳ್ ೧೩

ತ್ರಿದಶಸ್ತ್ರೀಜನಹಸ್ತಪಾತ್ರಮಣಿಮಾಳಾದೀಪಧೂಪಾಂಶುಜಾ
ಳದೊಳಂ ಯಾನವಿಮಾನಲಂಬನಚಳನ್ಮಾಣಿಕ್ಯಲಂಬೂಷದಾ
ಮದೊಳಂ ತಳ್ತಮರಾಗಮಕ್ಕೆ ಸುರಚಾಪಶ್ರೇಣಿಯಂ ಸೇತುಗ
ಟ್ಟಿದವೊಲ್ತಾಯ್ತೆಲರ್ವಟ್ಟೆ ಶಕ್ರಪುರದಿಂದಂ ಧೂಳಿ[1]ಶಾ[1]ಳಂಬರಂ ೧೪

ಸಕಳೇಂದ್ರಾನೀಕಿನೀಸಪ್ತಕಶತವಿಘಟೀಭೂತರೋಧೋಂಗಣಂ ದಿ
ವ್ಯಕರೀಂದ್ರಪ್ರಾಜ್ಞಕರ್ಗಾಯಕಮಣಿಮುಕುಟಂ ಸಂಗತೈರಾವತೀಪು
ಷ್ಪಕಲೀಲಾರೂಢನಿಂದ್ರಾಣಿಗೆ ಕೊನೆವೆರಲಿಂ ಪ್ರೋನ್ನಟದ್ದೇವವೈತಾ
ಳಿಕವೈನಾಟ್ಯಂಗಳಂ ತೋಱುತುಮನುಗತಕಲ್ಪೇಂದ್ರನೆಟ್ಟಿಂದನಿಂದ್ರಂ ೧೫

ವ॥ ಅಂತು ಬಂದು ಸಮವಸರಣಮಂಟಪಕ್ಕನತಿದೂರದೊಳ್ನಿಂದು ಗಗನ ಮಂಡಲಕ್ಕೆ ವಿಚಿತ್ರವರ್ಣಸಂಕೀರ್ಣವಿತಾನಪಟಮನವಟಯಿಸಿದಂತೆ ನಿಂದು ಕಲ್ಪಾಮರೇಂದ್ರಸಂದೋಹಮಿಕ್ಕೆಲದೊಳಂ ತಿಕ್ಕಿಱಿಗಿಱಿದು ಕೂಡೆ ಕೂಡೆ ಘೂರ್ಣಿಸುವ ಪಂಚಮಹಾಶಬ್ದಕೋಳಾಹಳಮನುತ್ತಂಬಿತಹಸ್ತಪಲ್ಲವದಿಂ ನಿಲಿಸಿ ದಿವಿಜವಲ್ಲಭಂ ನಿಜವಲ್ಲಭೆಗೆ ಭುವನವಲ್ಲಭನ ಪರಮಪರಿಷದ್ವಳಯಮಂ ತೋಱುವಟ್ಟಿಱಿಂದಮಿಂತೆಂದಂ

ಹರಿನೀಳೋದ್ಘುಟ್ಟಿತಂ ವರ್ತುಳತಳಮಿಳೆಯಿಂ ವ್ಯೋಮದೊಳ್ನಿಂದುದೈಸಾ
ಸಿರಚಾಪೋತ್ಸೇಧದಿಂ ಮೇಗಿದೆ ಭುವನಜನಾನಂದಲಕ್ಷ್ಮೀವಧೂಭಾ
ಸುರರತ್ನಾಶೇಷಭೂಷಾಪಟಲಕಮೆನೆ ತಾಂ ದ್ವಾದಶಂ ಯೋಜನಾಂತಃ
ಪರಿಮಾಣಂ ದಿಕ್ಚತುರ್ವಿಂಶತಿದಶಶತಸೋಪಾನಪಙ್ಕ್ತಿಪ್ರತಾನಂ ೧೬

ಅದೆ ಧೂಳೀಶಾಳಮಲ್ಲಿಂ ಜಿನಗೃಹಧರೆಯಲ್ಲಿಂ ಪಯಃಖಾತಿಯಲ್ಲಿಂ
ದದು ವಲ್ಲೀವೀಥಿಯಲ್ಲಿಂ ವಸತಿ ತರುಗಳಲ್ಲಿಂ ಧ್ವಜಾನೀಕಮಲ್ಲಿಂ
ತ್ರಿದಶೋರ್ವೀಜಾತಧೂಪೋದ್ಘಟಿತಘಟಗಳಲ್ಲಿಂದಮಲ್ಲಿಂ ಗಣಶ್ರೇ
ಣಿ ದಲಲ್ಲಿಂ ಧರ್ಮಚಕ್ರಸ್ಥಳಿ ಬೞಿಕೆ ಮಹಾಮಂಡಪಂ ಮಧ್ಯಬಂಧಂ ೧೭

1 ಜಾ (ಇಲು)

ಶಶಿಕಾಂತದ್ವಾರಕುಡ್ಯಂ ನವಮಣಿಶತಕಸ್ತಂಭರುಗಂ ಧನುಷ್ಷ
ಷ್ಟಿಶತವ್ಯಾಯಾಮವಿಸ್ತಾರಿತ ನವಶತಚಾಪೋನ್ನತಂ ಶ್ರೀಧರ್ಮಸ್ವಿ
ಸ್ವಶರೀರಪ್ರಗ್ರಹಪ್ರಸ್ಫುರಿತಸುರಭಿಗಂಧೋತ್ಕಟಂ ಪದ್ಮರಾಗಾ
ಗ್ರಶಲಾಕಂ ಬಂಧುರಂ ಗಂಧಕುಟಿಯದೆ ಜಗಜ್ಜೀವನಾನಂದಕಂದಂ ೧೮

ಪರಮಂಗಪ್ಪಮಹಾಪ್ರತಿಹಾರಂ
ದೊರೆವಡೆದೊಪ್ಪಿದುದದಱಾಳವಾರಂ

ಚಾಮರಸಮಿತಿ ಚತುಷ್ಪಷ್ಟಿಮಿತಂ
ಕೋಮಳಶಶಿಕರಗುಚ್ಛೋಪಮಿತಂ

ಧನದಕುಮಾರರ ಕರಕಿಸಲಯದೊಳ್
ತೊನೆದಪುವಂಜಿಯು ನರ್ತನಲಯದೊಳ್

ಮುತ್ತಿನ ಮುಕ್ಕೊಡೆ ಸೀಲದ ಕಳಶಂ
ಸುತ್ತಿರೆ ಮಾಣಿಕವಟ್ಟಿಯ [1]ಪಿಳಸಂ[1]

ಪಚ್ಚೆಯ ಕಾವಿಂದಲರ್ದ ವಿಡಂಬಂ
ಮೆಚ್ಚುವ ಕಣ್ಗಳ ಸಿರಿಗಾಲಂಬಂ

ನೋಳ್ಪವರ್ಗೇೞುಭವಂಗಳ ರೂಪಂ
ತೋರ್ಪುದು ನಿರ್ಮಳಕಾಂತಿಕಳಾಪಂ

ಭಾವಳಯಂ ನಿಜತೇಜಪ್ರಭೆಯಿಂ
ಠೀವಿ ತುಳುಂಕಿದಪುದು ಸುರಸಭೆಯುಂ

ಸುರುಚಿರ ಭಾಚಕ್ರದ ಮಿಂಚುಗಳಿಂ
ಸುರದುಂದುಭಿಗಳ ಪೆರ್ಮೊಱಗುಗಳಿಂ

ಪರಿಮಳಮಿಳದಳಿಕಳಭಪ್ರಕರಂ
ಸುರಿಪುದಲರ್ಮೞೆ ಬಿಡದಾಸುಕರಂ

ದೇವನ ಶಶಿಮುಖಬಿಂಬದೊಳೀಗಂ
ಭಾವಿಸಿದಂತಿರೆ ಸಂಧ್ಯಾರಾಗಂ

ಅಸುಕೆಯ ಕೆಂದಳಿರ್ಗಳ ಬಾಳ್ವೆಂಪಂ
ಪಸರಿಸಿ ಪಡೆದುದು ಚಿತ್ರದಲಂಪಂ

---
1 ವಳಯಂ (ಅ)

ಕುಡುಮಿಂಚೇಱಿಂದ ಶರದದ ಮೇಘಂ
ಪಡೆಯೆನೆ ಕಡುಪಿಂ ಸುರಪಟಹೌಘಂ

ಮೊಱಗುವುವಘಮೃಗವಿರದೋಡುವಿನಂ
ಮೊಱಗುಗೆತ್ತು ಕೇಕಿಗಳಾಡುವಿನಂ

ದೂರಾಸನ್ನ ಸಮಂ ಗಂಭೀರಂ
ದೂರೀಕೃತ ತಾಲ್ವೋಷ್ಠ ವಿಸಾರಂ

ಸಕಲದೇಶಭಾಷಾಪ್ರತಿಭಾನಂ
ಪ್ರಕಟಂ ನೆಗೆದುದು ದಿವ್ಯಧ್ವಾನಂ

ಪರಿಷದ್ವಳಯಂ ತಿಳಿಗೊಳದಂತಿರೆ
ಹರಿಪೀಠಂ ಕನಕಾಂಬುಜದಂತಿರೆ

ನಿಂದಂ ಪೀಠದ ಮೇಲೆ ಜಿನೇಂದ್ರಂ
ಸಂದಿಸದಿರೆ ನಾಲ್ವೆರಲನತಂದ್ರಂ

ಸಮುದಯಸಮಾಸದಿಂ ಶಚಿ
ಗಮರೇಂದ್ರಂ ಸಮವಸರಣಮಂಡಲಮನನು
ಕ್ರಮದಿಂದೆ ತೋಱಿಯುಂ ವ್ಯ
ತ್ಕ್ರಮದಿಂ ವಿವರಿಸಿದನಗ್ರಪಾಲಂಬರೆಗಂ ೧೯

ಶ್ರೀಮಂಡಪನವರತ್ನ ನಿ
ಕಾಮಧುರಾಧರದೆ ಪರಿದ ಕಲ್ಯಾಣನದೀ
ಸೀಮೆಗಳೆನೆ ಮೆಱೆದಪುವು ಮ
ಹಾಮಂಡಳವೀಥಿ ಸಭೆಯ ನಾಲ್ಕುಂ ದೆಸೆಗಂ ೨೦

ವ॥ ಆ ಗಂಧಕುಟಿ ಲಕ್ಷ್ಮಿಯ ಮುತ್ತಿನ ಮೇಖಲೆಯಂತೆ ತಳತಳಿಸಿ ಪೊಳೆವ ವಿಯತ್ತಳಸ್ಫಟಿಕಕೋಟಾವಳಿಯ ಮದನಮಂಡಳಾಯತ್ತಹರಿನ್ಮಣಿಮಂಡಪಚತುಷ್ಕದೊಳ್ ಬಹಿರಂತರ್ವೇದಿಕಾಧಿಷ್ಠಿತನೈಸರ್ಪಪಾಂಡುಕಪದ್ಮಪಿಂಗಳ ಕಾಳ ಮಹಾಕಾಳ ಮಾಣವಕ ಶಂಖ ಸರ್ವರತ್ನಮೆಂಬ ನವನಿಧಿಗಳುಮವಱಡೆಯೆಡೆಯೊಳೆಡೆಗುಡದ ಗುಡಿಯ ಕನ್ನಡಿಯ ಸುಪ್ರತಿಷ್ಠಕದ ವಿಮಳಚಮರದ ಧವಳಾತಪತ್ರದ ಭೃಂಗಾರಘಟದ ಮಂಗಳಕಳಶದ ಮಣಿತಾಳವೃಂತದ ಪೆಸರೊಳೆಸೆವಷ್ಟಮಂಗಳಂಗಳುಂ ನವರತ್ನರಚಿತ

ವ॥ ಆ ಧೂಪಸ್ತೂಪಭೂಮಿಕಾವಳಯದಿಂ ಪೊಱಗೆ ಪೂರ್ವೋಕ್ತವಿಧಾನಗೋಪು ರಾಷ್ಟಮಂಗಳನವನಿಧಿವೇದಿಕಾದ್ವಾರಪಾಳಕನಾಟ್ಯಮಂಡಪಧೂಪಘಟೀ ಪಟಳದಿಂ ನೆಱೆದ ಮೂಲಬದ್ಧ ಸಿದ್ಧ ಪ್ರತಿಮಾಪ್ರಸಿದ್ಧಂಗಳಪ್ಪ ಮಂದಾರಪರಿಜಾತಹರಿ ಚಂದನ ಕಲ್ಪವೃಕ್ಷಸಂತಾನಮೆಂಬ ಸಿದ್ಧಾರ್ಥಪಾರ್ಥಿವಂಗಳಿಂ ಸಾರ್ಥಕಮಾದ ದಶವಿಧ ಕಲ್ಪವೃಕ್ಷೋದ್ಯಾನವಳಯದೊಳಗೆ

ನನೆಯಂಬಂ ನನೆಮಾಡಿ ಚಾಪಲತೆಯಂ ನೀಳೇಕ್ಷುಗಳ್ಗಿತ್ತು ಕೇ
ತನಮಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದಿ ಚೂ
ತನವಾಶೋಕತಮಾಳ[1]ಶಾ[1]ಳಕದಳೀಜಂಬೀರನಾರಂಗವಿಾ
ವನ ಭೂಭಾಗಮೊಳಿರ್ಪವೋಲಗಿಸೆ ತಮ್ಮಂ ಕೂರ್ತು ಸರ್ವರ್ತುಗಳ್ ೨೪

ವ॥ ಆ ಕಲ್ಪವೃಕ್ಷಾವನಿಯ ಪೊಱಸುತ್ತಿನೊಳ್ ಸುತ್ತಿಱಿಂದ ಪೊನ್ನ ಮದಿಲ ಬೆಳ್ಳಿಯ ಗೋಪುರಂಗಳ ಯಕ್ಷಕುಮಾರದ್ವಾರಪಾಲನ ಪಾಳಿವೆರಸು ನವನಿಧಿ ಮಂಗಳಾ ಷ್ಟಕದವಷ್ಟಂಭಮೆಸೆಯೆ ನಿಷ್ಟಪ್ತಕಾಂಚನಾಧಿಷ್ಠಿತ ಕುಂಭಸ್ತಂಭೋಜ್ಜೃಂಭಿತಂಗಳುಂ ಖಗೇಂದ್ರಮೃಗೇಂದ್ರಗಜೇಂದ್ರಗವೇಂದ್ರಚಂದ್ರಚಂದ್ರಕಚ್ಛತ್ರದ ಮರಾಳ ನಾಳಿಕಾಶತ ಪತ್ರಚಿತ್ರಿತಪಟವಿಧಾನಚೀನಾಂಚಳಚುಂಬಿತಾಂಬರಮುಖಂಗಳುಮಪ್ಪ ವಿಂಶತ್ಯುತ್ತರ ತ್ರಿಚತುಸ್ಸಹಸ್ರಮುಖ್ಯಧ್ವಜಂಗಳೊಂದೊಂದಕ್ಕೆ ನೂಱೆಂಟಾಗೆ ಬಳಸಿದ। ನಾಲ್ಕು ಲಕ್ಕೆ ಯುಮಱುವತ್ತುಸಾಸಿರದಾಱುನೂಱಱುವತ್ತು ಧ್ವಜಂಗಳನೇಕಯೋಜನವಿಸ್ತಾರಮಾದ ವೈಜಯಂತಿಕಾ ಸಂತಾನಭೂಮಿಯಿಂದೊಳಗೆ

ದುರಿತವ್ರಾತದ ಮಾತು ಸಲ್ಲದಿರವೇಟಿತ್ತತ್ತ ಭವ್ಯರ್ಕಳಂ
ಬರವೇಳ್ಕೆಚ್ಚರಮಿತ್ತಲಿತ್ತಲೆನುತುಂ ಕೈಸನ್ನೆಗೆಯ್ವಂತಿರಂ
ಬರಮೊಳ್ತ್ರಳ್ಳಿಸಿದಪ್ಪುವುಜ್ಜ್ವಳಪಟೀಜಾಳಂ ಧ್ವಜವ್ಯಾಜದಿಂ
ಪರಮಾರಾಧ್ಯನನರ್ಚಿಸಲ್ನೆರೆದುದಕ್ಕುಂ ಶಾರದಂ ನೀರದಂ ೨೫

ವ॥ ಆ ಕೇತನವ್ರಾತಭೂತಳದ ಪೊಱಗೆ ಜಾತರೂಪವೇದಿಕಾಷ್ಟಮಂಗಳ ನವ ನಿಧಿನಿಧಾನಯಕ್ಷಕುಮಾರರಕ್ಷಿತದ್ವಾರಶಾಖಾಂತರಾಳರೂಪ್ಯಗೋಪುರಚತುಷ್ಕದೊಳಂ ಆ ಗೋಪುರಪ್ರತಿಬದ್ಧಷೋಡಶಪ್ರಮಿತ ನಾಟ್ಯಮಂಡಪ ಭೂಮಿಕಾತ್ರಿತಯದೊಳಗೆ ಬೇಱೆ ಬೇಱೆ ಭಾವರಸದ ಸಿರಿಯ ಸರಿವಱಿಯ ಕುಡಿಮಿಂಚಿನ ಕುಡಿಗಳಂತೆ ನರ್ತಿಸುವ ಮೂವತ್ತಿರ್ಛರ್ವರ್ನರ್ತಕಿಯರೊಳಂ ಆ ನರ್ತಕಿಯರ ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂಬುಗಿಸೆ ತಳಿರ್ತಶೋಕವನದ ಮುಗುಳ್ತ ಚಂಪಕವನದ ಕಾಯ್ತ

1 ಪಾ (ಅಇ)

ಚೂತವನದ ಪಣ್ತು ಕದಳೀವನದ ಪುದುಪಿನೊಳ್ ಕಾಳಾಗರುಧೂಪಧೂಮಸ್ತೋಮದಿಂ ಸೀಲದೆಳಲತೆಗಳಿಂ ಮಾಲೆಗೊಳಿಸುವ ಧೂಪಘಟಪಟಳದಿಂ ರೂಪುವಡೆದಷ್ಟಮಂಗಳ ಮಹಾಪ್ರಾತಿಹಾರ್ಯಾಷ್ಟಕಸಪರ್ಯಾಶ್ಚರ್ಯಂಗಳಪ್ಪ ಚೈತ್ಯಂಗಳ ಪೊಱಗಣಿಂ ಸಿಱಗೆ ವಡೆದ ಶಾಖಾಸಹಸ್ರಂಗಳೊಳಂ ಮಂಗಳೋತ್ಸವಮನಪ್ಪುಕೆಯ್ದು

ಘನಸಾರಾಗರುಧೂಪಧೂಮಲತೆಯಂ ಮಾಣಿಕ್ಯದೀಪಾವಳೀ
ಘನಸಾಂದ್ರಚ್ಛವಿಯುಂ ಪ್ರವಾಳಮಧುಪದ್ವೈತೀಯಸಂವಾದಿಗಳ್
ಜಿನಬಿಂಬಾರ್ಚನೆಯೊಳ್ ಪಱಚಿ ವಸತಿವ್ರಾತಂಗಳಂ ಕೊಂಬುಗೊಂ
ಬಿನೊಳಾಂತಿರ್ಪುವುವಿತ್ತ ನೋಡಬಲೆ ಚೈತ್ಯೋರ್ವೀಜಸಂತಾನಮಂ ೨೬

ವ|| ಆ ಚೈತ್ಯವೃಕ್ಷಾವಳಿಯ ಪೊಱಗೆ ದೌವಾರಿಕಜ್ಯೋತಿರಮರ ಮಾಣಿಕ್ಯ ಮಕುಟಶೋಭಾಂಶುಪಟಳದಿಂ ರಜತಮಯಮಾಗಿಯುಂ ಮಹಾರಜತನಿರ್ಮಿತಂಗಳಂತೆ ಕೆಂಪು ಸೊಂಪುವಡೆದಷ್ಟಮಂಗಳನವನಿಧಿಸನಾಥಂಗಳಪ್ಪ ಬಾಗಿಲ್ವಾಡಂಗಳೆಂಬ ಮೊಗಂ ಗುಡಿಗಳೆಸೆವ ಮಂಗಳಲಕ್ಷ್ಮಿಯ ಕಳ್ಪುಂಬಳ್ಳಿವಿಡಿದ ನಳಿತೋಳ್ಗಳೆನೆತ್ತಿ ಬಳಸಿದ ದೀಪ ಪದ್ಮರಾಗದ ಪ್ರಾಕಾರದೊಳಗೆ ಮಾವಂ ಮಲಂಗಿದ ಮಲ್ಲಿಕಾಲತೆಯ ಪೂಗತರು ಕೈಗೊಟ್ಟ ನಾಗಲತೆಯ ಕೇಸರಂ ಮೇಳೈಸಿದ ವಾಸಂತಿಕಾಲತೆಯ ಮಾತುಲುಂಗಂ ಶಳ ಜಾತೀಲತೆಯ ಸಂದಣಿಸಿದ ಕುಂದಲತೆಯ ಮೇಳೈಸಿದ ಮಾಳತೀಲತೆಯ ಪಂಪಕೆ ಪಾದ ಚಂಪಕಾಲತೆಯ [1]ಪಿ[1]ಣಿಲೇಱಿದ ಕ[2]ರ[2]ವೀರಲತೆಯ ಮುಗುಳಿಸಿದ ವಕುಳಲತೆಯ ಬಾಳ್ದೊಂಪದ ಬಳಸು ವಿಳಸಮಾದ ರತ್ನರಚಿತಕೃತಕಾಚಲಂಗಳೊಳ್ ಪಾಡುವಾಡುವ ಸುರನರಕಿನ್ನರಖೇಚರಾಂಗನೆಯರ ವಿಳಾಸಕ್ರೀಡಾವಾಸಮಾಗಿ

ಪುದಿದ ಲತಾವನಾವಳಿಯ ಮುತ್ತಿನ ಬಣ್ಣದ ತುಂಬಿ ಸೀಲವ
ಣ್ಣದ ಗಿಳಿವಿಂಡು ಮಾಣಿಕದ ಬಣ್ಣದ ಕನ್ನಡವಕ್ಕಿ ಪಚ್ಚೆವ
ಣ್ಣದ ಕಳಹಂಸೆ ಚಿತ್ರಿಸಿದರೋ ಬಿನದಕ್ಕೆನೆ ತೋಱಿ ಚೋದ್ಯಮಂ
ಸುದತಿಯರ್ಗೀವುದಲ್ಲಿ ನಡೆದುಂ ಜಡಿದುಂ ನುಡಿದುಂ ಜಿನುಂಗಿಯುಂ ೨೭

ವ|| ಆ ಲತಾವೀಥಿಯಿನತ್ತಣ ಸುತ್ತಿನೊಳ[3]ರ್ಧ[3]ಯೋಜನವಿಸ್ತಾರಮಾಗಿ ವೇದಿಕಾ ಗೋಪುರದ್ವಾರಪಾಳಕ ಮಂಗಳಾಷ್ಟಕ ನವನಿಧಿವಿಧಾನಂಗಳಿಂ ಮುನ್ನೀರಪರ್ಣದ ಕನ್ನಡಿ [4]ಗಳಂತೆ[4] ಮೆಱೆದು ಕಾರುಣ್ಯರತ್ನಾಕರ[5]ದ[5]ಯಾರಸಪೂರಂ ಮೇರೆಗಟ್ಟಿ ಮಣಿಪ್ರತಾನ ಸೋಪಾನಶೋಭೆಯಿನುಭಯತಟಂ ಸುಭಗಮಾಗೆ ತೀವಿತಿಳಿದು ನಿಂದುದೆನಿಸಿ ಮುಗಿದ ಱಿಯದ ತಾವರೆಗಳಿನಗಲ್ದಱಿಯದ ಜಕ್ಕವಕ್ಕಿಗಳಿನಲರ್ಕೆಗುಂದದ ನೀಳನೀರೇಜದಿನೋ ರಂತೆ ಮೆಱೆವ

1 ಬ (ಇಉ) 2 ಣ (ಇಉ) 3 ಧ (ಅಇಉ)
4 ಯನೆಳಲಂ (ಎ) 5 ನದ (ಎ)

ಜಳಖಾತೀವಳಯಾಭಿರಾಮತೆಯನೇನಂ ಪೇೞ್ದಪೆಂ ಬಂದು ಗೊಂ
ದಳದಿಂ ಕಿನ್ನರಖೇಚರ ಪ್ರಮದೆಯರ್ಪೊರ್ಕ್ಕಾಡೆ ಪೀನಸ್ತನಂ
ಗಳ ಮೇಲೊಟ್ಟಿದ ಯಕ್ಷಕರ್ದಮದ ಪಂಕಂ ನೂಂಕಿ ತೇಂಕಾಡಿ ಸಂ
ಕಳಿಸುತ್ತಿರ್ಪುದು ನಿಸ್ತರಂಗತಟ ಧೂಳೀಚಿತ್ರಪತ್ರಂಗಳಂ ೨೮

ವ|| ಆ ಖಾತಿಕಾವಳಯದಿಂದಿತ್ತ[1]ಣ[1] ಪೊಱಸುತ್ತಿನೊ[2]ಳ್[2] ಮೊದಲಗಂಧಕುಟೀ ಚತುರ್ದ್ವಾರಾಭಿಮುಖರತ್ನಗೋಪುರಚತುಷ್ಟಯದಿಂ ಪೊಱಮಟ್ಟು ಧೂಳಿಶಾಳದ ಕಡೆಯ ಮಣಿಮಾಡಂಬರಮೇಕಗವ್ಯೂತಿಸವ್ಯಾಸಮುಮುಭಯಪಕ್ಷವಿಸ್ಫುರಿತ ಚಂದ್ರಕಾಂತಭಿತ್ತಿ ವಿಸ್ತಾರಮುಮಂತರ್ವೀಥಿಮಾಳಿಕಾಪ್ರದೇಶೋಚಿತಕ್ಷುಲ್ಲಕದ್ವಾರಾಭಿರಾಮಮುಮಾದ ನಾಲ್ಕುಂ ಬೀದಿಗಳಾದಲೆಗ[3]ಳ್[3]ಬಾಗಿಲ್ವಾಡದೊಳವಕ್ಕದೊಳ್ ಕಿಕ್ಕಿಱಿಗಿಱಿದು ಮಣಿತೋರಣನಿತಾಂತಿಕದೊಳ್ ಚತುರಸ್ರಹೇಮಭೂಮಿಕಾತ್ರಿತಯ ಪ್ರಾಸಾದವಪ್ರಾಕಾರಂಗಳೊಳಮಾಪ್ರಾಕಾರಪ್ರಥಮವೇದಿಕಾ ಚತುರಂತರ್ಭಾಗದೊಳ್ ದಿಗಂಗನೆಯರ ಜಳಕೇಳೀ ವಿಳಾಸಕ್ಕಂ ವಿವಿಕ್ಷುಜನಕರಣಚರಣಪ್ರಕ್ಷಾಳನಕ್ಕಮ[4]ಕ್ಷೂ[4]ಣಲಕ್ಷ್ಯಮಾಗಿ ಮಣಿಮಯ ಸೋಪಾನಸಂಧಾನಿತಮಪ್ಪ ನಂದೆ ನಂದೋತ್ತರೆ ಮೊದಲಾದ ಪದಿನಾಱುಂ ಸರೋವರಂಗಳೊಳವೊಪ್ಪಮನಪ್ಪುಕೆಯ್ದು

ಮಾನಿನಿ ನೋಡುಗೆ ನಾಲ್ಕುಂ
ಮಾನಸ್ತಂಭಂಗಳೆಸೆದಪುವು ಕಾಣಲೊಡಂ
ದಾನವಮಾನವಮಿಥ್ಯಾ
ಮಾನಸ್ತಂಭಕ್ಕೆ ತಾಂ ಜಯಸ್ತಂಭಂಗಳ್ ೨೯

ಚತುರಸ್ರಾಷ್ಟಾಸ್ರವೃತ್ತೋದರಕುಮುದಕಪೋತಾಂಸಕಂಠಗಳಾಲಂ
ಬಿತಘಂಟಾಚಾಮರೋಜ್ಜೃಂಭಿತಮಣಿಫಳಕಂಗಳ್ ಚತುರ್ವಕ್ತ್ರಸಿದ್ಧ
ಪ್ರತಿಕೃತ್ಯುತ್ತಂಸಿತಂಗಳ್ ಧ್ವಜಮಣಿಕಳಶಶ್ವೇತಪತ್ರತ್ರಯಾಳಂ
ಕೃತ ಮಾನಸ್ತಂಭಕಂಗಳ್ಮೆಱೆದಪುವಿವೆ ಕಲ್ಯಾಣಪೀಠೋದ್ಗತಂಗಳ್ ೩೦

ವ|| [5]ಆ ನಾಲ್ಕು[5] ಮಾನಸ್ತಂಬಂಗಳಿರ್ಕೆಲದ ವೀಥೀಭಿತ್ತಿಭಾಗಾಭ್ಯಂತ[6]ರ[6]ದೊಳರ್ಧಯೋಜನವಿಸ್ತಾರದೊಳಂ ಸಪ್ತಭೂಮಸೌಧಸಾಮಾನ್ಯಾನೇಕರತ್ನ[7]ಕಳಶಕ[7]ದಂಬರುಚಿಗಳಿನೊಗೆದ ವಾಸವಶರಾಸನಂ ಧೂಳೀಶಾಳಮುಂ ಬಾಸಣಿಸಿ ನಿಂದ ಚೈತ್ಯಮಂದಿರಂಗಳ ನಿತ್ಯನಿರತಿಶಯಭೋಗಂಗಳೊಳ್ ಪರಮೇಶ್ವರನ ಮಹಿಮಾತಿಶಯಮಂಗಳಂಗಳೊಳಂ ಮುಕ್ತಕಂ ಕುಲಕಂ ಕೋಶಂ ಸಂಘಾತಮೆಂಬರಚನಾವೈಚಿತ್ರ್ಯಚಿತ್ರಾಯತನ

1 ಲ್ (ಅ) ಲು (ಇಉ) 2 ಳಂ (ಅಇಉ) 3 ಳೊಳ್ (ಎ)
4 ಕ್ಷೀ (ಅಇಉ) 5 ಆ (ಅಇಉ) 6 ರಾಳ (ಎ) 7 ಕ (ಅಇಉ)

ವೈದಂಡಿಕ ಪ್ರಬಂಧಬಂಧುರ ಪದ್ಯಬಂಧದೊಳಮುತ್ಕಳಿಕೆ ಚೂರ್ಣಿಕೆ ಲತಿಕೆ ಖಂಡಂ ವೃತ್ತಗಂಧಿ ಚಿತ್ರಮೆಂಬ ಗದ್ಯಬಂಧದೊಳಂತದ್ಯುಗಳ ಸಮ್ಮಿಳಿತರಸಭಾವಸಂಪಚ್ಛಂಪೂ[1]ಕೃತಿ[1]ಯೊಳಮೋದಿ ಪೊಗಳ್ವ ಸುರನರಖೇಚರವಿನೇಯವೃಂದಪರಮಾನಂದಕಮನೇಕಸಂಕೀರ್ಣರಾಗಂಗಳಿನಿಳಾದಿಪ್ರಬದ್ಧಶುದ್ಧಮಾರ್ಗದೊಳಂ ಧ್ರುವಾದಿಗೀತಜಾತಮೇಳಾಪಕದಸೂಳ ಕ್ರಮದ ದೇಸೀಮಾರ್ಗದೊಳಂ ಮಾರ್ಗತ್ರಯಾನುಗತಮಾಗಿ ಪಾಡಿ ಪರಸುವ ಕಿನ್ನರ ಕಿಂಪುರುಷಗಂಧರ್ವಗೀರ್ವಾಣಭವ್ಯನವ್ಯೋತ್ಸಕರ್ಗೆ ಲ[2]ಯಕ[2]ಮಾಗಿ ಲೀಲೆಯಂ ತಳೆದು

ಇದೆ ಚೈತ್ಯಾವನಿ ಚೈತ್ಯಚೈತ್ಯದೆಡೆಯೊಳ್ ಪ್ರಾಸಾದಮೈದೈದು ಚೆ
ಲ್ವಿದಿರ್ಗೊಂಡಿರ್ದಪುವಿಲ್ಲಿ ದಿಕ್ಪತಿಗಳೆಲ್ಲಂ ಬಂದು ದೇವಾರ್ಚನೋ
ನ್ಮದದಿಂದಾಡುವ ಪಾಡುವಗ್ಗಳಿಕೆಯೊಳ್ ಚೂಡಾಮಣೀಜ್ಯೋತ್ಸ್ನೆಯೊ
ಳ್ಪುದುಮಾಡಂಗಳ ಮೇಲೆ ಚುಂಚುಲೊವೆಯೊಳ್ ವಿದ್ಯುಲ್ಲತಾಲಾಸ್ಯಮಂ ೩೧

ವ॥ ಆ ಚೈತ್ಯಾವನೀವಲ್ಲಭೆಯ ಮೇಲ್ಗೊಂಡಕಾರೋಹಣದಂತೆ ನಯನ ಕೌತುಕಾರೋಹಣಮಾದ ಧೂಳಿಶಾಳಮನಳಂಕರಿಸಿ ನವರತ್ನರಚಿತ ದ್ವಾರಶಾಖಾನುಬದ್ಧ ಜ್ಯೋತೀಂದ್ರದೌವಾರಿಕನಿಕಾಯಛಾಯಾವಚ್ಛನ್ನ ಚತುರ್ದಿಶಾಪ್ರಸನ್ನ ಲಕ್ಷ್ಮೀಲೇಪನವಿಳಾಸಮಂ ತಳೆದು

ಒಳಗಣ [3]ಪೊಱಗಣ[3] ವೇದಿಗ
ಳೊಳಗೆಡೆಗೊಟ್ಟಷ್ಟಮಂಗಳಂ ನವನಿಧಿಗಳ್
ಕೆಳೆಗೊಂಡಿವೆ ನೋಡಿವೆ ಕ
ಣ್ಗಳ ಮಂಗಳಭವನಮೆನಿಪ [4]ಮಣಿ[4]ಮಾಂಡಂಗಳ್ ೩೨
ಮಾನವತಿರ್ಯಕ್ಖೇಚರ
ದಾನವಗಾರೋಹಣಾವರೋಹಣಸುಖಸಂ
ಧಾನಂ ಶಶಿಮಣಿಮಯಸೋ
ಪಾನಂ ಪ್ರಾಕ್ಪೂರ್ವಪಾದಲೇಪವಿಧಾನಂ ೩೩

ಅಗಲಂ ದ್ವಾದಶಯೋಜನಂ ಶಿಶುವಧೂವೃದ್ಧರ್ಗದೆಂತೋಲಗಂ
[5]ಬು[5]ಗಲುಂ ಪೋಗಲುಮೆಂಬೊಡೊರ್ಗಳಿಗೆಗಾರ್ಪರ್ ಮತ್ತಭವ್ಯರ್ಕುದೃ
ಷ್ಟಿಗಳಜ್ಞಾನಿಯಸಂಜ್ಞಿಗಳ್ಪುಗುವರಲ್ಲಿರ್ಪೊರ್ಕ್ಕ ಭವ್ಯಾಳಿಗಿ
ಲ್ಲ ಗಡಂ ಕ್ಷುತ್ತೃಷೆಜಾತಿ ಭೀತಿ ಮೃತಿ ವೇಗಂ ನಿದ್ರೆ ಶೋಕಂ [6]ಕ್ಷತಂ[6] ೩೪

1 ಗವಿ(ಎ) 2 ಯ (ಎ) 3 ಪೊಱಗಳ (ಎ) 4 ಕಡೆ (ಎ)
5 ಪು (ಎ) 6 ಕರಂ (ಆ ಇ ಉ)

ಜಿನಕಾಯೋಚ್ಛ್ರಾಯದಿಂ ದ್ವಾದಶಗುಣಮೆನಿಕುಂ ಚೈತ್ಯಕೇಳೀಕುಭೃತ್ಕೇ
ತನಮಾನಸ್ತಂಭಚೈತ್ಯಾಂಘ್ರಿಪಸುರಕುಜಹರ್ಮ್ಯಾವಳೀಗೋಪುರಸ್ತೂ
ಪನಿಕಾಯಂ ಶ್ರೀಮಹಾಮಂಡಪಮಿವು ಸತಿ ಕೇಳೀಶಚಾರಂಗಳೊಳ್ತ
ಳ್ತನುವಿಂ ಪ್ರಾಕಾರವೇದೀತತಿ ಚತುರಧಿಕಂ ತೋರಣಂ ಕಿಂಚಿದುಚ್ಚಂ ೩೫

ಸಭೆಯೆಲ್ಲಂ ಪೊನ್ನನೀರಿಂದರೆಬಳಿದವೊಲಿರ್ದಪ್ಪುದೇಕೀಜಗದ್ವ
ಲ್ಲಭನಂಗಚ್ಛಾಯೆ ಪೂರಂಗವಿದ ಪಸರದಿಂದೀ ಲತಾಮಾಸ್ತಂಭಕಲ್ಪ
ಪ್ರಭವೋದ್ಯಾನಪ್ರಸೂನಾವಳಿಗೆ ನಿಜದ ಕಂಪಲ್ಲದತ್ಯದ್ಭುತಂ ಸೌ
ರಭಮೆಂತೆಂಬೈ ಜಿನಾಧೀ[1]ಶನ[1] ಚರಮತನೂದಿವ್ಯಸೌರಭ್ಯದಿಂದಂ ೩೬

ವ॥ ಎಂದು ಮನೋನಯನವಲ್ಲಭೆಯ ಮನೋನಯನಂಗಳಾ ಸಭಾರಂಗದೊಳ್ಪಾಪಸುಂ ಪೊಕ್ಕುಂಬ[2]ರಿ[2]ದು ಪರಮಾನಂದರಸದೋಕುಳಿಯಾಡೆ ಬೇಱ[3]ವೇಱ[3] ವರ್ಣಿಸಿ ತೋಱಿ ನಿಜ[3]ತಿ[3]ರೀಟಮಾಣಿಕ್ಯಶೋಣಾಂಶುಪಟಲಂ ಪಟ್ಟವರ್ಧನಗಜದ ನಿಟಿಲಪಟ್ಟದೊಳ್“ ಸಿಂದುರಂಬ[4]ರೆ[4]ಯೆ ಗಂಧಕುಟೀರತ್ನಕಳಶಂಗಳ್ಗವನತನಾಗುತ್ತುಮೆಯ್ದೆವಂದಾ ಧೂಳೀಶಾಳದ ಮೂಡಣ ಬಾಗಿಲ್ವಾಡದ ಮುಂದಣ ಪ್ರಾಂಗಣದೊಳವತಾರಿತಾಭ್ರಮೂವಲ್ಲಭನಾಗಿ ವಿಮಾನಯಾನವಾಹನಂಗಳನಿೞಿದ ಕಲ್ಪಜೇಂದ್ರವೃಂದಂಬೆರಸಿಂದ್ರಾಣೀಸಮೂಹಸಮೇತಂ ಪೊಕ್ಕು ದಿವಿಜೇಂದ್ರನೈಂದ್ರೀದಿಶಾವೀಥಿವಿಡಿದು ನಡೆತರ್ಪಾಗಳ್

ಘುಸೃಣರಸಂಗಳಿಂದೆ ಚಳಿಯಂಗುಡುವಂತರುಣಾಬ್ಜಪತ್ರದಿಂ
ದೆಸ[5]ಳ್ದ[5]ಳಿವಂ[6]ತೆ[6] ಬರ್ಪಮರರಾಜವಧೂಜನಪಾದಪಲ್ಲವ
ಪ್ರಸರದ ಕಾಂತಿ ಕಾರ್ಮುಗಿಲ ಮೇ[6]ಲೆ[6]ಳನೇಸಱ ದೋರೆಗೆಂ ಬಿಸಿ
ಲ್ವಸರಿಸಿದಂತಿರಾಯ್ತು ಪರಿಷತ್ಸರಣೀಹರಿನೀಳಭೂಮಿಯೊಳ್ ೩೭

ವ॥ ಅಂತೆಯ್ದೆವಂದು ಗಗನಸ್ಫಟಿಕಪ್ರಾಕಾರಕ್ಕಳಂಕಾರಮಾದ [7]ಹಾರಿತಕ[7] ಹಿರಣ್ಮಯದ್ವಾರಗೋಪುರಮಂಟಪದಿನೊಳಪೊಕ್ಕು

ಅಗುರುವ ಧೂಪಧೂಮಲತೆಯಂ ಹರಿನೀಲವಿಭೂಷಣಾಂಶು ದೀ
ವಿಗೆಗಳ ಮಾಲೆಯಂ ಮಕುಟಶೋಣಮಣಿಪ್ರಭೆ ಮೌಕ್ತಿಕಾಚ್ಛರ
ಶ್ಮಿಗಳುದಹಾರಮಂ ನಯನಕಾಂತಿ ಲತಾಂತಮನೀಯೆ ಮೂಮೆ ಕೈ
ಮಿಗೆ ಬಲ[8]ವಂದು[8] ಗಂಧಕುಟಿಯಂ ನೆರೆದಾಹರಿಧೂಮವೇಳಿಯಂ ೩೮

---

1 ಶ್ವರ (ಅ ಇ ಉ) 2 ರಿ (ಅ ಇ ಉ) 3 ಕಿ (ಅ ಇ ಉ)
4 ಡೆ (ಅಇಉ) 5 ಳ್ವಳಿಪ (ಅಇಉ) 6 ಗೆ (ಅಇಉ) 7 ಹ (ಅಇಉ)
8 ಗೊಂಡು (ಎ)

ಅಂತು ಬಲವಂದು ನವಮಣಿ
ಸಂತಾನದೊಳಗೆಸೆಯೆ ಬೆರಕೆಗೆಂಪು ವಿಕಸ
ತ್ಸಂತಾನಲತಾಂತಂಗಳ್
ಕಂತುಹರಂಗಿತ್ತ ರತ್ನಕುಸುಮಾಂಜಳಿಯಂ ೩೯

ವ॥ ಸಿಂಹಪೀಠೋಪಾಂತಮಣಿಕುಟ್ಟಿಮಲಕ್ಷ್ಮಿಗೆ ಸರ್ವಾಂಗಾಲಿಂಗಿತಮನಿತ್ತು ಹರ್ಷೋತ್ಕರ್ಷಪುಳಕಜಾಳಕಂ ಮುನ್ನೆಱ ಬೞಿಕಮೆೞ್ದು ಸಮುಚಿತಪ್ರದೇಶದೊಳ್ನಿಂದು ಕಿಂಚಿದವನತಕೋಟೀರಭಾರನುಂ ಮುಕುಳಿತಕರಸರೋಜನುಂ ವಿಕಸಿತಾದರಪಾಣಿಪಲ್ಲವನುಮಾಗಿ

ಜಯ ಜಯ ಜಯ ಪರಮೇಶ್ವರ
ಜಯ ಜಯ ಜಯ ಪರಮಪುರುಷ ಜಯ ಜಯ ಜಯ ದು
ರ್ಜಯ ಮನ್ಮಥ ಮದಭಂಜನ
ಜಯ ಜಯ ಜಯ ದೇವದೇವನಂತಜಿನೇಂದ್ರಾ ೪೦

ನಿನ್ನಱವು ನಿನ್ನ ಮಾರ್ಗಂ
ನಿನ್ನಾಗಮಯುಕ್ತಿ ನಿನ್ನ ಮಹಿಮೋನ್ನತಿಯಿ
ಲ್ಲೆನ್ನಮನವಱಯೆ ಮಿಕ್ಕರೊ
ಳೆನ್ನಂ ನಿನ್ನಂತೆ ಮಾಡನಂತಜಿನೇಂದ್ರಾ ೪೧

ನಿನ್ನನೆ ಬಿಡದಾರಾಧಿಸಿ
ನಿನ್ನಯ ಗಣಕೋಷ್ಠದೊಳಗೆ ನೆಲಸಿದ ಬಹು ವಿ
ದ್ಯೋನ್ನತರ್ಗೆಣೆಯಿಲ್ಲೆಂದೊಡೆ
ನಿನ್ನನ್ನರ್ದೇವರಾರನಂತಜಿನೇಂದ್ರಾ ೪೨

ಮುನಿದೊಸೆವ ಕೊಡುವ ಕೊಳ್ವಾ
ತನೆ ದೇವಂ ಸೇವಕಂಗಮಿಲ್ಲ[1]ದ[1] ನಿನ್ನಂ
ನೆನೆದ[2]ನೆ[3] ನಿಜಪದವಿಗೆ ಭಾ
ಜನನಪ್ಪನದೆಂತೊ ಪೇೞನಂತಜಿನೇಂದ್ರಾ ೪೩

ಅಱವೆ ತನುವಾದುದಾದೊಡ
ಮಱವ್ಪೆ ನೀಂ[3] ನಿ[3]ನ್ನ ಗುಣಮನಿನ್ನಱವವರಾ
ರಱಯದೊಡೇಂ ನೀನಾನೆಂ
ಬಱವಱತಮೆ ಸಾಲ್ಪುದೆನಗನಂತಜಿನೇಂದ್ರಾ ೪೪

---

1 ದೆ (ಎ) 2 ದಂ (ಎ) 3 ನ (ಅ ಇ ಉ)

ಮೆಱೆದೊಲಿಸುವಿಱಿದು ಸಲಿಸುವ
ಕುಱುಪಿಲ್ಲದ ನಿನಗೆ ದೇವನೆಂದಱಿಯದರೇ
ಕೆಱಗಿದಪರೆನ್ನ ಪುಣ್ಯದಿ
ನಱಿದೆಱಗಿದೆನರ್ಹನೆಂದನಂತಜಿನೇಂದ್ರಾ ೪೫

ಪರಮ ಭವದೀಯಚರಣ
ಸ್ಮರನಾಗಸ್ತ್ಯಂಗೆ ಚುಳುಕಮಾತ್ರಂ ಭವಸಾ
ಗರಶತಮೆಂದಪೆನಾಗಮ
ವಿರುದ್ಧಮೆನ್ನದಿರತರ್ಕ್ಯನಂತಜಿನೇಂದ್ರಾ ೪೬

ಜಿನ ನಿನ್ನಂ ಪೂಜಿಪನೊ
ಳ್ಪನವರತಂ ಪೊಗಳ್ವ ಸುಖಮೆ ಮೋಕ್ಷಂ ಮೋಕ್ಷಂ
ನಿನಗಕ್ಕನಂತಕರ ಲೋ
ಚನ ಜಿಹ್ವಕನಪ್ಪನಕ್ಕನಂತಜಿನೇಂದ್ರಾ ೪೭

ವ॥ ಎಂದನೇಕ ಪ್ರಕಾರದಿಂ ಸ್ತುತಿಸಿ ಬೞಿಕ್ಕಂ

ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ [1]ರೈಶಾ[1]ಲಿ ನೀರಾಜನಂ
ವಿಳಸತ್ಕುಂಡಿಕೆ ಡೆಳ್ಳಿಯೆಂಬೆಡೆಗಳೊಳ್ಸಂಪೂರ್ಣತೋಯಾದಿ ಮಂ
ಗಳವಸ್ತು ಪ್ರಕರಕ್ಕದೇಂ ಶಚಿಯ ಕೆಯ್ಯುಂ ಕಣ್ಣುಮೋರೊಂದನ
ಗ್ಗಲಿಸುತ್ತಿರ್ದುದು ಪೂಜೆಗುಜ್ಜುಗಿಸಿ ತನ್ನಂ ನೋಡೆ ಸಂಕ್ರಂದನಂ ೪೮

ಕಳೆದುಕೊಳುತ್ತಮಿರ್ದುದು ಕರಂ ವರವಸ್ತುಗಳಿರ್ದುವರ್ಚನಾ
ವಳಿಯೊಳುದಗ್ರಭಕ್ತಿಭರದಿಂ ಜಳಮಾಯ್ತು ಸುಗಂಧಮಾಯ್ತು ತಂ
ಡುಳಚಯಮಾಯ್ತು ಪೂದುಱುಗಲಾಯ್ತು ಪರಿಹಾರಮಾಯ್ತು ದೀಪಮಾ
ಯ್ತೆಳಸಿದ ಧೂಪಮಾಯ್ತು ಫಳಮಾಯ್ತು ಮನಂ ಕವಿಪಾರಿಜಾತನಾ ೪೯

ನವರತ್ನದ ರಾಶಿಗಳಿಂ
ವಿವಿಧಾಂಬರಭೂಷಣಂಗಳಿಂ ಶಂಖಮಹಾ
ರವದಿಂ ಸಂಗೀತಸಮು
ತ್ಸವದಿಂ ಮುಕ್ತಾತಪತ್ರಚಾಮರಚಯದಿಂ ೫೦

---

1 ವೈಸಾ (ಅ ಇ ಉ)

ಭೃಂಗಾರಕಲಶದರ್ಪಣ
ತುಂಗಧ್ವಜಸುಪ್ರತಿಷ್ಠತಾಳಾಷ್ಟಮಹಾ
ಮಂಗಳದಿಂ ನವನಿಧಿಗಳಿ
ನಂಗಜಹರನಂ ಸುರೇಂದ್ರನಾರಾಧಿಸಿದಂ ೫೧

ವ॥ ಅಂತನೇಕ[1]ಮಂತ್ರಪ್ರಮುಖಪೂ[1]ಜಾವಿಧಾನದೊಳಂ ವಾಕ್ಪೂಜಾವಿಶೇಷದೊಳಮಾರಾಧಿಸಿ ಗಣಕೋಷ್ಠದೊಳಗಣ ವಿಶೇಷಕರನಾಗಿರ್ದ ಜಯನಾಥಗಣಧರದೇವ ಸಮಕ್ಷಮದೊಳಿರ್ದು ಪರಮಧರ್ಮಾ[2]ಭಿಸೇವಾಭಿ[2]ಮುಖನಾಗಲೊಡಮನಂತಜಿದ್ವಲ್ಲಭನ ವದನಮಂಡಲಮೆಂಬ ಹಿಮವದ್ವರಶಿಖರ[3]ವಳಯದಿಂ[3] ದಿವ್ಯಭಾಷಾನಿಮಿಷಾನಿಮಿಷ ತರಂಗಿಣೀಪ್ರವಾಹಂ ತಾಲುಸಂಘಟ್ಟನಮುಮಧರಸಂಘಟ್ಟನಮುಮಿಲ್ಲದೆಯುಂ ದೂರಾಸನ್ನಂಗಳೊಳವ್ಯಕ್ತಮಲ್ಲದೆಯುಂ ಗಂಭೀರಮಧುರಶ್ರವ್ಯಗುಣಾನುಪಮಾಳಂಕೃ[4]ತಿಗೆ[4] ಸಲ್ಲದೆಯುಂ ದೇವಭಾಷಾದಿ ಸಕಲದೇಶಭಾಷಾತ್ಮಕ[5]ಮ[5]ಪ್ಪುದಱಿನರ್ಧಮಾಗಧಿಯೊಳ್ ನಿಲ್ಲದೆಯುಂ ಯಥಾಪ್ರಕಾರಮಿಂತವತರಿಸಿದುದು

ವ॥ ಜೀವ ಪುದ್ಗಲಧರ್ಮಾಧರ್ಮಾಕಾಶಮೆಂಬ ಪಂಚಾಸ್ತಿಕಾಯಂಗಳುಮನೀಯಯ್ದುಂ ಕಾಲದ್ರವ್ಯಂಬೆರಸಾಱಾದ ಷಡ್ದ್ರವ್ಯಂಗಳುಮಂ ಜೀವಮಜೀವಮಾಸ್ರವಬಂಧ ಸಂವರೆನಿರ್ಜರೆಮೋಕ್ಷಮೆಂಬ ಸಪ್ತತತ್ತ್ವಂಗಳುಮಂ ಈ ಏಳು ತತ್ತ್ವಂ ಪುಣ್ಯಪಾಪಂಗಳೆಂಬೆರಡುಂ ಪದಾರ್ಥಂಗಳ್ವೆರಸೊಂಬತ್ತಾದ ನವಪದಾರ್ಥಂಗಳುಮನೊಳಕೊಂಡು ಸಪ್ತರಜ್ಜು ಪ್ರಮಿತಸಮಚತುರಸ್ರಮೂಲಪ್ರದೇಶಮುಂ ಚತುರ್ದಶರಜ್ಜೂತ್ಸೇಧಮುಂ ಸಪ್ತರಜ್ಜು ಪ್ರಮಾಣ ದಕ್ಷಿಣೋತ್ತರಾಯಾಮಮುಂ ಪೂರ್ವಪಶ್ಚಿಮಕ್ರಮಹೀನೈಕರಜ್ಜು ಪರಿಮಾಣಮಧ್ಯಭಾಗಮು[6]ಮನುಪೂರ್ವಿ[6]ವಿಸ್ತಾರಿತ ಪಂಚರಜ್ಜುಸಂಖ್ಯಾಂತರ್ಭಾಗಮುಮನುಕ್ರಮಹೀಯಮಾನೈಕರಜ್ಜು[7]ಸಮಾಸಿ[7]ತಾಗ್ರಭಾಗಮುಮಾಮೂಲಚೂಳನೈರಂತರ್ಯತರುಸಾರೋಪಮಿತೈಕರಜ್ಜುಪ್ರಮಿತಚತುರಸ್ರತ್ರಸನಾಳಾಂತರಮುಂ ಘನೋದಧಿ ಘನನಿಳಯ ತನುವಾತನಾಮವಾಯುತ್ರಯಾವೇಷ್ಟಿತಮಾಗಿರ್ಪುದೀಲೋಕಸ್ವರೂಪಂ. ಈಲೋಕಮಧ್ಯದೊಳನೇಕದ್ವೀಪಕೂಪಾರವರ್ಷಧರ ಪರ್ವತಮಂದರಮಹೀಧರಪೂರ್ವಾಪರವಿದೇಹಭರತೈರಾವತಕರ್ಮಭೋಗಭೂಮಿಸಮಾಕೀರ್ಣಸ್ವಯಂಭೂರಮಣಸಾಗರಾವಧಿಯಾಗಿ[8]ರ್ಪುದು[8] ಮಧ್ಯಮಲೋಕಂ

---

1 ಪೂ (ಅಇಉ) 2 ಮೃತಸೇವಾಗ್ನಿ (ಎ) 3 ದಿಂ (ಅಇಉ)
4 ತಿ (ಅಇಉ) 5 ಮಾಗಿ (ಎ) 6 ಮನುಪೂರ್ವ (ಅಇಉ) 7 ಪ್ರಮಿ (ಎ)
8 ರ್ಪ (ಅಇಉ)

ವ॥ [1]ಮತ್ತಂ[1] ಮಧ್ಯಮಲೋಕದಿಂ ಜ್ಯೋತಿರ್ಲೋಕಂಬೆರಸು ಮೇಗಣ ಭಾಗದೊಳ್ ಸೌಧರ್ಮೇಶಾನ ಸನತ್ಕುಮಾರಮಾಹೇಂದ್ರಬ್ರಹ್ಮಬ್ರಹ್ಮೋತ್ತರಲಾಂತವ ಕಾಪಿಷ್ಟ ಶುಕ್ರ ಮಹಾಶುಕ್ರ ಶತಾರಸಹಸ್ರಾರಾನತಪ್ರಾಣತಾರಣಾಚ್ಯುತಮೆಂಬ ಪದಿನಾಱುಕಲ್ಪಂಗಳೊಳವೊಂಬತ್ತುಗ್ರೈವೇಯಕಂಗಳೊಳವೊಂಬತ್ತು[2]ಮನುದಿಸಿಗ[3]ಳೊ[3]ಳಂ ಸರ್ವಾರ್ಥಮಧ್ಯಬದ್ಧಮಪ್ಪ ಪಂಚಾಣುತ್ತರೆಗಳ[3]ಮುತ್ತರೋತ್ತರ ಸುಖಾಯುರಾಧಿಕ್ಯಮುಂ ತಳೆದಿರ್ಪುದು ದೇವಲೋಕಂ ಮತ್ತಮಿಾ ಮಧ್ಯಲೋಕದಿಂ ಕೆಳ[4]ಗೆ ಮಧ್ಯ[4] ಭವನಮೆಂಬ ನಾಗಲೋಕದಿನತ್ತ ರತ್ನಪ್ರಭೆ ಶರ್ಕರಪ್ರಭೆ ವಾಲುಕಪ್ರಭೆ ಪಂಕಪ್ರಭೆ ಧೂಮಪ್ರಭೆ ತಮಪ್ರಭೆ ಮಹಾತಮಪ್ರಭೆಗಳುಂ ಭೇದದಿನದಱುತ್ತರೋತ್ತರ ದುಃಖಾಯುಷ್ಯಕಾಯೋಚ್ಛೇದಂಗಳಂ ತಳೆದಿರ್ಪುದು ನರಲೋಕಂ. ಈ ಮೂಱುಂ ಲೋಕಂಗಳಂ ತೊಟ್ಟನೆ ತೊಳಲ್ದು ತಿಟ್ಟನೆ ತಿರಿವ ನರಕತಿರ್ಯಙ್ಮನುಷ್ಯ ದೇವಗತಿಗಳ್ಗೆ ಪುಣ್ಯಪಾಪಾಸ್ರವಂಗಳೆ ಕಾರಣಂಗಳ್. ಅವಱೊಳ್ ಸಮ್ಯಗ್ದರ್ಶನಜ್ಞಾನಚಾರಿತ್ರಮೆಂಬ ರತ್ನತ್ರಯ ಬೀಜಪ್ರಭೂತಮಪ್ಪೇಕಾದಶನಿಲಯ ನಿಶ್ಚಿತ ಸಾಗಾರಧರ್ಮದೊಳಂ ಬಾಹ್ಯಾಭ್ಯಂತರಭೇ[5]ದಭಿನ್ನ[5]ದ್ವಾದಶವಿಧತಪೋಮಾರ್ಗವರ್ತಿಯಪ್ಪನಗಾರಧರ್ಮದೊಳಂ ನೆಗೞ್ದ ಚಾರಿತ್ರಂ [6]ಪುಣ್ಯಾಸ್ರವ[6]ಕಾರಣಂ. [7]ಕಾಮಕ್ರೋಧಲೋಭಾದಿಗಳಿಂ ಜ್ಞಾನಾವರಣಾದ್ಯಷ್ಟವಿಧಮಾಗಿಯುಮನೇಕವಿಧದಿನುದಯಿಸುವ ಕರ್ಮಪರಿಪಾಕಂ ಪಾಪಾಸ್ರವಕಾರಣಂ[7]. ಈ ಕರ್ಮಂಗಳೆರಡರ್ಕೆ ಜೀವಂ ತಾನೆ ಕರ್ತೃವುಂ ಭೋಕ್ತೃವುಮಪ್ಪ ರತ್ನತ್ರಯ ಸಾಕಲ್ಯಮುಭಯ ಕರ್ಮಂಗಳೊಳಂ ನಿರ್ಮೂಲನಕ್ಕೆ ಕಾರಣಮಾಗಿ ಕರ್ಮನಿರ್ಮೂಲನಮೆ ಮೋಕ್ಷಮಕ್ಷಯಮನಂತಮವ್ಯಾಬಾಧಮತೀಂದ್ರಿಯಮನಿಂದ್ರಿಯಮಪುನರ್ಭವಂ ಸಿದ್ಧ ಪರಮೇಷ್ಠಿನಿಷ್ಠಿತನಿತ್ಯಾವಾಸಂ ಭವ್ಯಜನಪರಮೋಪಾದೇಯಮೆಂದು ಸಂಕ್ಷೇಪದಿಂ ನಿರೂಪಿಸಲೊಡಂ ಸಕಲಗಣಸಮೂಹಂ ಪರಮಾನುರಾಗರಸದಿಂ ತನ್ನೊಳ್ ತಣ್ಮಲೆದು ನಲಿದಾ ಪರಮಪುರುಷನನಾರಾಧಿಸುತ್ತುಮಿರ್ದುದಾಗಳ್

ಪರಮಾರ್ಹನ್ಮುಖಚಂದ್ರಮಂಡಲವಚಶ್ಚಂದ್ರಾತಪಾಸಾರದಿಂ
ತೆರೆಸೂಸುತ್ತಿರೆ ಹರ್ಷಬಾಷ್ಪಸಲಿಲಂ ಮೆಯ್ವೆರ್ಚೆ ರೋಮಾಂಚ ಶೀ
ಕರ [8]ಜಾಳಂ[8] ನಲಿದಾಡೆ ಚಿತ್ತಜಳಸತ್ವವ್ರಾತಮಾನಂದ ನಿ
ರ್ಭರಸಂದರ್ಭಮುದಾಳ್ದನೂರ್ಜಿತ ಯಶೋಲಕ್ಷ್ಮೀಸುಧಾಸಾಗರಂ ೫೨

ವ॥ ಅನ್ನೆಗಮಿತ್ತಲ್

---

1 ಈ ಮರ್ತ್ಯ (ಅಇಉ) 2 ದೇಶ ವಿಮಾನಂಗ (ಅ) ಗ (ಇಉ)
3 ಳಮಯ್ದುಮನುತ್ತರೆಗಳೊಳಂ ಸರ್ವಾರ್ಥಸಿದ್ಧಿಯೊಳು (ಅ ಇ ಉ) 4 ಗೆ (ಎ)
5 ದ (ಎ) 6 ಸ್ವರ್ಗಾಪವರ್ಗಕ್ಕೆ (ಎ) 7 ಮಿಥ್ಯಾತ್ವಾವ್ರತಾದಿಗಳ್ ಜ್ಞಾನಾವರಣಾದ್ಯಶುಭಕರ್ಮಂಗಳ್ಗೆ ಕಾರಣಂಗಳುಮಿಾ (ಎ) 8 ದಿಂದಂ (ಅ ಇ ಉ)

ಪರಿನಿಷ್ಕ್ರಮಣದೊಳಭವಂ
ಧರಣೀರಕ್ಷಣಮೆ ಸಕಲಪುರುಷಾರ್ಥಮಿದೆಂ
ದಿರಿಸಿದೊಡಯೋಧ್ಯೆಯೊಳಗಿ
ರ್ದರಸುತನಂಗೆಯ್ವನಂತು ವಿಜಯಕುಮಾರಂ ೫೩

ತಂದೆಯನಗಲ್ದ ವಿರಹಂ
ನಂದದೆ ಕಾರ್ಪಾಸಶಿಖಿಯೊಲೊಳಗೊಳಗಱಲಂ
ಸಂಧಿಸೆ ನಿಲಲಾಱದೆ ನಿಜ
ಮಂದಿರದೊಳ್ ರಾಜ್ಯಸುಖಪರಾಙ್ಮುಖನಾದಂ ೫೪

ಮಂತ್ರಿಮಹತ್ತರರೊಳ್ ಸಂ
ಯಂತ್ರಿಸಿ ಸಾಮ್ರಾಜ್ಯಭಾರಮಂ ತಳರ್ದಂ ನಿ
ರ್ಮಂತ್ರಂ ನಿಸ್ಸಂಗಂ ನಿ
ಸ್ತಂತ್ರಂ ಕಾಣ್ಬಟ್ಕೆಱಂ ಜಗತ್ರಯಗುರುವಂ ೫೫

ಇನ್ನೆಡೆಯಿಂದಂ ಮಗುೞೆಂ
ತನ್ನಯ ರೂಪಿಂದೆ ನಿಂದನಂತೋಹಂ ಎಂ
ಬನ್ನವರಮೆಂದು [1]ಪೂ[1]ಣ್ದಿ ನಿ
ಸಂ ನಿಲ್ಲದೆ ರಾಜಭವನದಿಂ ಪೊಱಮಟ್ಟಂ ೫೬

ಅಸುಸಂಧಾರಣಮಾತ್ರಮ
ನಸಂಗದಿಂ ತಾಳ್ದಿ ಮಿಕ್ಕುದಂ ತ್ಯಜಿಯಿಸಿದಂ
ಕುಸುಮವಿಲೇಪನಭೂಷಣ
ವಸನಾಶನಪಾನಸುರತಶಯನಾದಿಗಳಂ ೫೭

ಕಟ್ಟಿದ ಸುವ್ರತಸೂತ್ರಂ
ಮೆಟ್ಟಿದ ಕೆರ್ಪುಟ್ಟವಲ್ಕಲಂ ಮೊಟ್ಟೆಯ ಕೂೞ್
ನಟ್ಟ ಬಿಸಿಲ್ಗೆತ್ತಿದ ಕೊಡೆ
ಕಟ್ಟಾಯತನಾಗಿ ಚಳಯದಿಂ ಪೊಱಮಟ್ಟಂ ೫೮

ಗಿರಿ[2]ಶಿಖರ[2]ದೊಳ್ ನದೀನದ
ಪರಿಸರದೊಳ್ ಬಿಂಜದಡವಿಯೊಳ್ ನಂದನದೊಳ್
ತರುಮೂಲದೊಳ್ ಗುಹಾಗ
ಹ್ವರದೊಳ್ ಪರ್ವತನಿತಂಬದೊಳ್ ಕಂದರದೊಳ್ ೫೯

1 ಮಾ (ಎ)  2 ಗಹನ (ಅ ಇ ಉ)

ನಾಡೊಳ್ ನಗರ ಗ್ರಾಮಂ
ಖೇಡಂ ಖರ್ವಡ ಮಡಂಬ ಪತ್ತನಮೆಂಬೀ
ಬೀಡುಂದಾಣದೊಳೆಲ್ಲಂ
ನೋಡುತ್ತುಮನಂತನಾಥನಂ ನರನಾಥಂ ೬೦

ಎನಿತಾನುಮಱಸಿ ಕಾಣದೆ
ತನು ತಾಱಿ ಬೞಲ್ದೞಲ್ದು ಬೆಂಬೞಿವಿಡಿದೊಂ
ದನುಮಾನದಿಂ ಸಹೇತುಕ
ವನದೆಡೆಗೆ ಮಗುಟ್ದು ಬಂದನಾ ವಿಜಯನೃಪಂ ೬೧

ಆ ವನದ ನಟ್ಟನಡುವತಿ
ಪಾವನತಳದಲ್ಲಿ ಪರಿದು ಪರ್ವಿರ್ದಶ್ವ
ತ್ಥಾವನಿಜಂ ಶಶಿಕಾಂತ
ಗ್ರಾವಮನೊಳಪಾಯ್ತು ಕಣ್ಗೆವಂದಿರೆ ಕಂಡಂ ೬೨

ಮಂದಾರದಲರ್ಗಳಿಂ ಹರಿ
ಚಂದನದಿಂ ಮುತ್ತಿನಕ್ಕಿಯಿಂ ಮಾಣಿಕದಿಂ
ನಂದದ ಸೊಡರ್ಗುಡಿಗಳಿನಾ
ಗಂದಮನೊಡರಿಸುವ ಪರಿಕರಂಗಳನದಱೊಳ್ ೬೩

ಅಂತಲ್ಲಿ ಕಂಡು ಗಮನ
ಶ್ರಾಂತಿಯನಾಱಿಸುವ ಬವಸೆಯಿಂ ಕುಳ್ಳಿರೆ ಭೂ
ಕಾಂತಂ ಬಂದರದೊರ್ವರ್
ಶಾಂತಿಶುಭಾಚಾರ್ಯರೆಂಬ ದಿವ್ಯಮುನೀಂದ್ರರ್ ೬೪

ಆರಣ್ಯವಾಸರೇಕವಿ
ಹಾರವ್ರತಶೀಲಗುಣವಿದಾನನಿಧಾನ
ಕಾರುಣ್ಯಾತ್ಮರ್ಬರೆ ಕಂ
ಡಾ ರಾಜಕುಮಾರನೆಱಗೆ ಪರಸಿ ಬೞಿಕ್ಕಂ ೬೫

ತೊಳಪ ದಶನಾಂಶು ಜಾಹ್ನವಿ
ತೊಳೆಯೆ ತನೂದುಃಖಪಂಕಮಂ ಮೃದುಮಧುರೋ
ಜ್ಜ್ವಳವಾಣೀದುಂದುಭಿ ಬೆಂ
ಕೊಳೆ ದುರಿತಮೃಗಂಗಳಂ ದಯಾನಿಧಿ ನುಡಿದಂ ೬೬

ಅರಳಿಯ ಮರನಿದು ನಿನ್ನಯ
ಗುರು ನಿಂದೆಡೆಯಾ ಸುಧಾಂಶುಕಾಂತೋಪಳದೊಳ್
ಪರಮಜ್ಞಾನನಿಧಾನಂ
ದೊರೆಕೊಂಡುದು ಸುರರುಮಸುರರುಂ ಪೂಜಿಸಿದರ್ ೬೭

ಇದಱಿಂ ಬಱಿಕ್ಕಮೊಗೆದಂ
ಬುದಮಾರ್ಗದೊಳಿರ್ದನರ್ಕಕೋಟಿಪ್ರಭೆ ಸ
ನ್ನಿದಮಾದ ದಿವ್ಯದೇಹದಿ
ನೊದವಿದ ನುಣ್ಬೆಳಗು ಬೆಳಗೆ ದಿಗವನಿತಳಮಂ ೬೮

ಸಮವಸರಣದಿಂ ಪೊದಟ್ದಿ
ಷ್ಟಮಹಾಪ್ರತಿಹಾರವೈಭವಂ ಮೂವತುನಾ
ಲ್ಕು ಮಹಾತಿಶಯಂ ತ್ರಿಭುವನ
ರಮಣಂಗೆ ಜಿನಂಗೆ ಮೆಱೆವುವುಱಿದವರ್ಗೊಳವೇ ೬೯

ಆಗಳ್ ಧರ್ಮವಿಹಾರದಿ
ನಾಗಸದೊಳ್ನಡೆದು ಭವ್ಯಸಸ್ಯಾವಳಿಗ
ಳ್ಗಾಗಿಸಿ ಧರ್ಮಾಮೃತವ
ರ್ಷಾಗಮಮಂ ತೀರ್ಥನಾಥನಿರ್ದಪನಲ್ತೇ ೭೦

ನೀನತಿಭರದಿನನಂತಂ
ನಾನೆಂಬನ್ನೆವರಮಱಸು[1]ವೈ[1] ತಂದೆಯನೆಂ
ಬೀ ನಿಯಮದೆ ನಿನ್ನಂ ನಿನ
ಗಾ ನಿಯಮಂ ಸಫಳಮಪ್ಪ ನೋಂಪಿಯನುಸಿರ್ವೆಂ ೭೧

ಪುರುನಾಥ ದಿವ್ಯಭಾಷಾ
ವಿರಚನೆಯೊಳ್ ವೃಷಭಸೇನಗಣಧರದೇವರ್
ಭರತಂಗೆ ಪೇಟ್ದಿರುತ್ತಮ
ಪುರಾಣಸಂಸಿದ್ಧಮಪ್ಪನಂತವ್ರತಮಂ ೭೨

1 ವೆಂ (ಎ)

ಪದಪಿಂದೆ ಭಾದ್ರಪದ ಶು
ದ್ಧದಾ ಚತುರ್ದಶಿಯೊಳಿರ್ಪುದುಪವಾಸವನಾ
ಅದೊಡೇಕಭುಕ್ತಮಂ ಮಾ
ಟ್ಪುದು ಮತ್ತಂ ದೇವಪೂಜೆಯಂ ಜಾಗರಮಂ ೭೩

ಪದಿನಾಲ್ಕನೆಯ ಜಿನೇಂದ್ರಂ
ತ್ಪದೀಯಗುರುವದಱಿನಮಳಸೂತ್ರಾಂತಿಕದೊ
ಳ್ಪದಿನಾಲ್ಕುಂ ಗಂಟೆನಿಕ್ಕುವು
ದದು ಕನಕದ ಪಟ್ಟನೂಲ ನೂಲಭಿರಚಿತಂ ೭೪

ಅದು ಕೆಟ್ಟೊಡೆ ಕೆಡುವುದು ಸಿರಿ
ಯದು ಪಱಿದೊಡೆ ಪಱಿಗು ಜಸಮುದಾಸೀನಂ ಮಾ
ಡಿದೊಡಂತೆ ತನ್ನ ಮುಂಬಗೆ
ಯದು ಲೋಕಂ ಸೂತ್ರಮುದಱಿನವಹಿತಪಾತ್ರಂ ೭೫

ಆಚಾರದಿನರ್ಹಂಗಭಿ
ಷೇಚನಮಂ ಮಾಡಿ ಸೂತ್ರಮಂ ಚಂದನಗೋ
ರೋಚನಕುಂಕುಮಕರ್ಪೂ
ರಾರ್ಚಿತದಿಂದಂ ಜಿನಾಂಘ್ರಿಗೇಱಿಸಿ ಬೞಿಯಂ ೭೬

ಓಂ ಹ್ರೀಂ ನಮೋಽರ್ಹತೇನಂತತೀರ್ಥಕೃತೇನಂತ
ಬೋಧಾನಂತದರ್ಶನಸೌಖ್ಯೋನ್ನತವೀರ್ಯಾಯ
ಹ್ರೀಂ ನಮೋ ಭಗವತೇ
ಅನಂತನಾಮ್ನೇ ನಮೋಽನಂತಜಿನನಾಥಾಯ

ಈ ಮಂತ್ರದಿನಭಿಮಂತ್ರಿಸಿ
ಮೂಮೆ ಗಣಾಚಾರ್ಯಹಸ್ತದಿಂದವಶೇಷಾ
ಧಾಮಂಬೆರಸವನತಮುಖ
ತಾಮರಸಂ ಕೊಳ್ಗೆ ಕೇಳ್ದು ಕಥೆಯಂ ಬೞಿಯಂ ೭೭

ಕ್ರಮದಿಂ ಧಾರಮ"ನೋಂ ಹ್ರೀಂ
ನಮೋಽರ್ಹತೇನಂತಬಂಧನಾಶಾಯಾನಂ
ತ ಮಹಿಮ್ನೇ ಸ್ವಾಹಾ"ಯೆಂ
ಬ ಮಂತ್ರಮಂ ಪೇೞ್ದು ಕಟ್ಟುವುದು ಬಲದೋಳೊಳ್ ೭೮

ಮುಂಡಗೆ ಮೇಣ್ ಹೂರಿಗೆ ಮೇ
ಣುಂಡಲಿಗೆಗಳಕ್ಕಿಕಣಿಕದಿಂದೈಮಾನಂ
ಗೊಂಡಿಪ್ಪತ್ತೆಂಟಾಗಿರೆ
ಖಂಡಿಸಿ ಕೊಡುವುದು ದೃಢವ್ರತಂಗಂತದಱೊಳ್ ೭೯

ಬಾಯಿನಮಿಾ“ ಗೋಂ ಹ್ರೀಂ ನಿ
ಶ್ರೈಯಸಮಸ್ಮೈದದಾತ್ವನಂತಫಲಂ ” ಎಂ
ಬೀಯುಚ್ಚಾರಿತಮಂತ್ರದಿ
“ ನಾಯುಷ್ಮಾನ್ಭವ ” ಎನುತ್ತೆ ಕೊಳ್ವುದು ಕೊಳ್ವಂ ೮೦

ವ್ರತಶೀಲ ಗುಣಾಚಾರಾ
ನ್ವಿತನಂ ಮುನಿಪನನೊಸೆದುಂ ಪರ್ವದ ದಿನದೊಳ್
ಗತನಾಗಿ ಚರಿಗೆ[1] ಗುಡುವನ[1]
ನತಿಥಿಪ್ರಿಯಪೂಜೆವೆರಸು ನಿಲಿಪುದು ಮನೆಯೊಳ್ ೮೧

ಪರಮಾನುರಾಗದಿಂದಂ
ನಿರಂತರಂ ಮಾಡಿ ಬಱಿಕೆ ತಾನುಣ್ಬುದು ಕೊ
ಟ್ಟಿರಿಸಿದ ಬಾಯಿನದರ್ಧಮ
ನರೆಗೊಱೆಯದೆ ನೋಂಪುದಿಂತು ಪದಿನಾಲ್ಬರಿಸಂ ೮೨

ಶಿಲೆಯಂ ಲೋಹದಿನಕ್ಕು
ಜ್ಜ್ವಳಮಪ್ಪಂತಿರಲನಂತನಂ ಮಾಡಿಸಿ ತ
ತ್ಕಳಶಸ್ಥಾಪನವಿಧಿಮಂ
ಗಳಗೀತಾತೋದ್ಯನರ್ತನಂ ಮೆಱೆವಿನೆಗಂ ೮೩

ಪೂಜಾಭಿಷೇಕವಿಧಿಯಂ
ಯೋಜಿಸಿ ಮುನಿವರರ್ಗೆ ತಟ್ಟು ಕುಂಚಂ ಶ್ರುತರಾ
ರಾಜಿತವಸ್ತ್ರಂ ಮೆಱೆದಿರೆ
ಭೋಜನಮಂತೀವುದಬ್ಬಱಿಂ ಪದಿನಾಲ್ಕಂ ೮೪

1 ಬರುವನ (ಉ)

ಕುಂದದನಂತಪುರಾಣಮ
ನೊಂದಂ ಬರೆಯಿಸಿ ಮುಮುಕ್ಷುಗೀವುದು ಕೇಳ್ದಾ
ನಂದಿಸುವ ವಿವೇಕಿಗೆ ಚಿ
ತ್ರಂದೀವಿದ ಕಂಬಿಕಪ್ಪಡಂ ಮೆಱೆವಿನೆಗಂ ೮೫

ಇಂತುಜ್ಜಯಿಸುವುದಾದಿಯೊ
ಳಂತರದೊಳ್ಕಡೆಯು ಬರಿಸದೊಳ್ತಾಂ ದೊರೆಕೊ
ಳ್ವಂತಿರನಂತವ್ರತವಿದು
ನೋಂತ ಗುಣಾಧಿಕರಿಂಗಿಹಪರಸೌಖ್ಯಕರಂ ೮೬

ಸಿರಿ ಪಿರಿದಪ್ಪುದು ರುಜೆಗ
ಳ್ಪರಿಹರಿಪುವು ದುರಿತಮಿರದೆ ಪರೆವುದು ಪುತ್ರರ್
ಪರಮಪವಿತ್ರರ್ ಪುಟ್ಟುವ
ರರಸರ್ ಮುಂಕೆಟ್ಟ ರಾಜ್ಯಪದಮಂ ಪಡೆವರ್ ೮೭

ಕಾಂತೆಗೆ ಸೊಬಗುಂ ಸಿರಿಯುಂ
ಸಂತಾನಮುಮೆಯ್ದೆ ತನಮುಮಭ್ಯುದಯಮುಮೋ
ರಂತು ನೆಲೆವೆರ್ಚೆ ಸುಖದಿಂ
ಸಂತೋಷಮನೆಯ್ದಿ ಬಾಳ್ವರಿದು ಪರಮಾರ್ಥಂ ೮೮

ಕಡೆಯೊಳಮರೇಂದ್ರಪದಮಂ
ಪಡೆದಿಂದ್ರಾಣೀವಿಳಾಸಮಂ ತಳೆದು ಸುಖ
ಕ್ಕೆಡೆಯಿಲ್ಲೆನೆ ಭೋಗಂಗ
ಳ್ಪಡಿಯಿಲ್ಲೆನೆ ನಲಿವರೊರ್ಮೆಯುಂ ಸ್ತ್ರೀಪುರುಷರ್ ೮೯

ನೀನುಂ ನೋಂತೀ ನೋಂಪಿಗೆ
ಭೂನಾಯಕರೊಳಗೆ ಕರ್ತೃವಾಗಿ ಯಶಶ್ರೀ
ದಾನಶ್ರೀ ವಿಭವಶ್ರೀ
ಮಾನಶ್ರೀವೆರಸು ತಾಳ್ದ ರಾಜ್ಯಶ್ರೀಯಂ ೯೦

ಇಲ್ಲಿಗಿದೆ ನೂಱುಯೋಜನ
ದಲ್ಲಿ ಮಹಾಸಮವಸರಣವಿಭವದಿನರ್ಹ
ದ್ವಲ್ಲಭನಿರ್ದಪ್ಪ ನೀಂ ಪೋ
ಗಲ್ಲಿಗನಂತನನೆ ಕಂಡು ಸುವ್ರತನಪ್ಪೆ ೯೧

ಪ್ರಚುರತರ ಭಾದ್ರಪದ ಶು
ದ್ಧ ಚತುರ್ದಶಿ ನಾಳೆ ನೋನೆ ವನದೇವತೆಯರ್
ಖೇಚರಗತಿಯಿಂದಮೊಯ್ವರ್
ಸಚರಾಚರಗುರುವನೊಂದುನಿಮಿಷದೆ ಕಾಣ್ಬೈ ೯೨

ಎಂದಾ ಮುನಿ ನೋನಿಸೆ ನೋಂ
ತಂದಾಗಳೆ ಸಮವಸರಣಮಂ ಪೊಕ್ಕತ್ಯಾ
ನಂದಮಯವಾಗೆ ಕಂಡಭಿ
ವಂದಿಸಿದಂ ತ್ರಿಭುವನೈಕಚೂಡಾಮಣಿಯಂ ೯೩

ನುತಿಯಿಂ ನತಿಯಿಂ ಪೂಜಾ
ತತಿಯಿಂ ಭಜಿಯಿಸಿ ಬೞಿಕ್ಕೆ ವಿಜಯಂ ನಿಜಸಂ
ಸೃತಿಸುಖಮುಮನಕ್ಷಯ[1] ಪರ
ಗತಿಸುಖಮುಮನಾಂತು ರಾಜ್ಯಲಕ್ಷ್ಮಿ[1]ಯೊಳಿರ್ದಂ ೯೪

ಕ್ರಮದಿಂ ನೋನಿಪನಂತಜಿದ್ವ್ರತಸಪರ್ಯಾಶ್ಚರ್ಯದಿಂ ನೂತ್ನರ
ತ್ನಮಯ ಶ್ರೀಜಿನರಾಜಮಂದಿರಶತೋದ್ಧಾರಂಗಳಿಂ ಪಾತ್ರದಾ
ನಮನಃ ಪ್ರೀಣನದಿಂದನಂತವಿಜಯೋರ್ವೀವಲ್ಲಭಂ ಶ್ಲಾಘನೀ
ಯಮನೇಂ ಮಾಡಿದನೋ ಭವದ್ವಿತಯಮಂ ಸಾಹಿತ್ಯರತ್ನಾಕರಂ ೯೫

## ಗದ್ಯ

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರ ಮುನೀಂದ್ರ ಪ್ರಸಾದಾಸಾದಿತ ರತ್ನತ್ರಯಾಭರಣಕಿರಣಪ್ರಸನ್ನಾಂತಃಕರಣ ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ಅನಂತನಾಥಪುರಾಣದೊಳ್ ಸಮವಸರಣವರ್ಣನಂ
ದಶಮಾಶ್ವಾಸಂ ಸಂಪೂರ್ಣಂ

1 ಸುಖತರಸುಖಮನಾಂತಿಂತು ರಾಜ್ಯಲೀಲೆ (ಅಇಉ)

# ಏಕಾದಶಾಶ್ವಾಸಂ

ಶ್ರೀಮುಖಪೂರ್ಣಸುಧಾಕರ
ಕೌಮುದಿ ವಾಗ್ಭಾಮೆ ಭುವನಮಂ ತನ್ನ ತನೂ
ಧಾಮದೆ ಧವಳಿಸೆ ಮಹಿಮೋ
ದ್ದಾಮತೆವಡೆದಂ ವಿನೇಯಜನಮುಖತಿಲಕಂ ೧

ಮದನಪತಾಕೆಯೆಂಬ ಖಚರಾಂಗನೆ ದಿವ್ಯಸಭಾಂತರಾಳ[1]ಮಂ[1]
ಮದನಹರಂಗೆ ಪೊಕ್ಕೆಱಗಿ ಮುಖ್ಯಗಣಾಗ್ರಣಿಗಳ್ಗೆ ಭಕ್ತಿಭಾ
ವದೆ ಗುರುಭಕ್ತಿ[2]ಪೂರ್ವ[2]ಮಭಿವಂದಿಸಿ ಮತ್ತೆಬರುತ್ತೆ ಧೂಳಿಶಾ
ಳದ ಕಡೆಮಾಡದೊಳ್ಕೆಳದಿಯಂ ಸಭೆಗೆಯ್ದೆಬರುತ್ತುಮಿರ್ದಳಂ ೨

ವ॥ ಚಿತ್ರಲತೆಯೆಂಬ ಮತ್ತಮರಾಳಗಮನೆಯಂ ಕಂಡು ಕೆಯ್ಯಂ ಪಿಡಿದು ನಿಲಿಸಿ ತದ್ಗೋಪುರಮಂಡಪಪ್ರಥಮಭೂಮಿಕಾ[3]ರತ್ನವೇ[3]ದಿಕೆಯ ಮುತ್ತಿನ ಮತ್ತವಾರಣಮನಿರ್ವರುಂ ನೆಮ್ಮಿ ಕುಳ್ಳಿರ್ದು

ಕೇಳೆಲೆ ತಂಗಿ ಚಿತ್ರಲತೆ ನೀಂ ಪೆಱಗಿರ್ದಪೆಯೆಂದು ನಿನ್ನನಾಂ
ಕೇಳಿ ಲತಾವನೀತಳದೊಳಾ ಕೃತಕಾದ್ರಿಯೊಳಾ ಗಣಾಂಗನಾ
ಮಾಳೆಯೊಳಾ ಸರೋವರದೊಳಾ ವನವೀಧಿಯೊಳಾ ಸುನೃತ್ತಗೀ
ತಾಳಯದೊಳ್ತೊಳಲ್ದಱಿಸಿ ಕಾ[4]ಣೆನೆ[4] ಪೇಳ್ದಪೆನೆಂದು ಕೇಳ್ದದಂ ೩

ವ॥ ಎಂಬುದುಮಾ ಚಿತ್ರಲತೆ[5]ಯಂತೆಕ[5]ರ್ಣಸುಭಗಮಾದ ವೃತ್ತಕಮಂ ಕೇಳಲಭಿಮುಖಿಯಪ್ಪುದುಂ ಮದನಪತಾಕೆಯಿಂ[6]ತು[6] ಪೇಳ್ದಪಳೆಂದು ಸಮವಸರಣಮಂಡಲಮೆಂಬ ಸನ್ಮಾರ್ಗಮಂಡಳದೊಳುದಿಸಿದ ಚಂದ್ರಮಂಡಳದಂತೆ ಮಂಡಳಿಸಿ ಪೊಳೆವ ಧವಳಕಾಯಕಾಂತಿಕೌಮುದೀಪ್ರಭೆಗೆ ಸುಪ್ರಭೆಯಂ ತೆರಳ್ಚಿ ಸುಪ್ರಭನೆಂಬ ನಾಲ್ಕನೆಯ ಬಲದೇವಂ ಬಂದು ದೇವರ ದೇವನನನೇಕಾರ್ಚನೆಗಳಿಂದರ್ಚಿಸಿ ಪೊಡೆವಟ್ಟು ಜಯನಾಥಗಣಧರರೊಳ್ ತನ್ನ ಪೂರ್ವಜನ್ಮವೃತ್ತಕಮಂಬೆರಸು ನಿಜಾನುಜಾತಂ ತ್ರಿಖಂಡಮಂಡಳಾಧೀಶ್ವರಂ ಚತುರ್ದಶ ವಾಸುದೇವನೆನಿಸಿದ ಪರಮಪುರುಷೋತ್ತಮನ ವೃತ್ತಕಮಂ ಬೆಸಗೊಳಲೊಡನಾ ಗಣಧರಾಧೀಶ್ವರರಿಂತೆಂದು ಬೆಸಸಿದರದೆಂತೆಂದೊಡೆ

---

1 ದೊಳ್ (ಅಇಉ) 2 ಭಾವ (ಅಇಉ) 3 ವೇ (ಎ)
4 ಣದೆ (ಅಇಉ) 5 ಕ (ಅಇಉ) 6 ತೆಂದು (ಎ)

ಮೇರುವಿನರ್ಥಮಂ ಜನನಿಧಾನಮನಗ್ಗದ ಜಂಬುದೀ[1]ಪ[1]ಮಂ
ವಾರಿಧಿಸರ್ಪನಪ್ಪಿದುದು ವಾರಿಧಿವೇಷ್ಟಿತಭೂಮಿಭಾಗದೊಳ್
ಭಾರತವರ್ಷಮೊಪ್ಪಿದುದು ಭಾರತವರ್ಷದ ತೆಂಕವಕ್ಕದೊಳ್
ಧಾರಿಣಿಗುಜ್ಜ್ವಲಶ್ರವಣಕುಂಡಲಮಾಯ್ತು ಸುರಮ್ಯಮಂಡಳಂ ೪

ಅದಱ ವಿಳಾಸಭಾಸುರ ಸಭಾಭವನಕ್ಕೆ ವಿತಾನಮಾಯ್ತು ಸ
ಗ್ಗದ ಸುಖದೊಳ್ಪುದ[2]ಕ್ಕೆ[2] ನೆಲಗಟ್ಟಿನ ಕೀರ್ತ್ತಿರವಟ್ಟಮಾದುದ
ಗ್ಗದ ಧನಸಾಮರಾಲಯದ ಮೆಯ್ಸಿರಿಯೆಂದೊಡೆ ನೋಡ ನಾಡ ಹೊ
[3]ತ್ತ[3]ದ ಪರಿಯಲ್ತು ನಾಡೊಳಗುದಾರದ ಭೋಗದ ಚಾಗದಾಗರಂ ೫

ಬಳಸಿದ ನಂದನಂಗಳ ಪಸುರ್ಪಿನ ಪತ್ತೆಱಗಿರ್ದ ಕೆಯ್ವೊಲಂ
ಗಳ ತೆನೆಗೆಂಪಿನೂರ ದವಳಾರದ ಬೆಳ್ಪಿನ ನೀಳನೀರಜಾ
ಕಳಿತ ತಟಾಕ ಮಂಗಳದ ಕರ್ಪಿನ ನೇರ್ಪುಮರ್ದಂಗಜಂಗೆ ಮಂ
ಗಳಕರವರ್ಣಪೂರಪರಿಮಂಡಳಮಾಯ್ತು ಸುರಮ್ಯಮಂಡಳಂ ೬

ನಗೆಗಣ್ಚಂದ್ರಿಕೆಯಂ ತುಳುಂಕೆ ಬೆಳಗಾವುತ್ತಿರ್ಪ ಕಾಂತಾಮುಖೇಂ
ದುಗಳಿಂ ಬರ್ಚಲ ಚಂದ್ರಕಾಂತ[4]ದ[4]ಲಪೂರಂ ಕುಂದದುರ್ವೇಱ್ದು ತೆಂ
ಗುಗಳೊಳ್ತಿಂಗು ಪಱಂಚೆ ಸೂಸುವೆಳನೀರೆಯ್ತಂದುದಭ್ರಾಂಗಣಾ
ಪಗೆಗಂ ಶಕ್ರನ ನಂದನಕ್ಕೆ ಮಿಗುಗುಂ ತಳ್ತಿಂಪುಮಂ ಸೊಂಪುಮಂ ೭

ನೆರೆಯುತ್ತಿರ್ಪ ರಥಾಂಗಪಕ್ಷಹತಿಯಿಂದಂ ಸಿಟ್ಟಿಸಲ್ಪಿಟ್ಟು ಷ
ಟ್ಚರಣಾಘಾತದೆ ಕುತ್ತಿಸಲ್ಕಿಸಿದು ಹಂಸವ್ಯಾನದಿಂ ಸೋಂಕೆ ಜೋ
ಲ್ದರುಣಾಂಭೋಜರಜಂ ಮುಸುಂಕೆ ಸುೞಗುಂ ಪಾಂಥಪ್ರಜಾಘಸ್ಮರಂ
ಸ್ಮರತೇಜಪ್ರಭೆ ರೂಪುಗೊಂಡು ಸುೞವಂತುದ್ಯಾನಮಾಳಾನಿಳಂ ೮

ಊರೊಳಗುಯ್ಯಲಾಡುವೆಳಪೆಂಡಿರ ಹೂಂಕೃತಿಯಾರ್ದುಪಾರ್ದು ಕೇ
ದಾರವನಂಗಳೊಳ್ಬೆಳಸುಗಾವ ಬೆಡಂಗಿಯರಿಟ್ಟ ಭೀಂಕೃತಂ
ಕೂರಿಸಿ ಕೂರ್ತ ಕಾದಲರನಾ ಬನದೊಳ್ಗುಱಮಾಡಿಯರ್ಧಕಾಂ
ತಾರಿಯ ಬಿಲ್ಲ ಜೇವೊಡೆಗೆ ಮೂವಡಿ ಮಾಱ್ಪುದು ಟಂಕೃತಂಗಳಂ ೯

1 ವ (ಅಇಉ) 2 ಜ್ಜೆ (ಅಇಉ) 3 ಸ (ಅಇಉ)
4 ಪ(ಅಇಉ)

ಜನಪತಿಯಿಪ್ಪ ಪೆರ್ಗುಱಿಪಿನಿಂದಿವು ಬೀಡಿವು ನಾಡೆಯೂರ್ಗಳೆಂ
ದನುವಿ[1]ಸಲಲ್ಲದುಂ[1]ತಱಿಯಬಾರದು ಭೇದಿಸಿ ಬೇಱೆವೇಱೆ ಸೊಂ
ಪಿನ ಸಿರಿ ಬೇಱೆವೇಱೆ ಮಣಿಮಾಡದ ತಿಂತಿಣಿ ಬೇಱೆವೇಱೆ ನಂ
ದನ ಲತೆ ಬೇಱೆವೇಱೆ ಪರಿಖಾಮಣಿ ತೋರಣವಪ್ರಗೋಪುರಂ ೧೦

ಪರಮಬ್ರಹ್ಮನ ನಂದನಂ ಭರತಚಕ್ರಾಧೀಶದರ್ಪಾಪಹಂ
ಚರಮಾಂಗಂ ಕುಸುಮೇಷು ಬಾಹುಬಲಿದೇವಂ ಶ್ರೀಮಹಾಮಂಡಳೇ
ಶ್ವರನಾಳ್ದಿರ್ದುದುದಾರವೀರವಿಭವಶ್ರೀ[2]ಸಾಧನಂ ಪೌ[2]ದನಂ
ಪುರಮುಂಟಾಪುರಮಾ ಸುರಮ್ಯವಿಷಯಶ್ರೀವಕ್ತ್ರಬಿಂಬೋಪಮಂ ೧೧

ಅದಱೊಳ್ಪುಟ್ಟಿದ ಗಂಡರೆಲ್ಲಮತಿವೀರರ್ಪೆಂಡಿರೆಲ್ಲಂ ವಿಳಾ
ಸದ ಸೌಭಾಗ್ಯದ ಸೀಮೆಗ[3]ಳ್ಕಿಱುಳ[3]ರೆಲ್ಲಂ ಪಂಡಿತರ್ಸೆಟ್ಟಿವ
ಟ್ಟದರೆಲ್ಲಂ ಕಡುಚಾಗಿಗಳ್ಬಡವರೆಲ್ಲಂ ಭೋಗಿಗಳ್ಕಿಂಕರುಂ
ಚದುರ ರ್ಲೆಂಕರುಮಾಯಗಾಱಿರಥಮವ್ಯಾದರ್ಕಳುಂ ಧಾರ್ಮಿಕರ್ ೧೨

ಅರಮನೆಗಿಂಬುವೆತ್ತ ರಣಮಂಡಳಮಾ ರಣಮಂಡಳಕ್ಕೆ ಬಿ
ತ್ತರಿಸಿದ ಬೀದಿ ವೀಥಿಗಳ [4]ತೌ[4]ದಲೆಗೊಪ್ಪುವ ಮಂಡಪಂ ಮನೋ
ಹರತರಮಂಡಪಕ್ಕೆ ಕರುವಿಟ್ಟವೊಲಿರ್ಪ ಸುಧಾಗೃಹಂಗಳ
ಚ್ಚರಿಯೆನೆ ಚೈತ್ರಚಂದ್ರಮರೆ ಚಿತ್ರಿಸಿದಂತೆ[5]ಸೆದಿ[5]ರ್ಪುದಾ ಪುರಂ ೧೩

ಭರತನನಳ್ಕಿ ಬಾಹುಬಲಿ ತುಳ್ಕಿ ಮರಳ್ಚಿದ ಪೂಗೊಳಂ ಭುಜಾ
ಪರಿಘದಿನಿಕ್ಕಿದಖ್ಖಡದ ಕೇಳಿನಗಂ ನಡೆನೋಡಿ ದಿಟ್ಟಿಗೆ
ಟ್ಟರಿಸಿದ ತಣ್ಬುಱಲ್ಮೆಱೆಯೆ ಮಾಡಿ [6]ತದಂಗದಿನಾಡಿ[6] ಸೋಲ್ವ ನ
ಲ್ಲರ ಬಿನದಂಗಳಿಂ ಮೆಱೆವುದೀಗಳುಮಾ ನಗರೀಬಹಿರ್ವಣಂ ೧೪

ತಿಳಿಗೊಳದೊಳ್ತೆಱಂಬೊಳೆದು ತಣ್ಣನೆ ಪಣ್ಣನೆ ಬಂದ ಮಾಮರಂ
ಗಳ ತಳಿರ್ಜೊಂಪದೊಳ್ನುಸುೞ್ದು ಮೆಲ್ಲನೆ ಮೆತ್ತನೆ ಮೊೞ್ಗಿ ಹಿಗ್ಗಿ ಪೂ
ಗಳ ಪೊಸಗಂಪಿಗಲ್ಲಿ ಸುೞಿದಿಮ್ಮನೆ ಕಮ್ಮನೆ ತೀಡಿ ಬೇಟದೊ
ಳ್ಬಳೆವುದು ಕೂಟಮಂ ಪ್ರಿಯರ್ಗೆ ತತ್ಪುರ[7]ನಂದನ[7]ಮಂದಮಾರುತಂ ೧೫

---

1 ಪರೆಲ್ಲರುಂ (ಅ) ಪರೆಲ್ಲರುಂ (ಇಉ) 2 ಪಾದನಂಪಾ (ಆಇಉ)
3 ಬ (ಆಇಉ) 4 ಶಾ (ಅ) ತಾ (ಇಉ) 5 ವೊಲಿ (ಆಇಉ)
6 ದತದಂಗದಿನಾಡಿ (ಆಇಉ) 7 ಬಾಹಿರ (ಎ)

ಅನಿತೊಳ್ಪಿಸೆವ ಸುರವ್ಯಾ
ವನಿಗಂ ಪೌದನಪುರಕ್ಕಮಧಿಪತಿ ವೀರಾ
ರಿನೃಪಾಲಶಿರಃ[1]ಕರಪಾ
ಣಿ[1]ನಿಘೃಷ್ಟಭುಜಾ[2]ಕೃಪಾಣಕಂ[2] ವಸುಷೇಣಂ ೧೬

ರಸೆಯಂ ಷಾಡ್ಗುಣ್ಯಮಿತ್ರಪ್ರಜನಪರಿವೃತೆಯಂ ತನ್ನ ತೇಜಃಪ್ರತಾಪಂ
ರಸವತ್ಕ್ಮಾಶ್ರೀರರಾಗಂ ಶಶಿವಿಶದಯಶಂ ಕ್ಷೌಮಮುದ್ಯೋತಕೀರ್ತಿ
ಪ್ರಸರಂ ಮುಕ್ತಾಫಲಂ ತಾಮೆನೆ ಸೊಗಯಿಸೆ ಕೈಗೆಯ್ದಳಂ ತಾಳ್ದಿಕೊಂಡಂ
ವಸುಷೇಣಂ ಸ್ವಾಪ್ತಚಾತುರ್ಬಲಸಮರತನುತ್ರಾಣಮುಕ್ತಿಪ್ರವೀಣಂ ೧೭

ಊರ್ವಶಿ ರಂಭೆ ಮೇನಕಿ ತಿಲೋತ್ತಮೆಯೆಂಬರ ಹಾವಭಾವಮಂ
ಪುರ್ವಿನ ಕೊಂಕು ಕಣ್ಮಲರ ಕಾಂತಿ ಕದಂಪಿನ ತೆಳ್ಪು [3]ಸಾ[3]ಲ್ಪುದೋ
ರೊರ್ವರ ಗೆಲ್ಪುದಕ್ಕೆನಿಪ ರಾಣಿಯ ವಾಸದ ದೇಸೆಯಾಸೆಯ
ಯ್ಯೂರ್ವರೊಳಂ ಸುನಂದೆ ಪಿರಿಯಳ್ ವಸುಷೇಣನ ಚಿತ್ತವೃತ್ತಿಯಿಂ ೧೮

ದರಹಾಸೋಜ್ಜ್ವಲಚಂದ್ರಿಕಾಪ್ರಸರದೊಳ್ ಲಾವಣ್ಯಕೇಳೀಸರೋ
ವರದೊಳ್ ಯೌವನಪುಷ್ಪಮಂಜರಿಯೊಳಂ ಚಚ್ಚಂಚರೀಕಂಗಳಂ
ತಿರೆ [4]ಲೀಲಾಶಫರಂ[4]ಗಳಂತಿರೆ ರಸಕ್ರೀಡಾಚಕೋರಂಗಳಂ
ತಿರೆ ಭೂಕಾಂತನ ಕಣ್ಗಳೇಂ ನಲಿವುವೋ ನಂದಾಮಹಾದೇವಿಯೊಳ್ ೧೯

ಜಯವಧು ಬಾಹುಪೂರಕದ ಮೇಲೆ ಮಲಂಗಿದ ತೋಳ್ಗಳಂ [5]ಮನಃ[5]
ಪ್ರಿಯ ದರಹಾಸದೊಳ್ನಲಿವ ವಕ್ತ್ರಮನೂರ್ಜಿತಲಕ್ಷ್ಮಿ ಹಾರಯ
ಷ್ಟಿಯೊಳೊಲೆದುಯ್ಯಲಾಡೆ ಪಿರಿದಾದರಮಂ ನಡೆನೋಡುವಂ ಸುನಂ
ದೆಯ ಮುಖಬಿಂಬಮೆಂಬ ಮಣಿದರ್ಪಣದೊಳ್ ವಸುಷೇಣಭೂಭುಜಂ ೨೦

ವ|| ಅಂತು ಸಕಲ ರಾಜ್ಯಾಂಗಲಕ್ಷ್ಮಿಯೊಳಂ ವಿನೋದವಿಳಾಸಂ ದೇಸೆವಡೆವಿನ ಮಿಷ್ಟವಿಷಯಕಾಮಸುಖಾನುಭವವಿಭೂತಿಯಿಂದಮಿರ್ದೊಂದು ದಿವಸಂ

ನಿಜವ್ಯೆಹಾಳೀವಿನೋದವ್ಯತಿಕರಿತಮನಂ ವಾಹಳೀಭೂಮಿಯೊಳ್ ಸಾ
ಮಜಮಂ ಬಂದೇಱುತಕ್ಕಿಂಬಿಡುವ ಹಿಡಿವ ಮಾರ್ಕೊಳ್ವ ಕೈಕೊಳ್ವ ಮಾದ್ಯ
ದ್ಗಜಚಾತುರ್ದಂತ ಮೇಳಾಪದೆ[6]ಪೆಣೆವೊಡೆವೊಟ್ಟೈಸಿ ತಟ್ಟೆಪ್ಪ[6] ಸೂೞಿಬ್ ಭೂ
ಭುಜರಂ ದೇವೇಂದ್ರನಂ ಧಿಕ್ಕರಿಸಿ ಮೆಱೆದನಾಧೋರಣಂ ಧಾರಿಣೀಶಂ ೨೧

---

1 ಖರಶಾಣ (ಎ) 2 ಜಾಕೃಪಾಣಕಂ (ಅಇಉ) ಜಾಕೃಪಾಣನೆಸೆ (ಎ)
3 ಪಾ (ಎ) 4 ಯಾದೋಯುಗಳಂ (ಅಇಉ) 5 ನಯ (ಎ)
6 ಪಣೆವಳಿವೊಟ್ಟಯ್ಸ ನಿಟ್ಟಯ್ಸ (ಎ)

ಮದಧಾರಾಸಾರಜಂಬಾಳಿತ ಧರಣಿತಳಂ ತಾಪಕೋಪಂಗಳೊಳ್ ಪು
ಟ್ಟಿದ ಕಾಯ್ಪಿಂ ಘಟ್ಟಿಸುತ್ತಿರ್ಪಿನಮಿಭಪತಿಯಂ [1]ನೀಡಿ ಬಿಟ್ಟೆಕ್ಕಿ ಕೆಯ್ಯೊಳ್
ಬಿದುವಂದಾಂ ಪೊಯ್ದು ಭೈಯೆಂದೊಡೆ ಬೆನಕನ ಚೋವಂಬೋಲಾಪ್ರೆ[1]ಚಕಾಧಾ
ರದೆ ಕುಳ್ಳಿರ್ಪಂದಮುಂ ತೋಱಿದನೊ ಜನಪನಾರೂಢಿಯಂ ಪ್ರೌಢಿಯಿಂದಂ ೨೨

ಪೊಳೆವಲಗಿಂ ಚಳಚ್ಚಳಿಪ ಮಿಂಚಿನ ಕಾ[2]ಣೆ[2]ಕೆವೆತ್ತ ಕಾಯದ
ಗ್ಗಳಿಕೆಯ ನಟ್ಟು ಸೋರ್ವ ಮದಧಾರೆಯ ಮೆಯ್ಸಿರಿ ಕಾರಹಾರಿಗಿ
ಟ್ಟಳಮೆನೆ [3]ಬಿ[3]ಟ್ಟನೊಟ್ಟಯಿಸಿ ವೇಂಟಿಡೆಯೊಳ್ತಿ[4]ರಿಪಲ್ಲಿ ಚಿತ್ರಂಗಾ[4]
ವಳಿಯ ತೆರಳ್ಕೆವೆತ್ತ ತೆರೆ ಸುತ್ತಿದವೊಲ್ಸುಱಿದೇಱಿ ತೋಱಿದಂ ೨೩

ವ॥ ಅಂತೇಱಿ ಮೆಱೆವ ವಾಹಳೀವಿನೋದಾವಸರದೊಳೊರ್ವಂ ಪೂರ್ವಪರಿಚಿತಪ್ರಸನ್ನಾಕಾರಂ ಸುದರ್ಶನನೆಂಬೊಂ ಬಂದು ಸುರಧನುಪರಿಧಿಪರೀತಸುಧಾಸೂತಿಬಿಂಬಾಯಿತ ಫುಲ್ಲಾಕಾರಝಲ್ಲರೀಸಮುಲ್ಲಸಿತ ಸಿತಾತಪತ್ರಂ ಕಿಂಕರೋತ್ತಾಳದೋಳಾಯಮಾನಕಲಾಪಗುಲುಂಚ್ಛಂ ಸ್ತಂಭಿತೋತ್ತರಂಗಖುರಪುಟಪರಾಗಪಟಲಂ ಘರ್ಮಜಲಲುಳಿತಗಂಡಮಂಡಲತಾಂಡವೀಕೃತನಾಗಕುಂಡಳಫಣಾಮಂಡಳನುರಸ್ಥಳಸ್ಥೂಲತಾರಹಾರಗಭಸ್ತಿವಿಸ್ತಾರಿತಕಂಚುಕಾಂಚಳಂ ಪರಿಧಾವತ್ಕತಿಪಯಾಂಗರಕ್ಷಕದಂಡಫಳಗರ್ಘರೀನಿರ್ಘೋಷಸಂವಲ್ಗುವಲದ್ವಾರಕೀಸಮಾರೂಢನೆಯ್ದೆವಂದುಮವತೀರ್ಣತುರಂಗನಾಗೆ ತನ್ನ ಬರವಿಂದವಕಾಶಮಿಾಯುತ್ತುಂ ಮತ್ತಗಜದ ಬಿದುವನಪ್ಪಳಿಸುತ್ತುಂ ನಿಂದ ವಸುಷೇಣಮಹಾರಾಜಂಗೆ ದರ್ಶನೋಪಾಯನಮನಿತ್ತುಪೊಡೆವಟ್ಟು ನಿಂದು ದೇವರ ದೇವನ ಸಹೋದರಂ ಸಹಪಾಂಶುಕ್ರೀಡಾನುಬಂಧಸಂಗತಬಂಧು ಮಕರಗ್ರಾಹಪುರವರಾಧೀಶ್ವರಂ ಮಲಯಮಂಡಲೇಶ್ವರಂ ಚಂಡಶಾಸನದೇವಂ ದೇವರಂ ಪಲದೆವಸಮಗಲ್ದಿರ್ದು ನೆನೆದು ನೋಡಲ್ಬರುತ್ತುಮವಸರಮನಱಿಯಲೆನ್ನಟ್ಟಿದನೆಂಬುದುಮತಿಪ್ರೀತಿಯಿಂ ವಿಸ್ತಾರಿತ ವಿಲೋಚನನಾಗಿ ಬೇಗಮೀಗಳೆ ಬರವೇಱಿಂದಾತ್ಮನರ್ಮಸಚಿವಂಬೆರಸಾತನಂ ಕಳಿಪಿ ಬಳಸಿನಿಂದ ಗಂಧ ಸಿಂಧುರಘಟಾಪಟಲಮನಿರ್ಕೆಲಕ್ಕೆದೆಗೆದ ಪಸಾರಿತುರಂಗಬಳನುಮಾಸ್ಥಾನೀಕೃತರಾಜಸುತ ಸಮಾಜನುಮಾಗಿ ನಿಂದಾಗಳ್

---

1 ನೀಡೆ ಬಿಟ್ಟೆಕ್ಕೆ ಕಯ್ಯೊಳ್ ಬಿದುವಂದಾಂಪೊಯ್ದು ಭೈಯೆಂದೊಡೆ ಬೆನಕನ ಭಾವಂ ಬೋಲಾಪೇಚಕಾಧೋ (ಅಇಉ) ಬಿಟ್ಟೆಕ್ಕಿದ ಕಯ್ಯೊಳು ಹೋಮಭೈಯೆಂದೊಡೆ ಬೆನಕನ ಚೋವಂಬೋಲಾಪೇಚಕಾಧಾ (ಎ) 2 ಳಿ (ಎ) 3 ಬೆ (ಎ)
4 ವಿದಿಕ್ಕುಕುಂಜರಾ (ಎ)

ಕ್ಷಿತಿರಂಗಂ ಭಟಕೋಟಿಪಾದತುರಗಶ್ರೇಣೀಖುರವ್ರಾತಸಾ
ತ್ಕೃತಮಾಶಾವಳಿ ಭೂಷಣಾಂಶುಮೃಗನಾಭೀಸಾರಸೌರಭ್ಯಸಾ
ತ್ಕೃತಮಭ್ರಂ ಚಮರೀಜಕೇತುಪಟಲಶ್ವೇತಾತಪತ್ರೌಘಸಾ
ತ್ಕೃತಮೆಂಬಂತಿರೆ ಚಂಡಶಾಸನನೃಪಂ ಬಂದಂ ಮಹೋತ್ಸಾಹದಿಂ ೨೪

ವ॥ ಅಂತು ಬರಲೊಡಮಿರ್ವರುಂ ವಾಹನಂಗಳನಿೞಿದು ರೋಮಾಂಚ ಸಂಚಯಂ ತೊಟ್ಟಂಗಿಗಳ ತಟ್ಟುರ್ಚಿ ಪೆರ್ಚಿದ ಮುಯ್ವಿನೆಡೆ ಪೊಟ್ಟಿನೊಡೆಯೆ ಪರಸ್ಪರಾಲಿಂಗನಂಗೆಯ್ದು ತತ್ಸಮಯಸಮುಚಿತಭಾಷಣಸಂಭಾವನಾನಂತರಂ ವಸುಷೇಣಮಹಾರಾಜಂ ತನ್ನ ಪಟ್ಟದ ಸುದವೇದಂಡಮಂ ಚಂಡಶಾಸನನನೇಱಿಸಿ ಬೇಱೊಂದು ಭದ್ರಗಜಮಂ ತಾನೇಱಿ ಮಹಾವಿಭೂತಿವೆರಸೊಡಗೊಂಡು ಬಂದು

ಪುರಲಕ್ಷ್ಮೀಲಲನಾಪ್ತಶೋಭೆ ಮದನಾರೀಮಂಗಳಾಚಾರಚಾ
ರುರವಂ ಪೌರಜನಾವಲೋಕನವಚಃಕೌತೂಹಲಂ ಪೆರ್ಚೆ ಮಂ
ದಿರಮಂ ಪೊಕ್ಕು ಸಮಸ್ತವಸ್ತುಸುಖಸನ್ಮಾನಂಗಳಿಂದಂ ಮನಂ
ಬೊರೆದಂ ಭೂಪತಿ ಬಿದ್ದು ಪಲ್ಲಟಿಸಿತೆಂಬಂತಾ ಮನೋಮಿತ್ರನಂ ೨೫

ಸರಸಕಾವ್ಯವಿನೋದಗೋಷ್ಠಿಯಿನೊರ್ಮೆ ನಾಟಕನಾಟಿಕಾ
ಪರಿನಟದ್ರಸಭಾವಭಂಗಿಯಿನೊರ್ಮೆ ಗೀತದ ವಾದ್ಯದ
ಚ್ಚರಿಯ ನೃತ್ಯದ ಕೇಳ್ವಿಯಿಮ್ಮುದದೊರ್ಮೆ ಜಟ್ಟಿಗರಪ್ಪ ಮ
ಲ್ಲರ ಪೊಣರ್ಕೆಯಿನೊರ್ಮೆ ಪೊತ್ತುಮನೊರ್ಮೆ ಮೇಷವಿಶೇಷದಿಂ ೨೬

ಒರ್ಮೆ ವಾಹವಿಳಾಸಕಂದುಕಕೇಳಿಯಿಂ ಗಜಯುದ್ಧದಿಂ
ದೊರ್ಮೆ ವಾರುವದಂಕದಗ್ಗದ ಕಾಳೆಗಂಗಳಿನೊರ್ಮೆ ಮ
ತ್ತೊರ್ಮೆ ಚಿತ್ರವಿಚಿತ್ರಕೌತುಕದಿಂದಮಿಂತು ನೆಗಟ್ಚಿದಂ
ಕೂರ್ಮೆಯಿಂ ವಸುಷೇಣಭೂಪತಿ ಚಂಡಶಾಸನಭೂಪನೊಳ್ ೨೭

ವ॥ ಅಂತು ನಿರ್ವಿಕಲ್ಪಮುಂ ನಿರಂತರಿತಮುಮಾದ ಸೌಹಾರ್ದದೊಳಪ್ಪೈಕಸದನದ ಸಹಪಙ್ತಿಭೋಜನದ ಸಹವಿಳಾಸಕ್ರೀಡಿತದ ಸಮಯಂಗಳೊಳಗೆ ವಸುಷೇಣನಂಗನೆ ಸುನಂದಾದೇವಿಯ ಭಾವಂಬಡೆದ ಕುಸುಮಕೋದಂಡನ ವಶೀಕರಣ ಕಾಂಡಂ ಕೀಲ್ಮಸೆಯಿಟ್ಟು ಗಱಗಟ್ಟಿ ತಿರ್ದಿ ಬಣ್ಣವಿಟ್ಟಂತೆ ಕಣ್ಣತವಕಮಂ ಕಡೆಗೋಡಿವರಿಯಿಸುವ ರೂಪಿಂಗನುರೂಪಮಾಗಿ ತಿಳಕಿತಮಾದ ಮದನ ಮತ್ತಗಜದುತ್ತರದೇಸೆಯಂತೆ ಚಿತ್ರಮುಂ ತೊತ್ತಱದುೞದೇಱುಂಜವ್ವನಕ್ಕಳಂಕಾರಮಾಗಿ ಕೈಮಾಡಿ ಮೆಱೆವ ಕಾಮ

ದೇವನ ಕರವಾಳಂತೆ ಕಣ್ಣೊಳ್ ಪೊಳೆದೆರ್ದೆಯೊಳುಳ್ಕಿ ಕೊಳ್ಕುಬೆಳ್ಕುಗೊಳಿಸುವ ವಿಳಾಸದೊಳಂ ವಿಳಾಸಕ್ಕೆ ದಯಂಬಡೆದು ಮನ್ಮಥಚಕ್ರವರ್ತಿಯ ಸಮ್ಮೋಹನಶಕ್ತಿಯಂತೆ ಭಾವಕರ ಬಗೆಯ ಬಯ್ಕೆಯನಗೆಯೆತ್ತಿ ಸೂಱೆಗೊಳ್ವ ಕಳಕಳಾಪ್ರೌಢಿಯೊಳಂ ದುರಾತ್ಮಕನಪ್ಪ ಚಂಡಶಾಸನನ ಕಣ್ಮಲರ್ ಕವಿದು ಕವ್ವರೆಗೊಂಡು ಮಂಡಳಿಸಿ ಬಳಸಿ ಸೋಲಕ್ಕಾಲಂಬನಂ ಪಡೆವೆರ್ದೆಗಾದದವಱಿಲುಂ ತನುವಿಂಗೆ ತಾಪಮುನೊಡನೊಡನೆ ಬಳೆಯುವಳೆಯೆ

ಕೆಳೆಯನ ಪಙ್ಕ್ತಿಭೋಜನದೊಳೊರ್ಮೆ ವಿಳಾಸದೆ ಬಡ್ಡಿಸುತ್ತುಮಿ
ರ್ದಳೆಯಳ ತೋಳ ಮೂಲದ ಪೊಗರ್ಮಣಿಬಂಧದ ಚೆಲ್ವು ಕೋಮಲಾಂ
ಗುಳಿಗಳ ಕೊಂಕು ಕಣ್ಗೆ ಕುಡೆ ಕೌತುಕಮಂ ಭ್ರಮೆಗೊಂಡು ಕಾಮುಕಂ
ವಳಿಗೆಯನೆತ್ತಿ ಬೊಟ್ಟೆಡಲೊಡರ್ಚೆ ಬೞಿಕ್ಕೆ ಪೊಗೞ್ತೆಗಿಕ್ಕಿದಂ ೨೮

ವ|| ಅದಲ್ಲದೆಯುಂ

ನಗೆಗಣ್ಣಲ್ಲಳ ಕೂಟಮಂ ಪಡೆದುವಿಂಪಂ ಶ್ರೋತ್ರ [1]ಮೀಂಟಿ[1] ತ್ತುಮಾ
ತುಗಳಿಂ ನಾಸಿಕೆಗಾಯ್ತುವಳ್ಸುೞಿದ ಸೂೞೋಳ್ ಸೌರಭಂ ಸ್ವಾದು ನಾ
ಲಗೆಗಾಯ್ತಾಕೆಯ ಹಸ್ತಪಲ್ಲವರಸಾಸ್ವಾದ್ಯಂಗಳಿಂ ಸೋಂಕುವಾ
ಸೆಗೆ ಪಕ್ಕಾಗದೆ ನಿಂದ ಪಲ್ಲವಕನಂಗಕ್ಕಾಯ್ತನಂಗಜ್ವರಂ ೨೯

ವ|| ಅಂತು ಕಂತುಸಂತಾಪಕ್ಕೆ ಪಕ್ಕಾಗಿ ಕುಕ್ಕುಳಗುದಿದುರ್ಕದೊಳಗೊಳಗೆ ಬೇವ ಹೃದಯಮಂ। ಪದವಡಿಸಲಾಱದೆ ತನಗೆ ಬೀಡುಂದಾಣಮಾದ ಮಾಡದ ಪೆಱಗಣ ನಂದನವನದ ಮಾಕಂದಭೂರುಹದ ಮಂದಚ್ಛಾಯೆಯೊಳ್ಬೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳ ಪ್ರವಾಳ ತಳ್ಪತಳದೊಳಂ ಸೂಸುವಾಲಿನೀರ್ತುಂತುಱಿಲೊಳಂ ಪೂಸುವ ಚಂದನ ಸ್ಥಾಪಕದೊಳಂ ವಸಂತಸಮಯಾನುರೂಪಛದ್ಮಶಿಶಿರೋಪಚಾರಚಾರು ಚಾತುರತ್ವಂ ಮೆಱೆಯೆ ಮುಮ್ಮುಲಮುಱುಗುತ್ತುಮಿರ್ದ ತನ್ನವಸ್ಥಾಂತರಮನಱಿದು ಮಱೆಯದಂತೆ ಬೆಸಗೊಂಡ ಸುದರ್ಶನನೆಂಬ ಕೆಳೆಯಂಗಿಂತೆಂದಂ

ನುಡಿಯಲ್ಬಾರದು ತೀರದು
ನುಡಿಯದೊಡೆಲೆ ಕೆಳೆಯ ನಿನಗೆ ಬೆಂದ ಮನಂ ಸಂ
ದೆಡೆ[2]ಯ[2]ನ್ನದ ಪೇೞ್ದಪೆ ನೀ
ಕಡುನಂಟನ ಸತಿಯ ರೂಪು ಸೋಲಿಸಿತೆನ್ನಂ ೩೦

---

1 ಮಿಂಬಿ (ಅ) ಮಿಂದಿ (ಇಉ) 2 ಯೆ (ಅಉ)

ಭ್ರಮೆ ಪತ್ತಿತ್ತು ಮನಕ್ಕೆ ಕಣ್ತೆರಿಪಿ ಬಿಟ್ಟಂತೇನುಮಂ ಕಾಣವಂ
ಗಮನಂಗೋದ್ಭವವಹ್ನಿ ಸುಟ್ಟಪುದು ಕಾಣೆಂ ಪ್ರಾಣಸಂಧಾರಣೋ
ದ್ಯಮಮಂ ಪೇಟ್ಸಿಖ ಬಾಟ್ಸುಪಾಯಮೆನಗಿನ್ನೆಂತೊರ್ಮೆ ಕಾರುಣ್ಯದಿಂ
ರಮಣೀಲೋಚನಚುಂಬನಂ ಕಳೆಗುಮೇ ನಟ್ಟಿರ್ದ ಹೃಚ್ಛಲ್ಯಮಂ ೩೧

ಆಗಳುಮಾಂ ತಳೋದರಿಗೆ ಮೇಖಲೆಯಾಗಿ ನಿತಂಬದೊಳ್ ಕುಚಾ
ಭಾಗದ ಮೇಗೆ ಹಾರಲತೆಯಾಗಿ ರದಚ್ಛದಪಲ್ಲವಂಗಳೊಳ್
ರಾಗವಿಶೇಷಮಾಗಿ ಪೊಳೆವೊಳ್ನುಡೆಯೊಳ್ನಿಱಿಯಾಗಿ ಬಂದು ಸಂ
ಭೋಗಿಪ ಪುಣ್ಯಮಿಲ್ಲೆನಗಮಾದೊಡೆ ಸಲ್ಲದೆ ಗಂಡನಿರ್ದೊಡೇಂ ೩೨

ವ॥ ಎಂದು ತನ್ನ ಹೃದಯಕವಾಟಮಂ ತೆಟ್ಟಂದೆಱಿದತ್ತಳಗಮಾದುತ್ತುಂಡ ವೇಟಮಂ ಬಯಲೊಳಿಕ್ಕಿ ಬಾಯಳಿದ ನಿಜಪತಿಯ ನುಡಿಗೆ ಸುದರ್ಶನನೆಂದಂ ಮೇರೆ ಗಱಿದ ಬಱಿಕಾರ ಸ್ವೈರಣೆಯುಮೊರೆವೋಗದಿರವು ; ಪರಿವ ಮನಕ್ಕೆ ಸಗ್ಗಮಿಲ್ಲಂ ; ನೋಡುವ ಕಣ್ಗಳ್ಗೆಡೆಗಟ್ಟಿಲ್ಲಮುದಲ್ಲದೆಯುಂ

ಒಡೆಯನ ಕಾಪು ಕಟ್ಟಣಕಮೆಂದೊಡೆ ಬಂಧುಗಳಾಪ್ತರಾಗ[1]ದೆಂ[1]
ದೊಡೆ[2]ಯನಿಮಿತ್ತಮಿಾಯಳವಳೆಂದೊಡ[2]ಸಾಧ್ಯಮಿದೆಂದೊಡಲ್ಲಳೆಂ
ದೊಡೆ ಮೊಱಿಯಾಗದೆಂದೊಡೆ ಪರಾಂಗನೆಯೆಂದೊಡೆ ಸಾಮ್ಯಮಲ್ಲಮೆಂ
ದೊಡೆ ತಲೆವೋಗಿಯುಂ ಬಸಿದು ಬೀಟಿದೆ ಸ್ವೈರಿಸರಲ್ತೆ ಕಾಮುಕರ್ ೩೩

ವ॥ ಆದೊಡೇನಾದುದಾ ನಿತಂಬಿನಿಯೊಳ್ ನಮ್ಮ ಮನೋರಥಸಿದ್ಧಿಗವಕಾಶ ಮುಂಟದೆಂತೆಂಬೆಯಪ್ಪೊಡೆ

ನಯದಿಂ ಕೋಕಿಳನಾದೆ ನಿಮ್ಮರಸರಿಂತೇಕಾರಣಂ ಬಂದರಿ
ಲ್ಲಿಯ ಕಾರ್ಯಾಂತರಮೇಂ ಪ್ರಯಾಣದಿನಮಿನ್ನೆಂದೆಂತು ತಾಂ ಪೆತ್ತ ತಂ
ದೆಯ ಮಿತ್ರಂಗೊಡವುಟ್ಟಿದಣ್ಣನ ಸಹಾಯಂಗಾಡುವಂತೀಗಳೆ
ನ್ನಯ ಕೂಡಾಡಿದಳಿಂತಿದೇನಳಿಪೊ ಮೇಣ್ ನಿರ್ಮೋಹಮೋ ಭಾವಿಸಾ ೩೪

ವ॥ ಎಂಬುದುಮರಸನಾ ಕೃತ್ಯೋಪಚಾರಮನೊಲವೆಂತೆಂತು ಕೈಕೊಳಲ್ಬಂದ ಪುದು

1 ರೆಂ (ಅ) 2 ಮನಮಿತ್ತುಮಿಾಯ್ಯರಳವೆಂ (ಅ) ಮನಮಿತ್ತುಮಿಾಯ್ಯ ಳವಳೆಂ (ಇಉ) ಯನಿಮಿತ್ತಮಿಾಯಳವಳೆಂ (ಸೂ. ಸು)

ಆ ಮದಿರಾಕ್ಷಿ ತನ್ನಿನಿಯನಿರ್ದವೊಲೆನ್ನೊಡನಾಸೆಗೆಯ್ಯಳಾ
ಕೋಮಳಗಾತ್ರಮಂ ಸವಿದ ಕಣ್ಮಲರ್ಗೆನ್ನಯ ಗಂಡಗಾಡಿ ಶೋ
ಭಾಮಹಮಾಗದೆಂದೊಡೆ ಸಖಂ ನೃಪ ನೀಂ ಬರೆ ಮಾಣ್ಬ ಜೋಡೆಯರ್
ಕಾಮನ ತೋಳೊಳಿರ್ದ ರತಿ ಶಂಭುಕುಮಾರನುಮಂಬ[1]ರುಂಟಳೇ[1] ೩೫

ವ॥ ಅದಲ್ಲದೆಯುಮಿಂದು ದೇವ ನೀನುಮಾತನುಮಾರೋಗಿಸಿ ಕೈಘಟ್ಟಿಗೊಳುತುಮೇಕಮರಾಳತೂಳತಳ್ಪಾಸನದೊಳ್ ಪರಸ್ಪರಂ ಮುಖಸಂಭಾಷಣಾವಿಶೇಷದಿನಿರ್ದಲ್ಲಿ ನಿನ್ನ ಪೆಱಗೆ ಕುಳ್ಳಿರ್ದೆನ್ನ ಕಣ್ಗೆ ತೆಱಪಾದುದಾ ಸರೋಜನಯನೆ ಭೋಜನಶಾಲಾಪವರಕಮಣಿಭಿತ್ತಿರಚಿತಶೀತಾಂಶುಕಾಂತವಾತಾಯನಾಂತರ್ವೇದಿಪ್ರಸಾರಿತಮಸೂರಿಕಾಗ್ರದೊಳಪಾಚಿತನ್ನಂಸಮೀಚೀನಪವನಪರಿಮಾಯಮಾನನಿಟಿಲಾವಲಗ್ನಕುಟಿಲಕುಂತಳಮನೊಯ್ಯನೊಯ್ಯನೋಸರಿಸುವ ಕಬರಿಧಾರಿಣಿಘನಸ್ತನಮಂ ಮಲಂಗಿ ಸಹಚರೀನಿಚಯದೊಡನೆ ಬಾಹ್ಯೋಪಚಾರಚಾರುವಚನದರಹಸನಕರತಳತಾಡನಾದಿ ವಿನೋದವಿಳಾಸಾಭಿನಯದೊಳಿರ್ದು

ಮನಮಂ ಮುಂದಿಟ್ಟು ಮಾತಂ ಮನದೆಗೊಳಿಸಿ ಕಂಡೂತಿಯಾದಂತಿರಾಲಿಂ
ಗನದಿಂಪಂ ಚುಂಬನಾಸ್ವಾದನಸುಖಮುಮನಂತಪ್ರವಿಷ್ಟಾಂಗಸಂಪಾ
ದನಮಂ ಮೇಲ್ವಾಯ್ದು ಮಾಡಲ್ತವಕಿಪ ನವಭಾವಾತಿರೇಕಂಗಳಿಂ ಕಾ
ಮಿನಿ ನಿನ್ನಂ ನೋಡಿದಳ್ಗಂಡನ ನೆವದಿನದಂ ಕಂಡರಿಲ್ಲಕ್ಕುಮಾಗಳ್ ೩೬

ವ॥ ಎಂದಾಕೆ ತನ್ನ ವಲ್ಲಭಂಗಭಿನವಪುರುಷಸಂಗೋಷ್ಠಿಸಮನಿಸಿ ನಿಜಾತ್ಮವಲ್ಲಭನ ಸುಖಾನುಭವಕ್ರೀಡೆಗೆಡೆವಡೆಯದೆ ಸಿಡಿಮಿಡಿಗೊಳುತ್ತಿರ್ದ ಭಾವಮುಮಾವಿನ[2]ಯ[2] ಮದಾಳಿಯಂ ಮತ್ತಿಗೆ ಪತ್ತಿಸುವಂತೆ ನುಡಿದು ಮನದ ಪಿಶಾಚಕ್ಕೆ ವಚನರಚನಾಧೂಪಮಂ ತೋಱಿ ವಿರಹವಿಕಾರಮಂ ಕೆಳರ್ಚಿ ನಿನ್ನೊಳಾಕೆಯಂ ಕೂಡುವುಪಾಯಮನೀಗಳೆ ಮಾಡಿದಪೆನೆಂದು ಪೋಗಿ ಬಟುಕಮಾಧೂರ್ತನಾಡುತ್ತುಮಿರ್ದನಿತ್ತ ವಿರಹಾರ್ಘಂ ಬಾಡುತ್ತುಮಿರ್ದನಲ್ಲದೆಯುಂ

ಒರ್ಮೆ ಸಭಾವಿಭೂಷಣಮಹಾಕವಿಲೀಲೆಗಳಿಂದೆ ತಮ್ಮುತೀ
ರ್ವರ್ಮುದದಿಂದಮಿರ್ದರಿರೆ ಕತ್ತರಿವೀಲಿಯ ಬೇಂಟೆಯಂ ಮರು
ತ್ಕಾರ್ಮುಕಮಂಬುದಂ ತಿಳಿಪದಂಗಿಗೆಯಕ್ಕನೆ ಕೋಲ ಮಿಂಚು ತಾಂ
ಕಾರ್ಮೊಗಮೆಂಬಿನಂ ಸತಿಗೆ ದೀವರ ಬೇಂಟೆಯ ಮುಖ್ಯನಾಯಕಂ ೩೭

1 ರೊಳುಂಟೀ (ಇಉ) 2 ನ (ಎ)

ವ॥ ಬಂದು ಕೆಯ್ಯೊಳಿರ್ದಲಗಿನ ಕೋಲುಮಂ ಕಟ್ಟಿದಲಗುಮಂ ದೂರಾಂತರದೊಳ್ ಕೀಳ್ವಾಳನ ಕೆಯ್ಗೆ ನೀಡುತ್ತುಮೆಯ್ದೆವಂದು ಪೊಡೆವಟ್ಟು ನಿಂದು

ಕತ್ತುರಿಮಿಗಮಂ ಪಂದಿಯ
ಮುತ್ತಂ ಪೊಂಬುಲಿಯ ಪೂವಲನಾನೆಯ ಕೊಂಬಂ
ಕುತ್ತೞಿಸದಡಸಿ ಪಿಡಿದುಗಿ
ದೆತ್ತಿದುವಂ ಪತಿಗೆ ಕಾಣ್ಕೆಗೊಟ್ಟಂತೆಂದಂ ೩೮

ಪುಲ್ಮೞಿಂದುದು ಬೆಳಸುಡುಗಿ ಬ
ಯಲ್ಮಸಗಿದುದಡವಿ ಕರಿಕುನರಿದುದು ಮೇಪಿಂ
ಪುಲ್ಮಿಗಮುಂ ಬೆಳ್ಮಿಗಮುಂ
ಪಲ್ಮಿಗಮುಂ ತಣಿದುವೆಯ್ದೆ ಕಾಪಿನ ಪೊಲದೊಳ್ ೩೯

ವ॥ ದೇವ ಮತ್ತಮಾಂಸಮದುೞಿಯೆ ಪಡಹದ ಪಿಳುಕುೞಿಯೆ ಕೊಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೆಯ್ವೆರ್ಚಿಸೊಡವಿಂಗೆ ಸೋಲ್ತು ಕೂಡದೆ ಕವಲ್ದು ಮೇದು ತಣಿದು ಕೊಟಕಿಟ್ಟಾಡುವ ಮೃಗಂಗಳೊಳಿಂದು ಪತ್ತಿಸಿದ ಹರಿಣನ ಗೋರಿಯ ಹರ್ಷದ ಹರವಸದ ಭಾವ ಪ್ರಪಂಚಮಂ ಭಾವಕರ ಬಲ್ಲಹನೆ ಬಂದು ನೋಡಲ್ವೇಱ್ಕುಮೆನೆ ವಸುಷೇಣ ವಸುಮತೀಪತಿ ಸಖನ ಮುಖಮಂ ನೋಡಲೊಡಮಾತಂ ನೋಡಲಕ್ಕುಂ ಬಿಜಯಂಗೆಯ್ಯಿಮೆಂದಲ್ಲಿಂ ತಳರ್ದು

ಪರಿಮಿತವಾಜಿವಾರಣಪದಾತಿವರೂಥಕದಂಬಕಾಮಿನೀ
ಪರಿಚಿತ ರಾಜಪುತ್ರನಿಚಯಂ ಧರಣೀಪತಿ ಚಂಡಶಾಸನಂ
ಬೆರಸು ವನಾಂತರದೊಳ್ತೆರೆಯ ತೋಪಿನ ಸೋಹಿನ ನೀರಬೆಂಟೆಯು
ರ್ವರೆಗಳನೀಕ್ಷಿಸುತ್ತೆ ಬರೆ ಮುಂತಣ [1]ಭೂ[1]ತವನಾಂತರಾಳದೊಳ್ ೪೦

ಬಿರಿದೆರ್ದೆ ಬಿಟ್ಟ ಬಾಯಲರ್ದ ನಾಸಿಕೆ ಪತ್ತಿದ ಗೋಣು ಸುತ್ತಿ ಕ
ವ್ವರಿಸುವ ದಿಟ್ಟಿ ಕೆತ್ತುವೊಡಲೆತ್ತಿದ ಕಂಠಮೆಟಲ್ವ ಕರ್ಣಮು
ಬ್ಬರಿಸುವ ಮೆಯ್ನವಿರ್ಪನಿವ ಮುಂಬದನೊಪ್ಪಿರೆ ದೀವದೊಳ್ಮರ
ಲ್ದೆರಲೆಯ ಭಾವಮುಚ್ಚರಿಯನಚ್ಚಿಗೊಡರ್ಚಿದುದಾ ನೃಪೇಂದ್ರನಾ ೪೧

ವ॥ ಅದಂ ಕಂಡು ಚಂಡಶಾಸನನಂತರ್ಗತದೊಳಿಂತೆಂದಂ

---

1 ಜೂ (ಅ)

ಹರಿಣೀಲೋಚನೆ ದೀವದಾ ಹರಿಣನೇಂ ಪೆರ್ಗಾಡಿದೀ ಬೀಡು ಬಿ
ಣ್ಬರಿಗಳ್ಕೀಣ್ಬರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮ
ದ್ವಿರಹಾವಸ್ಥಿತಿ ಗೋರಿಗೋರಗೆಯೆನಿಪ್ಪಂತಾದುದೆಂತಾಗಿಯುಂ
ನೆರೆಯಲ್ತೀರದು ಗೋರಿ ಸಾಯದೆನವೇಡೀ ನೋವೆ ಸಾವಲ್ಲವೇ ೪೨

ವ॥ ಆ ವಿನೋದಮಂ ನೀಡುಂ ನೋಡಿ ಪೊಗೞ್ದು ಪೋಪುದುಮರಸನರಸಿವೆರಸು ಬೋನಮುನೀ ನಂದನವನಕ್ಕೆ ಬರವೇೞ್ದಂದು ಸೂೞಾಯ್ತರನರಮನೆಗೆ ಕೞಿಪಿ.... ಸುವ ಪೊಳೆವ ಪುಲ್ಲೆಗಳ ಬೞಿವಿಡಿದು ಕಾಪುಗಾಡಿನೊಳ್ ಸೋಹಿನ ಬೇಂಟೆಯ ಬಿನದದಿನೀರ್ವರ ರಥಮುಂ ಬೇಱಿರ್ವೇಱಾದಲ್ಲಿ ಚಂಡಶಾಸನಂ ವಸುಷೇಣನರಸಿ ಬರ್ಪ ಬಟ್ಟೆಯತ್ತಲೆ ಸಾರ್ದುಕೊಂಡಿರ್ಪಿನಂ ಪರಿಮಿತಾಂಗರಕ್ಷಕಪರೀತೆಯುಂ ಪರಿಧಾವತ್ಕತಿಪಯಚೇಟಿಕಾಪುರೋಭಾಗೆಯುಂ ದೋಲಾದಂಡಿಕೋಭಯಭಾಗಸಂಭೂಷಿತಸಹಚರೀಯುಗಳೆಯುಮಾಗಿ ನಿಜವಲ್ಲಭನಟ್ಟಿದ ಬೞಿಗೆ ಬರುತ್ತುಮಿರ್ದ ಸುನಂದಾದೇವಿಯಂ ಕಂಡು

ಕಡೆಗಣ್ಗಳ್ಪರಿದೆಯ್ದಿ ಮತ್ತೆ ಮನಮುಂಗೋಪಾಂಗಸಂಗಕ್ಕೆ ದಾ
ೞಿಡೆ ಕಾಯ್ದಳ್ಕೆರ್ದೆಗೂಡುವಾಯೆ ಪಿರಿದೊಂದೌತ್ಕಂಠ್ಯದಿಂ ಕಂಠದೊ
ಳ್ಕಿಡುಕುಣ್ಮುತ್ತಿರೆ ಮೇಲೆವಾಯ್ದು ಭರದಿಂದಂ ನಲ್ಲಳಾಂದೋಳದಿಂ
ಕಡುಕೆಯ್ಯಂ ತೆಗೆದಿಟ್ಟುಕೊಂಡು ರಥದೊಳ್ಬಂದಂ ಮನೋವೇಗದಿಂ ೪೩

ವ॥ ಎಂದು ಪೇೞ್ವ ಕಥಾಂತರದೊಳಾತಂಗಾ ತಳೋದರಿಯೊಡಂಬಟ್ಟಂತಳಿಗೆತ್ತು ಚಿತ್ರಲತೆಯಿಂತೆಂದಳ್

ಸುದತಿಯರೆಂಬ ಪಾಪಿಗಳು ಮಾಡದುದೇನೆನೆ ಮತ್ತೆ ತಂಗಿಯಂ
ಮದನಪತಾಕೆಯೆಂದಳವಳಿಂದೆ ಪತಿವ್ರತೆಯಿಲ್ಲ ನೋಡ ಲೋ
ಕದೊಳದನಾಡದಿರ್ಕರುಳ ಕತ್ತರಿ ನಂಟರ ಮಾರಿ ತುತ್ತುಮಿಂ
ಚಿಡೊದೊಡನುಂಡು ಮತ್ತೆ ತೊಡೆ ಮಿಂಚಿದೊಡಾ ಖಳನಿಂತು ಮಾಡಿದಂ ೪೪

ವ॥ ಅಂತು ಪಿಡಿದೊಯ್ವಾಗಳುರಗಂ ಪಿಡಿದಂತೆ ಬೆದಱಿ ಪಾವು ಪಿಡಿದಂತಿರೊದಱಿ ಕಡುಜರ ಪತ್ತಿದಂತು ಕಳವಳಿಸಿ ಠಕ್ಕುಪತ್ತಿದಂತೆ ಮತಿಗೆಟ್ಟು ಸಿಡಿಲ್ ಪೊಡೆದಂತೆ ಹಮ್ಮ್ರದಂಬೋಗಿ ಸುನಂದೆಯಾಗಿಯು ವಸುನಂದೆ ಕಿಱುದಾಸಂ ಬೇಗದಿಂ ಬೞಿಕ್ಕೆ ಕಾಮಕಾಂಡಖಂಡಿತಹೃದಯಂ ಚಂಡಶಾಸನಂ ವಿಶ್ವಾಸಘಾತಕಂ ಕಾತರತೆಯಿಂ ತನ್ನಂ ಪಿಡಿದುದನಱಿದು

ಇನನಂ ವಂಚಿಸಿ ಚಂಡಶಾಸನನಿವಂ ಕಳ್ದೊಯ್ದಪಂ ನಾಥನಂ
ಗನೆಯಿಂದೆನ್ನ ಸುನಂದೆಯಂ ಸುಭಟರಣ್ಮಿಂ ವೀರರಡ್ಡೈಸಿಮೆ
ನ್ನಿನೆಯಂಗೆಯ್ದಿಸಿಮೂರನಾಡಜನಮಿಾ ಪೆಣ್ಬುಯ್ಯಲಂ ಹಾ ಸುಷೇ
ಣನೃಪ ಹಾ ನೃಪ ನೀಱನೆಂದಬಲೆ ಬಾಯ್ವಿಟ್ಟೆಟ್ಟು ಪುಯ್ಯಲ್ಚಿದಳ್ ೪೫

ಪರವೆಣ್ಗಾಟಿಸಿ ಕಳ್ದ ಕಾತರನನಾರುಂ ಕಾಣರಾರುಂ ಕನ
ಲ್ದರಿದಿಕ್ಕರ್ಧರೆ ನುಂಗದೇಂ ನೊಣೆಯರೀ ದಿಗ್ದೇವಿಯರ್ತಿನ್ನರೇ
ಗಿರಿಗಳ್ಬೆಂದೆನನಾಥೆಯಾದೆನೆನಗಿನ್ನಾರಾಸೆಯಾರ್ಕಾವರಾ
ರ್ಶರಣೆಂದಾ ಕಳಕಂಠನಾದೆ ಬಸಿಱಂ ಬಾರೇಟ್ಟುವಿನಂ ವೋದಿದಳ್ ೪೬

ಮುನಿಸುಂಟಾದೊಡೆ ಮುಟ್ಟೆ ಮೂದಲಿಸಿ ಬಲ್ಪಿಂ ನಿನ್ನ ಬಾಳಾತನಾ
ತನ ಬಾಳ್ನಿನ್ನ ಕಪಾಲದೊಳ್ಮುಱಿದು ಮುಂತೆಟ್ಟಿರ್ಪುದಿನೊಪ್ಪುವಾ
ಣ್ತನಮುಂ ಗಂಡರ ಪಿಂದೆ ಕಳ್ವದರಿದೇ ಸ್ತ್ರೀಬಾಲೆಯಂ ಬೂತೆ ಪಾ
ಟ್ಟನೆಯೊಳ್ ನಾಯ್ ಘೃತಭಾಂಡಮಂ ತೆಗೆವವೊಲ್ಕಳ್ದೊಯ್ವುದಾಳ್ವಾಟಿಯೇ ೪೭

ಮನಮಿತ್ತು ಮಾತನಾಡಿದ
ಳನುವಿಸಿದಪಳೊಲ್ದಳೆಂದೊಡಂ ಕೇಳ ಪರಾಂ
ಗನೆಗೆ....ವಯರ್ಗಂಡ
ರ್ಮನವಱಿಯದೆ ಎಳೆಯ ಮನಕೆ ಸವಱುವೆ ಪೊಲೆಯಾ ೪೮

ವ || ಎಂದನೇಕಪ್ರಕಾರಪ್ರಳಾಪಾಕ್ರಂದನಂ ಸ್ಯಂದನವೇಗದಿಂ ದೂರಂಸಾರಪ್ಪ ಸಾರಂ ದೂರಮಾಗಿ ಪೋತಪ್ಪಾಗಳವಂ ಸುರಮ್ಯವಿಷಯದ ಕಡೆಯ ಕಾಪಿಂಗೆ ವಸುಷೇಣ ನಿರಿಸಿದ ಪೆಸರ ಸಾವಂತಂ ಸಿಂಹಚೂಡಂ ತನ್ನ ಪೊಟಿಲ ಪೊಟಿವೊಟಿಲ ನಂದನೋ ಪಾಂತದ ಗರುಡಿಯೊಳಗೆ ಪಲಕೆಲಂಬರ್ ವಲಗೆವಿನ್ನಣಂಗಳೊಡನೆ ಕಾಮನ ಪರ್ವತ ದಂತೆ ಮಾರಚಿತ್ರಭಿತ್ತಿಯೊಳ್ ಪಿಡಿಯುತ್ತುಮಿರ್ದ ಕಡುಗಲಿ ಕೇಳ್ದು ನರತುರಗಬಳದ ನೆರಮನೊಲ್ಲದೆ ಸೆರಗಿನೊಳಲ್ಲದೆ ಬಿರಗಿನನೊಳಸಲ್ಲದೆ ಕೆಯ್ಯ ಪಲಗೆಯೊಳಂ ಕಟ್ಟಿದ ಕಠಾರ ದೊಳಂ ಪಿಡಿದ ಕೂರಸಿಯೊಳಮೆಯ್ದಿಸಿ ಪರಿದು ಹರಿಣಿಯಂ ಪಿಡಿದುಯ್ವ ತರಕ್ಷುವಿನಂತೆ ತರುಣಿಯಂ ಪಿಡಿದುಯ್ವ ಚಂಡಶಾಸನಂ ದೂರದೊಳ್ಕಂಡು ಗಜಱಿ ಘರ್ಜಿಸಿ

ಇದಿರಾಗಿತ್ತಿತ್ತಣ್ಮಿಣ್ಮಿಟಿಯಿಟಿ ರಥಮಂ ಕ್ಯೆದುಗೊಳ್ಕೈದುಗೊಳ್ಪೋ
ಗದಿರೆನ್ನಂ ಕಂಡು ಬೆನ್ನಂ ಕುಡುವರೆ ಸುಭಟರ್ಸಿಂಹಚೂಡಂಗೆ ಮಾಱಿಱೊ
ಡ್ಡಿದ ವೀರರ್ಮತ್ತೆ ಜೀವಂಬೆರಸುಟಿದವರಿಲ್ಲೆಂದು ಮುಟ್ಟಿರ್ದ ಲೇಸ
ಕ್ಕಿದೆ ಮೇಲ್ಬಿರ್ದೆನ್ನ ಬಾಹಾಪರಿಘದ ಬಲೆಯೊಳ್ಸತ್ತೆಯಿನ್ನೆತ್ತವೋಪೈ ೪೯

ವ॥ ಎಂದು ಮುಟ್ಟೆ ಮೂದಲಿಸಿ ಕಟ್ಟೆದಿರ್ಗೆವಂದು ಮೆಟ್ಟೆ ತಱುಂಬಿದ ಸಿಂಹಚೂಡನಂ ಸೂತದ್ವಿತಯನಾಗಿ ಪೋಗುತ್ತುಂ ಕಂಡು ತೇರಂ ನಿಲಿಸಿ ಸಾರಥಿಯಂ ವಾರಿಜವದನೆಗೆ ಕಾಪುವೇಟ್ಟು ಕಿಱ್ತು ಬಾಳೊಳಮತ್ತಪರದೊಳಮವನೀತಳಕ್ಕೆ ಲಂಘಿಸಿ ಚಂಡಶಾಸನನಿಂತೆಂದಂ

ವಾನರನೇಂ ಸೆಳೆವುದೆ ಪೇ
ರಾನೆಯ ಕೈಯ್ವಿಡಿದ ಕರ್ಬನಾಂ ಪಿಡಿದವಳಂ
ನೀನೆ ಬಿಡಿಸುವೆಯೆ ಸಾಯದೆ
ಪೋ ನಿನ್ನಂ ನಿನ್ನ ಪತಿಗೆ ಪುಯ್ಯಲ್ಗಳದೇಂ ೫೦

ವ॥ ಎಂದ ನುಡಿಗೆ ಕಳಕಳಿಸಿ ನಕ್ಕು ಸಿಂಹಚೂಡನಿಂತೆಂದಂ

ವಸುಷೇಣ ನೃಪನ ಮುಂದ
ಣ್ಗೆ ಸುನಂದಾದೇವಿವೆರಸು ನಿನ್ನಯ ನೆತ್ತ
ರ್ಜಸಿವ ತಲೆ ಕಾಣ್ಕೆಯಾಗಿರೆ
ಬಿಸುಟಲ್ಲದೆ ಸಿಂಹಚೂಡನೇಂ ಪೋದಪನೇ ೫೧

ವ॥ ಪಾದರದೊಳ್ಪುಟ್ಟೆ ಕಳವಿನೊಳ್ಸತ್ತತಿಚಾರದರಸುತನಂ ವ್ಯಭಿಚಾರದೊಳ್ನೀಗಿದೆಯದೆಂತೆನೆ

ರಸೆ ಪೊಱುವುದೆ ಪರವೆಣ್ಗಾ
ಟಿಸಿದೊಡೆ ಕಳ್ದೊಯ್ದು ಕೂಡಿ ತಂದ್ಯೆ ಪುಲ್ಮಾ
ನಸನಾದ ಚಂಡಶಾಸನ
ವೆಸರಂ ಚಂಡಾಲ ನೀರೊಳಿಂತದುರ್ವರೇ ೫೨

ವ॥ ಎನಲೊಡಂ ಚಂಡಶಾಸನನಿಂತೆಂದಂ

ನೀನೆನಗೆ ಬುದ್ಧಿವೇಱಲ
ದೇನಪ್ಪ್ರೆ ಬಾಳ ಬಾಯೆ ಪಲ್ಗಡಿಸಿಕೊಳ
ಲ್ನೀನಾರ್ದೆ ಬರ್ದುಂಕಿದ ಬಱಿ
ಕೇನಾದೊಡಮೆನ್ನ ಮುನ್ನಮಾಯತವಾಗಾ ೫೩

ವ॥ ಎಂದೊರ್ವರೊರ್ವರಂ ಮೂದಲಿಸಿ ನುಡಿಯುತ್ತುಮಿರ್ವರುಂ ಭೂಮಾನದಳವಿಯೊಳ್ ಪರಿಯಲನುಗೆಯ್ವಾಗಳ್

ಬೆಳೆದಡವಿಯೆ ಕಳನಾದುದು
ನಳಿನದಳೇಕ್ಷಣೆಯ ಚಿತ್ರಮುರಸಾಯ್ತಾ
ಶಾಳಲನೆಯರೆ ನೋಟ್ಟಿರಾದರ್
ಬಳಯುತರರಸಂಕರವಾದರಂತಾಕ್ಷಣದೊಳ್ ೫೪

ವ॥ ಆಗಳೊಡವಂದು ನೋಟ್ಟಿ ನೋಟಕರ್ ತಮ್ಮೊಳಿಂತೆಂದರ್

ಇಳೆಯೊಳಗೆಲ್ಲ ಸಿಂಹಚೂಡನೆ
ಫಳಕಾರಂ ಚಂಡಶಾಸನಂ ಬಗೆವೊಡೆ ಭೂ
ತಳದೊಳ್ಳೃತಘ್ನನಿವರತಿ
ಬಳರಿರ್ವರ ಸೋಲಗೆಲ್ಲವರಸನ ಪುಣ್ಯಂ ೫೫

ವ॥ ಇತ್ತ ಸುನಂದೆ ನಿಜಾಂತರ್ಗತದೊಳಿಂತೆಂದಳ್

ತಲೆಗಾಯಿಮಾ ಭಟನಂ ಪೊಣರ್ಚಿ ಪೊಡೆದಿಕ್ಕೀ ದ್ರೋಹನಂ ನೇಸಱೆ
ನೆಲನೇ ವ್ಯೋಮಮೆ ವಾಯುದೇವ ಸೆಱೆಯಿಂದಂ ತಪ್ಪಿದಂದೆನ್ನನಾಂ
ಬಲಿಗೆಯ್ವೆಂ ನಿಮಗೆಂದು ವ್ಯೆಕೊರಗಿ ಸುಯ್ಕ್ಯೈಗಣ್ಮಿ ಕಣ್ಗೆಟ್ಟು ಕೋ
ಟಲಿಗೊಂಡಳ್ಪೆರ್ದೆ ಡಕ್ಕೆವಾಯ್ದು ಸತಿ ನಿಂದೌತ್ಸುಕ್ಯಮಂ ತಾಳ್ದಿದಳ್ ೫೬

ವ॥ ತತ್ಸಮಯದೊಳ್ ಸಿಂಹಚೂಡಂ

ಅಂಜದೆ ನಿಂದವಧರಿಸೆಲೆ
ಕಂಜದಳಾಯತವಿಲೋಲಲೋಚನೆ ಪಗೆಯಂ
ಮುಂ ಜವನೆಡೆಗೊಪ್ಪಿಸಿ ಬೞಿ
ಯಂ ಜನಪತಿಯೆಡೆಗೆ ನಿನ್ನನೊಯ್ದೊಪ್ಪಿಸುವೆಂ ೫೭

ವ॥ ಎಂದವಷ್ಟಂಭಮೆಸೆಯೆ

ತಾಳಲಯಂಗಳೊಳ್ಕುಣಿದು ಲಂಘಿಸಿ ಕೊರಿಸಿ ಮಿಂಚಿನಂತೆ ಸಂ
ಚಾಳಿಸಿ ಭಾವಭಂಜನೆಗೆ ಭಂಜಿಸಿ ರೂಪಳವಟ್ಟ ರೇಖೆಯು
ಲ್ಲಾಳಿಸೆ ನಿಂದು ಕೀಲಿಸಿದೊಡುರ್ವರೆಯೋರ್ಗುಡಿಸಿತ್ತು ಸಾಗರಂ
ವೇಳೆಯಿನುರ್ಕಿ ಸೂಸಿದುದು ತೊಟ್ಟು ಕೞಲ್ದವು ತಾರಕಾಳಿಗಳ್ ೫೮

ವಹಿಲತನಂ ಪದಗತಿಯಿಂ
ಬಹುವಿಕೆ ಕ್ಯೆಮೂಟ್ಟಿನವಣಿಯಿಂ ಸುಚರಮಿವಂ
ಬಹುಭಂಜನೆಯೊಡ್ಡಣದಿಂ
ದಹಮಿಹಮಿಕೆ ಮಿಕ್ಕುಮೆಱೆದುವಿರ್ವರ ಮೆಯ್ಯೊಳ್ ೫೯

ಪಱಿಮುಬ್ಬಾಱಿಸಿ ಪೊಯ್ದೊಡಾಂತ ಕರವಾಳ್ಪಾಳೊಳ್ಪಗಂಡೆಟ್ಟಿಗ
ಗ್ಸಱಿಲೆಂದೆತ್ತುವ ಸುತ್ತುನತ್ತಳಿಪು ಸೂೞೊಳ್ಸೀಳ್ದು ಪೊೞ್ಪಿರ್ದುಮಿ
ರ್ವರ ಕೆಯ್ಯುಂ ಬಱಿಮುಷ್ಟಿಮೋಹರದೆ ತಳ್ತಿಚ್ಚಾಡಿಸುತ್ತಿರ್ದುವಂ
ತಿರೆ ಕೀಳ್ವಾಳವರಿರ್ವರುಂ ನಿಲಿಸಿ ಕೊಟ್ಟರ್ಮತ್ತೆ ಕೂರ್ವಾಳ್ಗಳಂ ೬೦

ಭೂರವಮುಂ ಭಟಂ ನಿಮಿರ್ದು ಕುತ್ತಿದೊಡುರ್ಚಿದ ಚಂಡಶಾಸನಂ
ಚಾರಣವಾಸೆಯಿಂ ನುಸುಳ್ದು ಮುಜ್ಜುಟವೊಳ್ಮಗುಳ್ದಿಕ್ಕಿವಟ್ಟಿ ಸೈ
ಪಾಱಿಸೆ ಕಂಡ ಭೂರಣವೆ ರೂವಿಸಿದಂ ಪೊಯೆ ಕಾಳವಟ್ಟದಿಂ
ಪೋಱಗದಿಂವೆ ಪೊಯ್ದನೆರಡುಂ ಸಱಿವೋದುವು ಲಾಗುಬೇಗಮೊಳ್ ೬೧

ವ॥ ಅನಂತರಂ

ಬಲಮೊಳ್ಪತ್ತಿದ ಮುಂಡೆ ಚಮ್ಮಟಿಗೆ ಕ್ಕೈವೀಣಂ ಬೆಡಂಗಾಗೆ ವ್ಯೈ
ಗಲಿ ಪೊಕ್ಕೈತ್ತಿದೊಡೊಡ್ಡಿದೊಡ್ಡಣದ ಕ್ಕೈಗೊಂಬಾಳದಿಂ ಪೋದ ಮೆ
ಯ್ವಲಗಂಬೆತ್ತಿರೆ ಬಾಹು ಪೋಱಗವೆ ಪೊಯ್ದಂ ಭೂಪನಾ ವೀರನಂ
ತಲೆಯುಂ ಮುಂಡಮುಮೊರ್ಮೆ ದಲ್ಪಲಗೆಯೊಳ್ಬೈತಿಟ್ಟವೊಳ್ಪೀೞ್ವಿನಂ ೬೨

ವ॥ ಅಂತು ಪೊಯ್ದು ರಥಕ್ಕೆ ಪಾಯ್ದು ಸಾರಥಿಯ ಚೋದನಾವೇಗದಿಂ ಗಾಳಿಗೆ ಗಱಿವಮೂಡಿದಂತೆ ಮನಕ್ಕೆ ಮಡವೊಗೆದಂತೆ ಮುಹೂರ್ತಮಾತ್ರದಿನೆಯ್ದಿ ತನ್ನ ದುರ್ಗಮಂ ಪೊಕ್ಕನನ್ನೆಗಮಿತ್ತಲ್

ತರವೇೞ್ದಿಟ್ಟಿದ ಬೋನಮಾಗಳೆ ರಸಾಳೋದ್ಯಾನಮಂ ಪೊಕ್ಕುದೇ
ಕರಸಂ ಬಾರನೊ ಚಂಡಶಾಸನನದೆತ್ತಲ್ಪೋದನೋ ದೇವಿಯುಂ
ಬರುತುಂ ತಳ್ವಿದರಂಗರಕ್ಕರಿದಿರ್ವೋಗಿನ್ನೀಮೆನುತ್ತುಂ ಮಹ
ತ್ತರರಿರ್ಪನ್ನೆಗಮೆಯ್ದೆ ವಂದನವನೀನಾಥಂ ತದುದ್ಯಾನಮಂ ೬೩

ವ॥ ಬಂದು ವರೂಥದಿಂದಿೞಿದು ಭೋಜನಶಾಳನಿಕಾಯಮಾನಪ್ರತಾನ ಸಂಫುಲ್ಲಮಲ್ಲಿಕಾಮಂಡಪದ ಮುಂದೆ ನಿಂದು

ಬಂದಳೆ ದೇವಿ ಪಟ್ಟಿಗೆಡೆಮಾಡಿಸಿದಪ್ಪಳೆ ಚಂಡಶಾಸನಂ
ಬಂದನೆಯೆಂದು ಮಂದಿರಮಹತ್ತರರಂ ಬೆಸಗೊಳ್ವಿನಂ ನೃಪಂ
ಬಂದುದು ಚೇಟಿಕಾಸಹಚರೀಜನಮುಂ ಶ್ಲಥಕೇಶಪಾಶಮಾ
ಕ್ರಂದಿತವಕ್ತ್ರಮಾಹತಕೃಶೋದರಮಾಕುಳಿತಾಶ್ರುಲೋಚನಂ ೬೪

ವ॥ ಅಂತು ಶೋಕರಸಮೆ ರೂಪುಗೊಂಡಂತೆ ಬರ್ಪ ನಿಜಾಗ್ರಮಹಿಷೀ ಪರಿಜನಮಂ ದೂರದೊಳ್ಕಂಡಿದೇನೆಂದತಿಚಕಿತಚಿತ್ತನುಂ ವಿಸ್ಫುರಿತವಿಲೋಚನನುಮುದ್ಧಭ್ರೂಲತಾಮೂಲನುಮುತ್ತಾನಿತಕರಪತಾಕನುಮಾಗುತ್ತುಮಿರೆಯಿರೆ

ಹಾ ಲಲಿತಾಂಗಿ ಹಾ ಕುಸುಮಕೋಮಳೆ ಹಾ ಕಳಹಂಸಯಾನೆ ಹಾ
ನೀಳಸರೋಜಲೋಚನೆ ಸುನಂದೆ ನೃಪೇಂದ್ರನ ರಾಜ್ಯಲಕ್ಷ್ಮಿ ಭೂ
ಪಾಲನ ಭಾಗ್ಯಲಕ್ಷ್ಮಿ ವಸುಷೇಣನ ಮಂಗಳಲಕ್ಷ್ಮಿ ರಾಜಚಾಂ
ಡಾಲನ ಬಾಹುರಾಹುಗಿಳನಂ ನಿನಗೆತ್ತಣಿನೆತ್ತ ಬಂದುದೋ ೬೫

ವ॥ ಎಂದು ಬಾಯುಱಿದೞುತ್ತುಂ ಬಂದು ಮುನ್ನಡಿಯೊಳ್ಕಿಡೆದುಂ ಪುಡಿಯೊಳ್ಪೊರಳ್ವ ವಿಳಾಸಿನೀಸಮೂಹದೊಳಗೆ ರಾರಾಜಿತರತ್ನಪಾದುಕಗ್ರಾಹಿಣಿಯಪ್ಪ ಬಾಳಕಿಯದೊರ್ವಳ್ ದೇವರಟ್ಟಿದ ಬೞಿಗೆ ದೇವಿಯರ್ಬರುತ್ತುಮಿರೆ ಚಂಡಶಾಸನಂ ಕಂಡೆಱಿದು ಪಿಡಿದು ಕೈಸೆಱೆವಿಡಿದು ಬಂದಿಕಾಜನಂತೆ ಕೊಂಡುಪೋದಂ

ಪಡಲಿಡೆ ಪೊಯ್ದಂ ದೇವಿಯ
ಗೆಡೆಗುಡದಡ್ಡೈಸಿದಂಗರಕ್ಕರನೆಮ್ಮಂ
ಪಿಡಿದುಯ್ವಂ ಕಿಱುದೆಡೆಯಂ
ನಡೆಗೆಟ್ಟು ಬೞಿಕ್ಕೆ ಬಿಟ್ಟನಾ ನಿಸ್ತ್ರಿಂಶಂ ೬೬

ಎನೆ ಕೇಳ್ದುಕ್ಕಿದ ಕೋಪವಹ್ನಿಗೆ ವಿಯೋಗೋದ್ರೇಕಶೋಕಪ್ರಭಂ
ಜನಸಂತಾಪಮು[1]ನು[1]ರ್ಕೆಯುಂ ಪಡೆಯೆ ಕಿಂಕರ್ತವ್ಯತಾಮೂಢನೊಂ
ದಿನಿಸಂ ಜೀವಿತಶಂಕೆ ಘೋಂಕನರಳಿದಳ್ಳಾಡುತ್ತುಮಿರ್ದಾತ್ಮನಾ
ಥನನಾಪ್ತರ್ಸಚಿವರ್ನಿಜಾಂಶುಕತಿರೋಧಾನಾವಿಲಂ ಮಾಡಿದರ್ ೬೭

ಮಳಯರುಹದ ಕರ್ಪೂರದ
ಪಳಿಕಿನ ಪನಿನೀರ ಕದಲಿದಳದಿಱಿಸಿಲ ತ
ಣ್ಣಳಸದ ತಿಳಿನೀರ್ಗಳ ಶೀ
ತಳತೆಯಿನವನಿಪನನಾಪ್ತರುಜ್ಜೀವಿಸಿದರ್ ೬೮

ವ॥ ಅಂತು ಪರಾಮುರ್ಶಿತಹೃದಯನಾದ ನೃಪಾಳನಂ ನರ್ಮಸಚಿವರಿಂತೆಂದರ್

ಮದವದ್ವೈರಿಕುಳಂ ಭವದ್ಭುಜವಿಭಾಸ್ವತ್ಖಡ್ಗಧಾರಾನದಿ
ನದದೊಳ್ಮುನ್ನ ಮುೞುಂಕದುದ್ಧತರದುರ್ಗಂ ನಿನ್ನ ಕೋಪ ಪ್ರತಾ
ಪದವಜ್ವಾಳೆಗಳಿಂ ಮುೞುಂಕದೆ ವೃಥಾ ಶೋಕಾಬ್ಧಿಯೊಳ್ಧೀರರಂ
ದದಿ ನೀನಿಂತು ಮುೞುಂಕಲಪ್ಪುದೆ ಧರಿತ್ರೀಪಾಲ ಚೂಡಾಮಣೀ ೬೯

1 ಉ (೨)

ವ॥ ಆ ಪ್ರತಿಬೋಧನವಚನಂ ವಲ್ಲಭಾವಿಯೋಗವೈಕ್ಲಬ್ಯವಲ್ಮೀಕಸುಪ್ತಕೋಪವ್ಯಾಳಪ್ರತ್ಯುತ್ಥಾಪನದಂಡಮಾಗೆ ಧರಾಧಿನಾಥನಿಂತೆಂದಂ

ಭಂಡಣದೊಳೞಿದು ಪೆಂಡಿ
ರ್ಭಂಡಾರಂ ಪೋದೊದದು ವಿಧಾತೃವಶಂ ಬ
ಲ್ಗಂಡಂಗೆ ಸಂತಸೊಕಮಾ
ಪೆಂಡತಿ ಕೋಳ್ಪಟ್ಟು ಮಗುೞ್ಚಿ ಪುಗುವನೆ ಪೊೞಲಂ ೨೦

ಪ್ರಾಣ ಪ್ರಿ[1]ಯೆಯಿ[1]ಲ್ಲದೆ ನಿಃ
ಪ್ರಾಣಮುದೆಂತುಣ್ಬುದೀಗಳೀಯೊಡಲಹಿತ
ಪ್ರಾಣಾನಿಲನಿಂದೆನ್ನ ಕೃ
ಪಾಣಾಹಿಯನೂಡಿ ಬೞಿಕಮಾನುಂಡಪ್ಪೆಂ ೨೧

ವ॥ ಎಂದೆತ್ತಿ ನಡೆಯಲುತ್ತವಳಿಸಿದ ಸಮಯದೊಳ್

ನೆರೆದಾಪ್ತರ್ಸಚಿವರ್ಚಮೂಪತಿಗಳಂದಾಳೋಚನಕ್ಕೆಂದು ಬಂ
ದಿರೆ ಕಂಡಿಂಗಿತಮಂ ನೃಪಂ ನುಡಿದನಿನ್ನೇವಾತೊ ಕಿರ್ಚೆರ್ದೊಡಂ
ಗರ ನಾದಂ ಗಡ ಮಾರಿ ಹೊಕ್ಕ ಮನೆಯೊಳ್ಪರ್ವಂ ಗಡಾಳೋಚಮೇಂ
ಬೆರಗೇಂ ಬೆಂಬಲಮೇಂ ಸ್ವರಾದಿಬಲಮೇಂ ನೀಂ ಪೇೞ್ವುದೇಂ ಕೇಳ್ವುದೇಂ ೨೨

ವ॥ ಎಂದು ಮುಂದನಾರಯ್ಯದೆ ಪಿಂದಂ ಪಾರದೆ ಮುಂದೆ ನಿಂದ ನಿಜಸ್ಯಂದನಮನೇಱೆ ಸುಟ್ಟುರೆ ಮುಸಗಿಟ್ಟುರಿಗೊಂಡನಾವ್ಯತಿಕರದೊಳ್

ದೞಿದುೞಿಮಾದುದಾಗಳಸಿಯೇಱೆಸಿದೇೞಿದು ಬಂದಿ ಬಂದಿದಂ
ಡುೞಿಮೆಲೆ ದಂಡುಳಂ ಪಿಡಿದರಂಗನೆಯಂ ಪಿಡಿದೊಯ್ದರೆಂದು ತ
ಲ್ಲೞಿಸಿ ತಡಂ ತಡಂಬರಿಯೆ ಪುಯ್ಯಲ ಗಾವಳಿ ಕೆಯ್ಯನಿಟ್ಟುದೀ
ತೊೞಿಸಿದ ಪಾಂಗೆ ಕಿೞ್ತಲೆ ಕಿೞಿಂದಲೆಯಾದುದು ಕೂಡೆ ಪಟ್ಟಣಂ ೨೩

ವ॥ ಆ ಕೋಳಾಹಳಕ್ಕೆ

ರಣರಭಸೋತ್ಕಟಂ ಧರೆ ಪಡಮಂ ಮಗುೞ್ದಂತೆ ಚತುಸ್ಸಮುದ್ರಮು
ಲ್ಬಣವಿಕಟೋತ್ಕಟಂ ಮುಸಗಿ ಮೇಲ್ಗವಿದಂತೆ ದಿಶಾಚತುಷ್ಟಯಂ
ಪ್ರಣಿಹಿತಿಹೇತಿ ತಿಂತಿಣಿಸಿದಂತೊಡವಂದುದು ಪಣ್ಣಿದಾನೆ ಪ
ಲ್ಲಣಿಸಿದ ವಾಜಿ ಪೂಡಿದ ರಥಂ ಕವಚಂ ಬಿಗಿದಾಪ್ತಸೈನಿಕಂ ೨೪

1 ಯಮಿ (ಅಇಉ)

ವ॥ ಅಂತು ಬಂದ ಚತುರಂಗಪೃತನಾಸಮೂಹಸಹಿತಂ ಕೃತಭುಜಬಲಪ್ರತಾನ ಪ್ರತಿಹತಾಲೇಪನದೀಕೃತಾಭಿಷೇಣಂ ವಸುಷೇಣಂ ಸಾಮಂತಲಕ್ಷ್ಮೀಸೀಮಂತನೆನಿಪಂ ಸಿಂಹಚೂಡಂಗೆ ಬೀಡುಂದಾಣಮಾದ ಮಾಣಿಕ್ಯಪುರಮನೆಯ್ದೆವರ್ಪಾಗಳ್ ಪೊಡೆವ ವೀರವಱಿಯ ಪಿಡಿವ ಬಿರುದಿನ ಕಾಳೆಯ ಸುತ್ತಿಱಿದ ಮುತ್ತಿನ ತಟಿಯ ತಲೆಗೆ ಮುಂದಲೆಯಾಗಿ ಲೆಂಕರ್ಕುಡುವ ಸಿಡಿದಲೆಯ ಸಹಗಮನಸಮುತ್ಸುಕತೆಯಂ ಕೈವಿಡಿಸೆ ಕೈಗುಡುವ ಕೈದುಬರ್ಪ ಕೈವಿಡಿದ ಪೆಂಡಿರ ತಂಡದ ನಡುವೆ ಪೊತ್ತ ಪೊನ್ನಪರಿಯಾಣದೊಳಗೆ ಜೋಳವಾಟಿಯ ನಿರ್ವಹಣದ ನಿಬ್ಬಣಕ್ಕೆ ಬೀರಸಿರಿ ಪೊತ್ತ ಪೊಂಗಳಸದಂತೆ ತಳತಳಿಸಿ ತೋರ್ಪ ಪಂದಲೆಯಂ ಕಂಡು ನಿಂದು ನೋೞ್ಪಾಗಳ್

ಮುರಿದಣ್ಪಿಕ್ಕಿದ ಗಡ್ಡಮಿಾಸೆ ಮುಡಿಕಟ್ಟಂ ತಳ್ತ ಕೆಂಬಟ್ಟೆ ಕ
ಸ್ತುರಿಯಂ ತೂಱುವ ಚುಂಚುಮಿಾಸೆ ಸುಲಿಪಲ್ದಷ್ಟಾಧರಂ ಭ್ರೂಕುಟಿ
ಸ್ಫುರಿತಂ ಕೈಮಿಗೆ ಭೂತಳಕ್ಕೆ ಪರಿವೇಷಂಗೊಂಡು ಬೀೞ್ವಂದ ಭಾ
ಸ್ಕರನಂತಿರ್ದುದು ಸಿಂಹಚೂಡನ ಶಿರಂ ಪೊಂಬಟ್ಟೆನಾಳ್ವಟ್ಟೆಯೊಳ್ ೭೫

ಪಗೆಯಂ ಕಂಡಟಿಯಾಸೆಗೆಯ್ದು ಪೊರೆದಾಳ್ದಂಗಾತುರಂ ಮುಟ್ಟೆ ಮೆ
ಯ್ದೆಗೆದಾಸ್ಥಾನದೊಳಾರ್ದು ಪಾರ್ದು ನೆರವಂ ಸಂಗ್ರಾಮದೊಳ್ ಜೋಳವಾ
ಟಿಗೆ ಕೆಯ್ಯಾಂಪಳಿ ವೇಳೆ ಪಾಳಿವೆನಸುಂ ಮುಯ್ಯಾಂಪ ಸಾಮಂತರಂ
ನಗುವಂತಿರ್ದುದು ಸಿಂಹಚೂಡನ ಶಿರೋಬ್ಜಂ ದಂತರುತ್ಕೇಸರಂ ೭೬

ವ॥ ಅಂತು ಪೊತ್ತು ಬಂದ ವೀರಂ ವೀರಪುರುಷನ ಶಿರೋಂಬುರುಹಮಂ ಧಾರಿಣೀಪತಿಗೆ ನಿವಾಳಿಸಿ ನಿಂದು ವನಿತಾಹರಣವಾರ್ತೆಯಂ ಸೂಚಿಸಿ ಬಟಿಯಮಿಂತೆಂದಂ

ತಾಗಿದ ಪಲವಸಿಮುಸೆಯಿಂ
ಭೋಗಂಬೋಗುತ್ತುಮಿರ್ದು ಖಳನಂ ರಥದೊ
ಳ್ವೇಗಮಯನಾಗಿ ಮುತ್ತದ
ಪೂಗೊಂಚಲನುಯ್ವ ತೆಱದಿನೊಯ್ದಂ ಸೂತಂ ೭೭

ವ॥ ಅಂತು ಸಾಮಂತಸಾಮಜಸಿಂಹಂ ಸಿಂಹಚೂಡಂ

ಕಾದಿದ ಕಾಳೆಗಂ ಜವನ ಜತ್ತಕುಱಿಕ್ಕೆ ಸಮಾನಮಾದುದೇ
ನಾದೊಡಮೇಂ ಬರ್ದುಂಕಿ ಪಗೆ ಪೋದ ಬಟಿಕ್ಕೆ ವೃಥಾನುವಾದಮಿ
ನ್ನಾದ ದಯಾಜನಕ್ಕೆ ತೋಱಿದಂಕರಲೆಂಕರ ಗೊಂದಣಕ್ಕೆ ತ
ಳ್ಪಾದವುದುರ್ವರಾಧಿಪತಿ ಬೀಟಿಳ್ಕೊಡು ಕೂಡುಗೆ ಸಿಂಹಚೂಡನೊಳ್ ೭೮

ವ॥ ಎಂಬುದುಮುರಸಂ ನಿಜಾಂತಃಕರಣಖೇದಕ್ಕಂ ವೀರಶಾಸನಪ್ರವಾದಕ್ಕಂ ಮೂದಲೆಯಂತಿರ್ದ ತಲೆಯಂ ನೋಡಿ ನೀಡುವೊದವಿದಟಿಲಂ ಸಮುಚಿತೋಪಚಾರಂ ವಚನಕಾರುಣ್ಯಪ್ರಸಾದಪ್ರದಾನಪ್ರಸಂಗದಿಂ ಸಂತರ್ಜಿಸುತ್ತುಮಿರೆ

ತುಟಿಲಾಳ್ಮದ್ಗೋತ್ರಭವಂ
ಕಟಿಂದಂ ಕಲಿಸಿಂಹಚೂಡನೆಂದವಯವದೊಂ
ದಟಿಲಿಂದೆ ಕೆಂಪು ಮಿಗೆ ನೀ
ರಿಟಿವಂತಿರೆ ಸೂರ್ಯನಪರಜಲನಿಧಿಗಿಟಿದಂ ೭೯

ಆದಿವಸಾಂತಮಂ ತೆಗೆದವೊಲ್ ನೃಪನಲ್ಲಿಯೆ ಬಿಟ್ಟು ವಲ್ಲಕೀ
ನಾದೆಯ ತೋಳ ತಳ್ಪದಿನಗಲ್ದು ಮನೋಭವಶಸ್ತ್ರಶಯ್ಯೆಯಿಂ
ಪೋದಿರುಳಂ ಕಟಿಪ್ಪಿ ವಿರಹವ್ಯಥನಂ ದ್ವಿಗುಣೀಕೃತಾರ್ಕಬಿಂ
ಬೋದಯನಿರ್ಗಮಂ ತಡೆಯದೆಯ್ದಿದನಾಂತ ವಿರೋಧಿದುರ್ಗಮಂ ೮೦

ವ॥ ಆ ಸಂರಂಭದೊಳ್

ಪರವೆಣ್ಣಂ ತಂದನೋ ತಂದನೊ ಪೆಸರ್ಗಿಡೆ ಪೆರ್ನೂರಿಯಂ ನಮ್ಮ ದುರ್ಗ
ಕ್ಕರಸಂ ಸೇನಾಸಮಗ್ರಂ ನಿಜಗಲಿ ವಸುಷೇಣಂ ವಧೂವಿಹ್ವಲಂ ದ
ಳ್ಳುರಿದಾಳಿಟ್ಟಂತಿದಂ ಸುಟ್ಟುರಿಪದಿರಿಸನೇಗೆಯ್ವೆವೆಂತಿರ್ಪೆವೆತ್ತ
ಲ್ಪರಿವೆಂ ನಾವೆಂದು ಪೌರರ್ಕುದಿದರರ್ದಿದರಳ್ಳಾಡಿ ತಳ್ಳಂಕಗೊಂಡರ್ ೮೧

ಪದಧೂಳೀಜಾಳದಿಂ ಪೂಟ್ದುದು ಪರಿಖೆ ಮದಿಲ್ಗೆಟ್ಟು ಗಟ್ಟಿತ್ತು ಪುತ್ತೇಱಿ
ದುದೆತ್ತಂ ಗೋಪುರಂ ಕತ್ತಲೆ ಕವಿದು ಬಿಡಲ್ಬೀಡು ಪತ್ತಿತ್ತು ಕಣ್ಗಾ
ಣದೆ ದುರ್ಗಂ ಕಾದಲುಂ ಕೈಮುಱಿದುದನಿತು ವೈಕಲ್ಯದೊಳ್ಮನ್ನೆ ಕಂಡಿಂ
ತಿದು ಬೀಡುಂದಾಣಮೆಂದೊತ್ತಿದ ಪಡೆವಳರಿಂ ಮುತ್ತಿಬಿ[1]ಟ್ಟ[1]ತ್ತು ಸೈನ್ಯಂ ೮೨

ವ॥ ಅಂತು ಮೂವಳಸುವಳಸಿ ಬೀಡಂ ಬಿಟ್ಟು ಮಱುದಿವಸಂ ಲಗ್ಗೆಯ ದೆಸೆಯದಿವಸ ಸದರನಿದರಮುಮಂ ಜಂತ್ರದೊಡವಣೆಗಳುಮಂ ಭೂಮಾನಮುಮಂ ಪುಗುವ ಪೊಱಮಡುವ ನೀರಕಂಡಿಯ ಕುದುರೆಗಂಡಿಯ ತೆರಪುಗಳುಮಂ ವಸುಷೇಣಂ ಬಳಸಿ ನೋಡುತ್ತುಂ ಬರ್ಪನ್ನಮಾಗಳೇಱಿಸಿದ ತಿಮಿರೊಳುಮಿಟ್ಟ ತಿಲಕದೊಳಂ ಕಟ್ಟಿದ ದಂಡೆಯೊಳಂ ಅರ್ಚಿಸಿದ ಕೊತ್ತಳದೊಳಂ ಅರ್ಚಿಸಿದಟ್ಟಳೆಯೊಳಂ ಎತ್ತಿದ ಪತಾಕೆಯೊಳಂ ಸುತ್ತಿದ ಬೇವಿನದಂಡೆಯೊಳಂ ಸೆಱಿಗೆಯ್ದ ಸಱಿಯೊಳಂ ಪೊಱಿಸಿದ ಗಾಲಿಯೊಳಂ

1 ಟ್ಟ (ಇಉ)

ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣಿಯೊಳಂ ಗುಡಿಸಿದ ಗುಂಡಿನೊಳಂ ಪಣ್ಣಿದ ಸಾರ ಮಾರಿಯೊಳಂ ಕಾಸಿದಂಬಲಿಯೊಳಂ ಬಾಸಣಿಸಿದ ಪಾವಿನೊಳಂ ಪುರಿದ ಮಣಲೊಳಂ ಪೂಣಿಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ ಬಯ್ದಾಡುವ ಕಹಳೆಯೊಳಂ ಪೊಯ್ದು ಬೊಬ್ಬಿರಿವ ಪಱಿಯೊಳಂ ಕೆನೆಯಂ ತಳ್ತ ಪರಿಗೆಯೊಳಂ ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಟಾಸುರಮಾಗೆ ಮಸೆದ ಜವನದಾಡೆಯಂತೆ ಮಸಗಿದ ರಕ್ಕಸರ ಮಾಡದಂತೆ ನೋಡಲರಿದೆನಿಸಿದ ಮಕರಮುಖದಾಡಾಯಗ್ಗದಗ್ಗಳಿಕೆಯಂ ಕಂಡು ಕಡುಮುಳಿದು

ನೊಣೆಯಲ್ಮಂಗಲಿಳಾತಳಂ ಮುರಿದು ಮೂರಿಟ್ಟಂತೆ ದುರ್ಗಕ್ಕೆ ನಿ
ಚ್ಚಣಿ ಸಾರ್ಚುಂದೊಲೆ ವೀರಸೇತು ನಡೆ ಸಾರಂಬದ್ದರಂ ಗೆಗ್ಗೆ ಡೆಂ
ಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹುಕೋಟಾಯಂತ್ರಸಾಮಗ್ರಿ ತಿಂ
ತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಟಿಸೈಸಿದಂ ೮೩

ವ॥ ಅಂತು ಸೂಟಿಸೈಸುವ ನಿಸ್ಸಾಳಭೇರೀಢಕ್ಕಾಮೃದಂಗಕೋಳಾಹಳಮೆತ್ತಿ ಪೊತ್ತು ತಂದಿಳಿಪುದುದೆನಿಸಿ ಗುಡವಿಡಂಚಿತಪಿಪೀಲಿಕಾಜಾಲದಂತೆ ಮುತ್ತಿ ಮುಸುಱಿ ಪತ್ತೆ ಪೞಿಂಚೆ ಕೋಟೆಯ ಕೊತ್ತಳದಾಳ್ವೇರಿಯ ಜೆಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಂ ದಂಡಾದಂಡಿಯುಂ ಕಚಾಕಚಿಯುಮಾಗಿ ತಳ್ತಿಱಿವ ವಸುಷೇಣ ನೃಪನ ವೀರಭಟಕೋಟಿಯ ಲಗ್ಗೆಯಗ್ಗಳಿಕೆಯೊಳೞಿ[1]ಗೆಲ[1]ಸಿಯಡುಗೆಯಂತಿರಟ್ಟಳೆಯೊಡೆದು ಬಣಜಿಗನ ಬಳಕೆಯಂತೆ ಕೊತ್ತಳಂ ಬಱಿದಾಗಿ ಬೞಲ್ದ ಒಡಗೊಂಡಿಯಂತಿರಾಳ್ವೇರಿಯೞಿದು ಕಡುಗೊಯ್ಯಲಾದ ಕೆಯ್ಯಂತೆ ತೆನೆಮುಱಿದು ಬೀಸರವಾದ ರಾಶಿಯಂತೆ ಪುಲಿಮೊಗಂಗೆಟ್ಟು ಕಟ್ಟುಗೊಂಡು ತಟ್ಟುತ್ತಿಱಿವ ಕಟ್ಟಾಯದ ಕಡುಗಲಿಗಳೆಲ್ಲಮುಣ್ಮಿನ್ಮಿನಿಂದು ಮುಮ್ಮಳಿಯಾಗೆ ಪೋಯ್ತು ಪೋಯ್ತು ದುರ್ಗಮಿನ್ನೇನೆಂದೊಳಗೆಲ್ಲಮೆಯ್ದೆ ಸರಕುಗಟ್ಟೆ ಪೊಱಗೆಲ್ಲಮೆಯ್ದೆ ಗುಡಿಗಟ್ಟೆ ಸೀರೆಯಂ ಬೀಸಿ ಬೊಬ್ಬಿಱಿದಾಱಿ ತೊಟ್ಟನೆ ಕಂಡು

ರಣಮಂಡಲದೊಳ್ಪೆಱತೆಗೆ
ದಣಿಯಂ ತೆಗೆ ನೆಱಿದ ಬಿಲ್ಲವೋಲಿರ್ದ ಭಟಾ
ಗ್ರಣಿ ಪರಿದು ದಂಡೆಗೊಂಡ
ಡ್ಡಣದಿಂದಂ ಚಂಡಶಾಸನಂ ಕೈಕೊಂಡಂ ೮೪

ವ॥ ಅಂತು ಕೈಕೊಂಡು ಪೊತ್ತೆತ್ತಿ ಪೊಯ್ವ ಕೂರ್ವಾಳ ಬೆಳಗಿನ ಕೊರ್ಬಿಸಲೆಸಕದೊಳ್ಮುಸುಱಿ ಮುತ್ತಿದ ಮಾರ್ತಲೆಯೆಂಬ ಕತ್ತಲೆ ಕೂಡೆ ಕೆಟ್ಟಿಲೆ ಕಿೞಿಂದಲೆಯಾಗೆ ಪೊಱಗುಮೊಳಗುಂ ಕೀಳ್ಗಟ್ಟಿಯಂತೆಸೆವ ಬೆಟ್ಟಂಗೆ ಬಳಿಗವನಿಕ್ಕಿದ ಬೀಟ್ಟಿ ಕಂಡಿಗಳಂ

1 ಗೆಱ (ಅ)

ಪೆಣದ ಪೇರಟ್ಟೆಯೊಟ್ಟಿಲಿಂ ಮುರ್ಚಿಮುತ್ತಪತ್ತಿಭಿತ್ತಿಗರಮೊತ್ತಂ ಬಿಡೆ ಉರಿವೆಣ್ಣೆಯೊಳಂ ಮುರಿದುರುಳೆಯುಂ ಉರಿವ ಮಣಲೊಳ್ ಸಿಡಿಮಿಡಿಗೊಂಡು ಸುರುಳೆಯುಂ ಕಣೆಯ ಕಲ್ಲೊರಲೆ ಡೆಂಕಣಿಯಾಗೆಯುಂ ಸಾರಮಾರಿಯ ಪೊಯ್ಲೊಳೋರಣಿಕೆಗೆಡೆಯುಂ ತೆತ್ತಿಸಿದ ಗಾಳದೊಳೆತ್ತಿದ ಪಾಪೆಯಂತೆಳಲೆಯುಂ ಕುತ್ತಿದ ಕೊಂತದೊಳ್ ಕೋಲ ಸುಂಟಗೆಯಂತೆ ಸಾಲಿಟ್ಟು ಬೀೞ್ತಿಯುಂ ಮೇಲ್ಗಾದಿ ನಿಂದು ಪೋಗದೆ ಗಱಿಗಟ್ಟಿ ನಿಂದ ರಿಪುವೀರದುರ್ಗಮಾಳ್ಪೇರಿಯ ಮೇಲಲಗನೂಱಿ ತೂಗಾಡುತಿರ್ದ ಪುಣ್ಣ ವುಣ್ಣಂಗಳಿಂ ಪೂತಮುತ್ತುದ ಪೂವ ಮೊರಡಿಯಂತಿರ್ದಟ್ಟಳೆಗಳೊಳಗೆ ನಿಂದಟ್ಟಳೆಗಳ್ತಿನೊಗೆವ ನೆತ್ತರ ಸುಟ್ಟುರೆಗಳಿಂ ಬೇಸಗೆಯುರಿ ಪತ್ತಿದ ಬೆಟ್ಟದಂತಿರ್ದುದು ಕೊತ್ತಳದೊಳೊತ್ತಿನ ತೆನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟಕುಣಪಂಗಳಿಂ ಪೆಣೆದ ಪೆರ್ಮೞೆಯುಂ ಕಱಿವ ವಿಳಯಜಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು

ಅದನಾಗಳ್ಕಂಡು ಕಣ್ಣಿಂದುರಿ ಬರೆ ಪೊಗೆ ಪುರ್ವಿಂದಮುರ್ವೇೞೆ ಭೋಂಕ
ಲ್ಮದಮಾತಂಗಾರಿ ಪೂರ್ವಾಸನದಿನಿೞಿದು ಮೆಯ್ವೆತ್ತೆ ವಜ್ರಾಂಗಿ ಕೆಯ್ಯೆ
ತ್ತಿದ ಕೊಂತಂ ದಂಡೆಗೊಂಡಡ್ಡಣಮಿರೆ ವಸುಷೇಣಂ ಭರಂಗೆಯ್ವುದುಂ ಪೋ
ದುದು ಪೊತ್ತಿಂ ಕಾಲಿಡಲ್ಕತ್ತಲೆ ಕದಡಿದುದೆಂದಾಪ್ತರಡ್ಡೈಸಿ ನಿಂದರ್ ೮೫

ವ॥ ಆಗಳೆರಡುಂ ಪಡೆಗಳ ಪಾರತೂರ್ಯಂ ಮೊಳಗೆ ಪೆಱತೆಗೆಯಲೊಡಂ ವಸುಷೇಣಂ ಬಂದು ನಿಜನಿವೇಶಿತಸ್ಕಂಧಾವಾರಮಂ ಪೊಕ್ಕನಿತ್ತ ಚಂಡಶಾಸನಂ ಮುಂಡಳಿಸಿ ಪಿಡಿದ ಕೈದೀವಿಗೆಯ ಬೆಳಗಿನೊಳ್ ತೊಟ್ಟ ಗದ್ದಿಗೆಯ ಗರುಡವಕ್ಕದ ಕವಚದ ನವರತ್ನ ಕಿರಣಂಗಳ ಕಿತ್ತಕರವಾಳ ಬಾಯ್ಧಾರೆಯೊಳ್ ಬಳ್ಳಿಗೊಂಡು ಮಿಳ್ಳಿಸಿ ಪೊಳೆಯೆಯುಂ ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ದೆಗೆದು ಬಿಗಿದೆೞಲ್ವ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ ಒಂದೆ ಕೆಯ್ಯೊಳಿಕ್ಕಿದೆರಡು ಕಂಕಣದ ಝಣಝಣತ್ಕಾರಂ ಜಡಿವ ಬಾಳ ಕುಣಿವ ಕೊಂಕಿಂಗೆ ಕಿಂಕಿಣೀರವಮನಳಂಕೆಗೊಳಿಸಿಯುಮೋದುವ ರಾಯವಾಡದುಗ್ಘಡಿಸುವ ಪಡವಳರ ತನ್ನ ಬೀರಮಂ ಮನ್ನಿಸಿ ಪೊಗೞ್ದ ಕೈವಾರಿಗಳಾಡಂಬರಮಳುಂಬಮಾಗೆ ಸುನಂದೆಯುಂ ತಂದು ಸೆರೆಯಿಟ್ಟ ಮಣಿಮಾಡಕ್ಕೆ ಬಂದು

ಘನನಿಶ್ವಾಸತರಂಗಿತಾಳಕಿಯನಗ್ರಪ್ರಾಂತವಾರ್ಬಿಂದು ಲೋ
ಚನಪಕ್ಷ್ಮಾವಳಿಯಂ ವಿಯೋಗದಹನಪ್ಲುಷ್ಟಾಧರಚ್ಛಾಯೆಯಂ
ವಿನತಪ್ರಾಹ್ಣಸುಧಾಂಶುಬಿಂಬಮುಖಿಯಂ ಚೀನೋತ್ತರೀಯಾವಗುಂ
ಠಿನನಿರ್ಭಿನ್ನಕಪೋಲಪಾಂಡುರುಚಿಯಂ ಸಾರ್ದಂ ತದುರ್ವೀಶ್ವರಂ ೮೬

ವ॥ ಆಗಳ್

ಬಿದಿಯೆಂಬ ಮದಗಜಂ ನೃಪ
ಸದನಸರೋವರದೊಳೆೞಿದು ಸೆಳೆತಂದು ವನಾಂ
ತದೊಳಿಕ್ಕಿದ ಬಾಳಮೃಣಾ
ಳದವೊಲ್ ಸತಿಕೊರಗಿ ಕಣ್ಗೆ ಕರಮೆಸೆದಿರ್ದಳ್ ೮೭

ವ|| ಅಂತು ಸಾರ್ದು ತನ್ನೊಡವಂದು ಬಾಗಿಲೊಳ್ ನಿಂದ ಪರಿಜನಮುಮಂ ಕೆಲಬಲದೊಳಿರ್ದ ಪಸಾಯಿತರುಮಂ ಪರಿಹರಿಸಿ ಕೃತಕವಿನಯೋಪಚಾರಮೆಸೆಯೆ ಚಂಡ ಶಾಸನಂ ಸುನಂದಾದೇವಿಗಿಂತೆಂದಂ

ನೆಯದಿಂ ನಿನ್ನೊಳೊಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸ
ಲ್ಗೆಯನೀಂ ಮನ್ನಿಸು ಕಾಮಿ ಕಣ್ಣ ಱಿವನಲ್ತಾಂ ಗಂಡುದೊಲ್ತಿನ್ನ ರಾ
ಣಿಯ ವಾಸಂ ಪರಿಚಾರಕಾದಿ ನಿನಗೀ ಸಾಮ್ರಾಜ್ಯಲಕ್ಷ್ಮೀಸುಖೋ
ದಯದೊಳ್ವಲ್ಲಭೆಯಾಗಿ ನೀನಿರುದಲನ್ನೀಲಾಬ್ಜಲೋಲೇಕ್ಷಣೇ ೮೮

ನುಡಿಯಲೊಡಮಿಂತು [1]ಪೇೞ್ವಡ[1]
ನುಡಿಯಂ ತನ್ನಿದಿರೊಳಾ ಖಳಂ ಕಡೆಗಣ್ಣಿಂ
ಕಿಡಿಸೂಸೆ ಘೃತಾಹುತಿಯಂ
ಪೊಡೆವ ಶಿಖಿಜ್ವಾಲೆಯಂತೆ ಬಾಲೆ ಕನಲ್ದಳ್ ೮೯

ವ|| ಅಂತು ಕನಲ್ದೊನಲ್ದು ಸೈರಿಸಲಾಱದೆ

ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ
ಮೆಱೆದುಂ ಕಾಣದನಾಥೆಯಂ ನುಡಿವವೊಲ್ನಿನ್ನೊಂದು ಸಂಪತ್ತಿಯಿಂ
ಜಱಚುತ್ತಿರ್ದಪೆ ಪಾಣ್ಬ ನಿನ್ನ ತಲೆಯುಂ ಕಾರಾಗೃಹದ್ವಾರದೊಳ್
ಮೆಱೆವಾಗಳ್ ನುಡಿ ನಾಳೆ ನೀನೆನಗೆ ಮಾಡಲ್ವೇೞ್ಪ ಸತ್ಕಾರಮಂ ೯೦

ರಮಣನಿರೆ ಪಾಣ್ಬನೊಳ್ಸತಿ
ರಮಿಯಿ[2]ಸಿದಪ್ಪಳೆ[2] ವೃಥಾನುವಾದದೆ ಫಳಮೇಂ
ಕಮಳಿನಿ ದಿನಪತಿಗಲ್ಲದೆ
ಸಮನಿಸಿ ದೋಷಾಕರಂಗೆ ಮೊಗಮಿತ್ತಪಳೇ ೯೧

ವ|| ಎಂದು ಬೆಟ್ಟವೆಟ್ಟನೆ ಬಯ್ದು ಬಿಟ್ಟು ಬಿದಿರ್ದು ನುಡಿದ ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತಮಿಂತೆಂದಂ

---

1 ಮೇೞ್ಪಡ (ಅ) 2 ಸದವಳುಂ (ಅಇಉ)

ಕೆಳೆಗೆಟ್ಟಾಂಪನೆಯಾದೆನಾಗಿ ವಸುಷೇಣಂ [1]ಪೋದ[1] ನಿನ್ನೆನ್ನ ಕೆ
ಯ್ಯೊಳದ[2]ನ್ನಂ ಬ[2]ಳಿಯಾಸೆಯಿಂ ನಮೆಯದಿರ್ಬೇಡಾಗ್ರಹಂ ಸತ್ತು ಸ
ತ್ಪಳಮಂ ತೋಱುವ ಬಾಳೆಯಾಗದಿರು ಪಾತಿವ್ರತ್ಯದಿಂ ಬತ್ತಿಬಾ
ಳ್ದಳಿರಾಗುತ್ತಿರದಾಳ್ದಿರಾತ್ಮಪರಸೌಖ್ಯ ಶ್ರೀವಿಳಾಸಂಗಳಂ ೯೨

ವ॥ ಎಂಬುದುಮಿಾತಂಗೆ ಮಾತಂ ತಪ್ಪಿನಮುತ್ತರಂಗುಡುತ್ತಿರಲೇಕೆಯೆಂದಾಕೆ ಯಿಂತೆಂದಳ್

ಮಾವಿನ ಕೊಂಬಿನೊಳ್ನಲಿದು ನರ್ತಿಪ ಕೋಗಿಲೆ ಪತ್ತಿದಂಟನಿಂ
ಬೇವಿನ ಕೊಂಬಿನೊಳ್ ನಲಿವುದೇ ಪ್ರಿಯನಿರ್ದಪ್ರೊಳಪ್ರಿಯರ್ಗೆ ಸಂ
ಭಾವನೆಗೆಯ್ವರೇ ಸತಿಯರೇಂ ಗಡ ವೀರನ ತೋಳ ಬಾಳುಮಂ
ನಾವಿದ ಬಾಳುಮಂ ಸಮನೆ ಪತ್ತಿಪ ಸಾಣೆಯೋ ಪದ್ಮಜಪ್ರಜಂ ೯೩

ವಸುಷೇಣನೃಪನೆ ಕೈವಿಡಿ
ದಸುವಿಂಗೊಡೆಯಂ ಚಿತಾಗ್ನಿಗೊಡೆಯಂ ಒಡಲಿಂ
ತೆಸೆದೀ ಪಾತಿವ್ರತ್ಯದ
ಮಿಸುಗುವ ಜಸವೆಣ್ಣ ತಲೆಗೆ ತಪ್ಪೆನು ಪುಲ್ಲಂ ೯೪

ವ॥ ಎಂಬುದುಮಾಕುಟಿಲನಾಕೆಯೊಳ್ ತೆಱಪುಗಾಣದೆ ಮುಳಿದು ಮಾಡದೆ ಮತ್ತಮಿಂತೆಂದಂ

ಬಿಡೆ ನಾಂ ನೀಂ ಸಯೆ ಸಾವೆನಲ್ಲದುೞಿಯೆಂ ನೀನೊಲ್ದಡೇನೊಲ್ಲದಿ
ರ್ದೊಡಮೇಂ ನಾನೆರಡಿಲ್ಲದೊಲ್ಲೆನದಱಿಂ ಬೇಱೂರ ಬೇಟಕ್ಕೆ ಬಾಯರ್
ಬಿಡಲಾಱೆಂ ಸೆಱೆಯಿಂದಮೆನ್ನ ಮನೆಯೊಳ್ನೀನಿರ್ದೆಯೆಂಬಾಸೆಯು
ಳ್ಳೊಡೆ ಸಾಲ್ಗುಂ ಬೞಕಪ್ಪುದಕ್ಕೆ ಕಿಣದಿಂದಂಭೋಜಪತ್ರೇಕ್ಷಣೇ ೯೫

ವ॥ ಎಂದು ತನ್ನ ಮನದಱಪನಡರೆ ಚಾಳಿಸಿ ನುಡಿದು ಪೋಗುತ್ತುಂ

ಪರಿಚಿತೆ ನೀಂ ತಳೋದರಿಗೆ ಮೆಯ್ಪುಳಿಯಿಂ ಮನಮಂ ತೊಡಂಕಿ ಸಾಂ
[3]ತ್ವ[3]ರಿಪದಿನಿ[4]ಳ್ದು[4]ತಂದಬಲನಾಱಿಸು ತೋಱಿಸು ಭೀತಿಯಂ ಮನಂ
ಕೊರಗದೆ ಮತ್ತೆ ಸಂತಮಿಡು ಗಂಡನ ಪಂಬಲನೊಯ್ಯನಾಗಿ[5]ನಿಂ[5]
ದರುಣಿಕೆಯಂಬಳಂ ನಿಱಿಸಿ ಕಾಂತೆಯ ಕಾಪಿನೊಳಾ ನೃಪಾಳಕಂ ೯೬

---

1 ಬಾಳಂ (ಎ) 2 ಬಿಟ್ಟ (ಎ) 3 ತು (ಎ) 4 ರ್ದು (ಅಇಉ) 5 ಯಿಂ (ಅಇಉ)

ಅರಿವೆಣನಾದೊಡಂ ಬಿಡದೆ ನೋಡುವ ದೀವಿಗೆಯಾಸೆಯುಳ್ಳ ಬೀ
ರರಬಿಗಿಯೇ[1]ಲು ಬಾಯ್ಸುಗಿಯೆ ಸಿಕ್ಕಿ[1]ಪ ಕೆಂಡದ ಸತ್ತ್ರ ರಾಜಪು
ತ್ರರ ವನಿತಾಜನಂ ತೊಱೆದು ತೋಳ್ಗುಡಿಯಾಗಿ ಬೇವ ದ
ಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತೆರಡುಂ ಬಲಂಗಳೊಳ್ ೯೭

ಪರನಾರೀನಯನೋತ್ಪಲಂ ಮುಗಿವಿನಂ[2]ದುರ್ಜೇನ[2] ವಿದ್ವಿಟ್ತ್ರಮುಂ
ಪರೆಯುತ್ತಿರ್ಪಿನೆಗಂ ನಿಜಾಶ್ರಿತಮಹೀಲೋಕಾವಲೋಕಕ್ಕೆ ಬಿ
ತ್ತರದಿಂ ಸತ್ಪಥವರ್ತನಂ ನೆಗಳ್ವಿನಂ ತೇಜಃಪ್ರತಾಪಪ್ರಭಾ
ಕರನುದ್ಯೋತಿಸಿದಂ ನಿಜಾಭ್ಯುದಯದೊಳ್ ಸಾಹಿತ್ಯ[3]ರತ್ನಾಕ[3]ರಂ ೯೮

ಇದು ಪರಮಜಿನಸಮಯ ವನವಸಂತ ಸಂತಾನಾರಾಮ ರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣ ಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತನಾಥ ಪುರಾಣದೊಳ್
ಪುರುಷೋತ್ತಮಕಥಾವತಾರಂ
ಏಕಾದಶಾಶ್ವಾಸಂ
ಸಂಪೂರ್ಣಂ

---

1 ಜಿಬಾಯುಗಿಲು ಸಿಂಕಿ (ಅಇಉ) 2 ತುರ್ಜೆದರ್ (ಅಇಉ) ,
3 ವಿದ್ಯಾಥ (ಎ)

# ದ್ವಾದಶಾಶ್ವಾಸಂ

ಶ್ರೀರಮಣಿಗೆ ನಿತ್ಯನಿಜಾ
ಗಾರಮಿದೆನಿಸುವ ಜಿನೇಂದ್ರಪದಪಂಕರುಹ
ಸ್ಮೇರತೆಯೊಳಾಳ್ದನಧಿಗಮ
ಸೌರಭರುಚಿ[1]ರಂ[1] ವಿನೇಯಜನಮುಖತಿಲಕಂ ೧

ವ|| ಅಂತು ನೇಸರ್ಮೂಡಲೊಡಂ ಮುನ್ನ ಮೂಡಿರ್ದ ವಿರಹಪರಿತಾಪಂ ತೀರದೆಯುಮೇತಱಿಂ ಳಮಾ ತಳೋದರಿಯನೊಡಂಬಡಿಸಲ್ಬಾರದೆಯುಮಾ ಕಿತವಂ ತನ್ನ ಕೈತವದೊಳ್

ಪತಿಯಿರೆ ಪಿಂಗದಾಸೆ ಮನದೊಂದಱಯಾಸೆಯಿನೆನ್ನನೊಲ್ಲಳೀ
ಸತಿಯಿ[2]ರವಂ[2] ಮುರಳ್ಚಿದಪೆನೆಂದು ಬೆಸಂಗುಡೆ ಚಂಡಶಾಸನಂ
ಪ್ರತಿಬಳಮೆಯ್ದೆಕೆಟ್ಟುದಱಂದಂ ವಸುಷೇಣನೃಪೇಂದ್ರನೆಂಬ ಸಂ
ಗತಿಯನೊಡರ್ಚಿದಂ ಜನದ ಕಣ್ಬೆರಗಪ್ಪಿನಮಿಂದ್ರಜಾಲಿಗಂ ೨

ವ|| ಆ ವ್ಯತಿಕರಮಂ ಕಂಡು ನಮ್ಮರಸನಿರುಳಿನ ಕಲಿಯ ಕಾಳೆಗದೊಳ್ ಮುತ್ತಿದ ಬೀಡಂ ತೊತ್ತಳದುಱದು ಪಗೆಯ ಪಂದಲೆ ಕೆಯ್ಗೆವಂದುದಿನ್ನೇನಿನ್ನೇನೆಂದು ಕೋಟೆಯೊಳಗೆ ಜನಂ ಕೋಟಲೆಱಿದಂ ನಾಟಕಂ ನಲಿದು ಬೊಬ್ಬಿಱಯುತ್ತಿರೆ ಸುನಂದಾದೇವಿಯಿರ್ದ ಸೆಱ[3]ವನೆಗೆ ತಾನೆ [3]ವಂ[3]ದು

ವಸುಷೇಣನೆ ಪತಿಯೆನಗೆಂ
ದು ಸುನಂದೆ ಸಿಡಿಲ್ವಿನಾ[4]ಡ[4] ಸೋನ್[5]ದಿ[5]ಕೆಯನೀ
ಬಸಿವ ತಲೆಗೆನುತುವಿಾಡಾ
ಡಿಸಿದಂ ಮಾಯಾವಿ ಪತಿಯ ಮಾಯದ ಶಿರವಂ ೩

ವ|| ಅಂತು ತಂದಿಱಪಿದ ಶಿರಮುಮಂ ಕಳ್ದು ತಱದ ವಲ್ಲಭನ ಮಣಿ ಮಕುಟ ಕೇಯೂರಮಂಡಳಾದೀಪನಮಂಡನಮುಮಂ ಪೇರುರದೊಳೋರಂತೆ ಮೆಱ[3]ವ ತೋರ ಮುತ್ತಿನ ಹಾರಮುಮಂ ಕಾಣಲೊಡಂ

---

1 ಯಂ (ಅಇಉ) 2 ವಳಂ (ಅಇಉ) 3 ಬಂ (ಎ) 4 ಟ್ಟಿ (ಅಇ) 5 ಡಿ (ಅ)

ಹೃದಯದೊಳಿರ್ದ ವಲ್ಲಭನನಾಕ್ಷಣ ಭೀತಿಯಿನೀಕ್ಷಿಪಂತೆ ಮು
ಚ್ಚಿದುವಲರ್ಗಣ್ಬೊಣರ್ತಡವಿನೋಡುವವೋಲ್ಕುಚಮಧ್ಯದಲ್ಲಿಗಾ
ದುದು ಕರಪಲ್ಲವಂ ಸರಮನಾಲಿಸುವಂತೆ ಮೊಗಂ ಮಲಂ[1] ಗಿತಂ[1]
ಗದೊಳಿರ್ದೆ ಶೂನ್ಯಮಾಗಱಿಸುವಂತಸು ಪೋಯ್ತುಸಿತಾಬ್ಜನೇತ್ರೆಯಾ ೪

ಬಱಿಯಟ್ಟೆ ಬಂದು ಮುನ್ನಂ
ಪುಱುವಗೆಗೊಳಗಾದಳೆಂದು ಸಾವಾಸಿಗಳಂ
ಕಱುಪಿದನಲ್ಲಂ ತಲೆಯಂ
ಬಱಿಯಟ್ಟಿದನೆಂದು ಪೋದುದಸು ಶಶಿಮುಖಿಯಾ ೫

ಇನಿಯನಿರೆ ನೋಡೆ ಮತ್ತೊ
ರ್ವನ ಕಣ್ಗಂ ಬಗೆಗಮೊಪ್ಪಿದಪ್ಪುದು ಸುಡಲೀ
ತನುವನಿದನೆಂದು ಜೀವಂ
ಮುನಿದಂತಿರೆ ಬಿಟ್ಟು ಪೋಯಿತಸು ಶಶಿಮುಖಿಯಾ ೬

ವ॥ ಆಗಳಾವ್ಯತಿಕರಮಂ ಕಂಡತಿಚಕಿತಹೃದಯನುಮಾಕುಳಿತವಿಳೋಕನುಮಾಗಿ

ಸ್ಮರನೊಳ್ದಾಯಿಗನಾಗಿ ಬೆಂದ ವಿಧಿಯೊಂದಂ ಮಾಡಿದಂ ಕೂಡುವೆಂ
ಬೆರಗಿಂ[1]ದೆಂ[2]ದಿದನಿಂತು ಮಾಡೆ ಮರಣಂ ಮೂಡಿತ್ತು ಹೋ ಬೆಂದೆನಾ
ನುರಿದೆನ್ನಂದಿದೆನೆಂದು ಬಂದು ಭರದಿಂ ತಱ್ಕೈಸೆ ತಳ್ತಂತು ತ
ತ್ತರುಣೀಗಾತ್ರದ ಸೋಂಕು ಸಮ್ಮನಿಸೆ ಮೂರ್ಛಾಪನ್ನನಾದಂ ಖಳಂ ೭

ಅವನಂ ಚಾಮರದಡಪದ
ಡವಕೆಯ ಕೀಲ್ಬಾಳಳದಂಗನೆಯರ್ಬೀ
ಸುವ ಬಿಜ್ಜಣಿಗೆಯ ಮಳಯಜ
ನವಜಳಕಣದೆಲರ ಸೋಂಕಿನಿಂ ನಿಲೆ ಪಿಡಿದರ್ ೮

ವ॥ ಅಂತು ಮೂರ್ಛೆಯಿಂದೆಚ್ಚತ್ತು ಬೆಚ್ಚನೆ ಸುಯ್ದು ಬೆದೆಬೆದೆ ಬೆಂದು ನೊಂದು ನಿಂದಿಸಿಕೊಂಡು ಮಾಣದೆ

---

1 ಗೆಯಂ (ಸೂಸು) 2 ದಿಂ (ಅಱಲು)

ನೋಡಿ ಕನಲ್ದು ಬಾಯ್ಮುನಿದು ಮೋನದಿನೇಕೆಲೆ ದೇವಿ ನೀಮ್ಮನಂ
ನೋಡುವೆ ಸಾವಿ[1]ನಂ[1] ಸರಸವಾಡುವ[2]ರೇ[2] ಮಱುಮೆಯ್ಯೊಳಾದೊಡಂ
ಕೂಡದೆ ಮಾಣೆನಬ್ಜದಳಲೋಚನೆ ನಿನ್ನೊಡನೆಂದು ಮೆಯ್ಗೆ ಮೆ
ಯ್ಗೂಡುವೆ ಧೂಮಸೌಧಗೃಹದೊಳ್ ಶಿಖಿಪಲ್ಲವರಾಗತಲ್ಪದೊಳ್ ೯

ವ || ಎಂದು ಬಾಯಱದು ಪಱಯಿಸಿ ಬಸಮಱದಸುವೊಱ[3]ತಿಯಾಗಿ ಮನಮ
ನಱದು ಕಳವಳಿಸಿ

ಎನಗಿನ್ನೋಲಗಸಾಲೆಯೇಕಿದು ವಿಮಾನಂ ನಂದೆಯಂ ಲೋಲಲೋ
ಚನೆಯಂ ಕುಳ್ಳಿರಿಸಿಲ್ಲಿ ಕೂಡೆ ಬಱಸಲ್ವಂತಃಪುರಸ್ತ್ರೀಯರಾ
ಕ್ತನಮಂ ತೋಱುವ ಲೆಂಕರೊಳ್ನುಡಿಯವೇಟ್ಬದ್ಯಾಜನಂ ಬರ್ಕೆ ಚಂ
ದನಗಂಧಾವಿಧದಿಂದಮೆನ್ನ ವಿರಹಜ್ವಾಲಾಗ್ನಿಯಂ ನಂದಿಪೆಂ ೧೦

ವ || ಎಂದು ತನ್ನಲಕ್ಷ್ಮೀಭವನಮೆನಿಸುವುಪರಿಮಂಡಪಮನೆ ಚಿತ್ತಕ್ಕೆ ಮಾಡಿ
ಸುನಂದಾದೇವಿಯುಂ ತಾನುಮೇಕಾಸನದೊಳ್ಕುಳ್ಳಿರ್ದು ರಾಣಿಯವಾಸದ ಪೆಂಡವಾಸದ
ಭಾಷೆಯ ಲೆಂಕರ ಭಾರತಿಕನಿಕರದೋಲಗದ ಕೇಳೀವಿಳಾಸಮುಂ ಕೆಳಗೆ ತಗುಳ್ಚಿದ ಹುತ
ವಹಜ್ವಾಲಾಕಲಾಪಮುಂ ಮೆಚ್ಚಿದಂತೆ ಮೂರ್ಛೆಗೊಳ್ವಿನಮೊಡನಱಯಲ್ಪರಿಚ್ಛೇದಿಸಿದ
ಕುಲಸ್ವಾಮಿಯವಸಾನ ಸಮಯಮಾಗೆ

ಊದುವ ಕಾಳೆ ವೀರವಱತಿಯೆತ್ತುವ ಪುಷ್ಪಕಮೊರ್ವರೊರ್ವರಂ
ಮೊದಲೆಗೆಯ್ವ ಸೂಳ್ನೆರೆದವಂದಿಗೆ ಸಬ್ಬವಮುಪ್ಪ ಭಾಗವೊ
ಲ್ದೋದಿಪ ಗಾಹೆ ಪಾಡೆ ಪದಮುಂ ಪೊಸಮಾವಿನ ಹೊನ್ನಪಚ್ಚಮುಂ
ದಾದುರಿ ಚಂಡಶಾಸನನ ಬಾ[3]ಸೆ[3]ಯ ಲೆಂಕರ ಕೇರಿಕೇರಿಯೊಳ್ ೧೧

ವ || ಅದಲ್ಲದೆಯುಂ

ತುಡುಗೆಯನಾಯ್ದುಕೊಂಡುಱದವಂ ಸಖಿಯರ್ಗಿರವೇಟ್ದಬಂಧುಗ
[4]ಳ್ಕೊಡದಿ[4]ರೆ ಮೋಹಮುಂ ಬಿಡಿಸುವಾಶ್ರಿತರ್ಗಾದೆಡರಂ ಕಱಲ್ಚಿ ಬೀ
ಱ್ಕೊಡಿಸುವ ಪೊನ್ನ ಮಾಣಿಕದ ಬಾಯಿನಮುಂ ಸಮಕಟ್ಟುವಟ್ಟಿ ಬಂ
ದೊಡೆ [5]ಮಿ[5]ಡಿಹಾರವಿಮಾವಳವಿಯಚ್ಚರಿಯಾದುದು ಪೆಂಡವಾಸದೊಳ್ ೧೨

ವ || ಅಂತುಮಲ್ಲದೆ ತಂತಮ್ಮ ಮನದ ಮಚ್ಚರದ ಮಚ್ಚಿನ ಕಾದಲ್ಮೆ ಮೊದಲ್ಮೆ
ಯಾಗಿ ಕೈಗೆಯ್ದುಮೆಯ್ಗೆಯ್ಯದೆ ಪರಿಚ್ಛೇದಿಸಿ ಪೊಱಮಟ್ಟು ನೆಱೆ[3]ದಂತಃಪುರಪುರಂಧ್ರಿಯ

1 ನಿಂ (ಅಇ) 2 ರೀ (ಅ) 3 ಲೆ (ಅಇಉ)
4 ಳ್ದೊಡರ್ದೆ (ಅಇಉ) 5 ಹಿ (ಅಇಉ)

ರೊಳಗೆ ತನ್ನಕುಚಕುಂಭದಂತಿರುದ್ವೃತ್ತತೆಯುಂ ಒಲ್ಲೊಲವಿನೊಳುನ್ನತ್ತಿಯಾದ ಮಾನಿನಿಯಿಂತೆಂದಳ್

ನಗೆಗಂ ನಾ[1]ಣ್ಚು[1]ದೆ ನಮ್ಮನೊಲ್ಲದೆ ಪರಸ್ತ್ರೀಗೊಲ್ದವಳ್ಸತ್ತೊಡಾ
ಕೆಗೆ ತಾಂ ಪ್ರಾಣಮನಿತ್ತಪಂ ಗಡರಸಂ ನೋಡಕ್ಕ ಮಾವಿಂಗೆ ಮ
ಲ್ಲಿಗೆಗಳ್ಸೊರ್ಕಿತೊಡೆ ಮಾವು ಕೂರ್ತುದು ವಸಂತಶ್ರೀಗೆನಿಪ್ಪಂತೆ ಲ
ಜ್ಜೆಗೊಡಲ್ನಮ್ಮಳಿವೋಪದಿನ್ನು ಟೀವಿದಕ್ಕೇಗೆಯ್ವಮಬ್ಜೇಕ್ಷಣೇ ೧೩

ವ॥ ಆ ಮಾತಂ ಮಾರ್ಕೊಂಡು ಕುಲವತಿಯುಂ ಶೀಲವತಿಯುಮೆನಿಸಿದ ವಿದಗ್ಧೆಯೊರ್ವಳಿಂತೆಂದಳ್

ಪೞಗೇವಯ್ಸುವ ಪಾಪಮೆಂಬ ಪೆಱವೆಣ್ಗಾಟಪ್ಪುದಾ ಮಾಯದೊಂ
ದೞವೆಂ[2]ಬೋಜೆಯಧೀಶವೃತ್ತಿ[2]ಯಧಿಪಂಗೇನಾದುದಾದಲ್ಲಿ ಮೆ
[3]ಯ್ಸೆೞ[3]ಲಂತಪ್ಪುದು ನಮ್ಮ[4]ವೃತ್ತಿ ನಮಗಿ[4]ನ್ನಾ ಮಾತದೇಕೆಂದು ಪಿಂ
ದುೞವೊಂದಾಸೆಯನೊಲ್ಲದೆಯ್ದೆ ನೆಱಪಿತ್ತಂತಃಪುರಸ್ತ್ರೀಜನಂ ೧೪

ವ॥ ಅಂತು ತಮ್ಮೊಳ್ತಱಸಂದು

ಪ್ರಾಣೇಶ್ವರನೊಳ್ ಮನ್ನಣೆ
ಗಾಣೆಗೆ ಗೋಸನೆಗೆ ಸೂಟಿಪಾಟಿಗೆ ನಮ್ಮೊ
ಳ್ಮಾಣಬೆ ಮಚ್ಚರಿಪಂತಿರೆ
ಹೂಣಿಸಿ ಮುಂಚಲ್ಕೆ[5]ವೇಟ್ಕುಮೊ[5]ರ್ವರಿನೊರ್ವರ್ ೧೫

ವ॥ ಅದಲ್ಲದೆಯುಂ

ಪ್ರಮದವನಂಗಳೊಳ್ತರುಲತಾವಳಿಗಂಚೆಗೆ ಕೋಕಿಳಕ್ಕೆ ವಿ
ಶ್ರಮಿಸುವ ತಣ್ಪುಟಿಲ್ಗೆ ಕೃತಕಾದ್ರಿಗೆ ಕೋಡುವ ಪೂಗೊಳಕ್ಕೆ ತ
ದ್ರಮಣಿಯರಟ್ಟಿ ಕೈಮುಗಿವ ಕ[6]ಯ್ಯೆ[6]ಡೆಮಾಡುವ ಪೊಲ್ಲಕೆಯ್ವುದಂ
ಕ್ಷಮಿಯಿಸಿಯೆಂಬ ಬೀೞ್ಕೊಡುವ ಕೊಳ್ವ ರವೋತ್ಕಟಮಾಯ್ತು ಸಂಕಟಂ ೧೬

ವ॥ ಅಂತುಮಲ್ಲದೆಯುಂ

---

1 ಚ (ಅ ಇ ಉ) 2 ಬನಿಲೆಯಧೀಶಪೃಥ್ವಿ (ಎ) 3 ಯ್ತೊಡ (ಎ)
4 ಬಿತ್ತನಮುಗಿ (ಅ ಇ ಉ) ವೃತ್ತಿಕಮುದಿ (ಎ) 5 ವೇಟ್ಪುದೋ (ಎ)
6 ಯ್ಲ (ಅಇಉ)

ದರಹಾಸಾಮೃತದಿಂದಮೆಮ್ಮ[1]ಕ[1]ರ ಕುಂಭಾಂಭಂಗಳಿಂ ನೀರನುಂ
ಡ ರಸೋದ್ಯತ್ಫಳಪಲ್ಲವಪ್ರಸರದಿಂದೀ ನಂದನಶ್ರೀಗೆ ಸೀ
ಗುರಿಯಾಗಿರ್ದಪಳೀಗಳೆಮ್ಮ ಚಿತಕಾಗ್ನಿಜ್ವಾಲೆಯೊಳ್ಸೀದು ಸೀ
ಕರಿವೋದಪ್ಪಿರೆ ನಾಳಿಕೇರಕದಳೀಪೂಗದ್ರುಸಂತಾನಮೇ ೧೭

ನಿಮ್ಮೊಡನಾಡಿ ನೋಡಿ ಬೞಕೆಮ್ಮುರದೊಳ್ಮೊಲೆಗಳ್ತಗುಳ್ದುವೊ
ಳ್ದೆಮ್ಮ ಮನಂಗಳುಳ್ಳಲರ್ದುವೆಮ್ಮ ಸುಖಂ ಫಳವಾದುದಂತೆ ನೀ
ಮುಮ್ಮುಗುಳಿಂದರಲ್ದುಱುಗಲಿಂ ಫಳದಿಂ ಸಮಸಂದಿರಯ್ಯೊ ಮಿ
ನ್ನೆಮ್ಮರಿಣಂಗಳಿಂದು ಪಱಪಟ್ಟ[2]ಪುವೇ[2] ಸಹಕಾರಷಂಡಮೇ ೧೮

ಕ್ರಮದಿಂ ಕೆಯ್ಯೆಡೆಗೊಟ್ಟೆನೀ ಹರಿಣಿಯಂ ಕೊಂಡಾಡಿಸೀ ರಾಜಕೀ
ರಮನೋವೀಕಳಹಂಸನಂ ಸಲಹು ನೀನೀ ಸೋಗೆಗಾಗೆಲ್ಲನುಂ
ನಮಗಿನ್ನೆಮ್ಮ ಸಮಾನಮೆಂದು ಕೆಲರಾಳೀಜಾಲಮಂ ಬೇಡಿ ತ
ಱ್ತಿಮೆಯಿಂದಂ ಕರೆಗಣ್ಮೆ ಸೂಸಿ ಕಱಿದಳ್ ಕೆಯ್ಯೊಡ್ಡಿ ಕಣ್ಣೀರ್ಗಳಂ ೧೯

ವ॥ ಅಂತು ನಿರಂತ[3]ರಿತಮಾದ[3] ಶೋಕರಸಾವೇಗದೊಳ್

ನೆರೆದುದು ಲೆಂಕತಂಡಮೊಡವಂದುದು ರಾಣಿಯವಾಸಮೊಲ್ದಳಂ
ಕರಿಸಿದನಾ ಧರಾಧಿಪತಿಯೋಲಗಸಾಲೆಗೆ ವಂದುದಾ ತನೂ
ದರಿಯ ವಿಶೇಷಭೂಷಿತಶರೀರಮನೇಕವಿಮಾನಯಾನಮು
ಬ್ಬರಿಸಿದುದಾದುದಿಂತು ಕರುಣಾದ್ಭುತರೌದ್ರರಸಾಕರಂ ಪುರಂ ೨೦

ವ॥ ಅನ್ನೆಗಮಿತ್ತಲ್

ವಸುಷೇಣಂ ಲಗ್ಗೆಮಾಡಲ್ಕೊಗಸಿ [4]ಪೊಗಿಸಿ[4] ದುರ್ಗಕ್ಕಿಭವ್ರಾತಮಂ ಪ
ಣ್ಣಿಸಿ ವಾಹವ್ಯೂಹಮಂ ಪಲ್ಲಣಿಸಿ ಸುಭಟರಂ ಕೈದುಕೊಳ್ವಂತಿರಾ [5]ಘೋ
ಷಿ[5]ಸಿ ರಾಜಾವಾಸದಿಂ ತಾಂ ಪೊಱಮಡುತಮಿದೇಂ ಕೋಟೆಯೊಳ್ಕಾಮಿನೀ[6]ವೀ
ರ[6]ಸಮೂಹೋದ್ರೇಕಶೋಕಾಕುಳಬಹಳರವಂ ತಿಣ್ಣಮಾಯ್ತೆಂದನಾಗಳ್ ೨೧

1 ಧು (ಅಇಉ)  2 ವಲಾ (ಅಇಉ)  3 ರ (ಅಇಉ)
4 ಪೊಸಸು (ಎ)  5 ಳೋಚಿ (ಅಇಉ)  6 ಸಾಥ (ಎ)

ಚರನೆಯ್ತಂದೊರ್ವನಾವೃತ್ತಕಮನುಸಿದೊಡುರ್ವೀಶ್ವರಂ ಪ್ರಾಣನಾಥಾ
ಮರಣೋದಂತಾಭ್ರವಹ್ನಿಸ್ಫುಟಿತಹೃದಯನುಚ್ಛ್ವಾಸನಿಶ್ವಾಸಮೂಢಾಂ
ತರಿತಂ ಬಾಷ್ಪಾಂಬುನಿಷ್ಪಂದಿತನಯನಯುಗಂ ಖೇದದಿಂ ಕೀಲಿಸಿರ್ದಂ
ಕರುವಿಟ್ಟಂತಿರ್ದಮಿ[1]ಟ್ಟ[1]ರ್ಬರೆದು ಕರಿಯ ಮೇಲಿಟ್ಟರೆಂಬಂತಿರಿರ್ದಂ ೨೨

ವ॥ ಅಂತು ಕಿಱಿದು ಬೇಗಮಿರ್ದಂತೆಂತಾನುಂ ತನ್ನ ತಾನಱಿದು ಬಾಯ
ೞಿದುದಾಕಾಶವಚನನಿಂತೆಂದಂ

ಆನೞಿದೆನೆಂದು ಪುಸಿದೊಡೆ
ಮಾನಿನಿ ನೀಂ ಕೞಿದೆ ನಿನ್ನ ಸಾವನೆ ಕಂ[2]ಡೆಂ[2]
ತಾನುೞಿದೆಂ ನಿರ್ಲಜ್ಜರ್
ದೀನಕೃಪಾಣರ್ ಕೃತಘ್ನರಾರೆನ್ನಿಂದಂ ೨೩

ವ॥ ಅನಂತರಂ ಪಾರ್ಷ್ಣಿಕಗ್ರಾಹಕನಾಗಿ ತನ್ನಂ ನೆಮ್ಮಿಸಿಕೊಂಡಿರ್ದ ದಯಿತ
ಸಾಮಂತನೊಳಿಂತೆಂದಂ

ಇನಿಯಳ್ ಪೋದ ಬೞಿಕ್ಕಮೆನ್ನಿರವು ತಾರಾಮಂಡಲಂ ಪೋದ ಲೋ
ಚನಮಿರ್ಪಂತೆ ಸುಗಂಧ ಪೋದ ಕಳಿವೂವಿರ್ಪಂತೆ ತೀವಿರ್ದ ಜೀ
ವನಮೆಲ್ಲಂ ನೆಱೆ[3]ಪೋದ ಹೊಟ್ಟುಗೆಱೆ[3] ತಾನಿರ್ಪಂತೆ ದೈನ್ಯಕ್ಕೆ ಭಾ
ಜನಮಿರ್ದೇನಸುವೋದ ಬಾೞ್ವಿಣಸಿ[3]ದೇನ್ನಾನಿರ್ದೊಡಂ ಬಿಟ್ಟೊಡಂ[3] ೨೪

ವ॥ ಅಂತುಮಲ್ಲದೆಯುಂ

ಇದಱಿ[3]ೞಿವ್ವಲ್ಲಭೆ ಕಾದಿ ಕೊಳ್ವ ಧನನೂ ಪ್ರಾಣೇಶ್ವರೀರತ್ನಮಿ
ಲ್ಲದ ಪಾಳ್ಗೋ[4]ಟವಿದೇ[4]ಕೆ ಕೋಟಲೆಗೋಳಲ್ಕಾ ಶತ್ರು[5] ಸಾ[5]ಯಲ್ಕಡಂ
ಗಿದಪಂ ತಾಂ ಗಡ ಕೊಲ್ವುದಾರನಕಟೀ ಬೇಳಂಬಮಿನ್ನೇಕೆ ಸಾ
ಯದೊಡಂ ತೀರದೆ ಕಾಯಮಂ ತೊಱೆ[3]ಯ[6]ಲಿನ್ನುಂ[6] ರಾಜ್ಯದೊಳ್ಬಾೞ್ವದೇಂ ೨೫

ಮುನಿಸಯ್ದುಂ ತೆಱದಿಂದ[7]ಮು[7]ಪ್ಪುದದಱಿ[3]ೞಿೊಳ್ ಸ್ತ್ರೀಸಂಭವಂ ತಿಣ್ಣಮಾ
ಮುನಿಸಂ ತಂದನ ಕಂಠಪೀಠತಳದೊಳ್ತಂದಿಟ್ಟು ರಕ್ತಾಂಬುಮ
ಜ್ಜನಮಂ ಮಾಡಿ[8]ಸಿ[8] ಮಸ್ತಕಾಂಬುರುಹದಿಂದಂ ಪೂಜೆಗೆಯ್ದಾಂತೊಡಾ
ತನ [9]ಕೂರ್ವಾಳ್ಕ[9]ರವಾಳ್ದಲುಂ[10]ತು[10] ಮರವಾಳ್ಪಾೞೂರ ವೈಲಾರನಾ ೨೬

1 ಟ್ವ (ಎ) 2 ಡಿ (ಅಇಉ) 3 ದರ್ಶಾನಿರ್ದೊಡೇಂ ಬಿಟ್ಟೊಡೇಂ (ಅಇಉ) 4 ಟಗಡೆ (ಅಇಉ) 5 ರಾ (ಎ) 6 ಕಿಲೀಯುಂ (ಎ) 7 ಲ (ಅಇ) 8 ಸ (ಎ) 9 ಪೂರ್ವಾತ್ಮ (ಎ) 10 ಟಿ (ಎ)

ವ ॥ ಎಂದು ಕೊಕ್ಕರಿಸಿ ಮಾಣದೆ

ಏಱಿ ಬರೆಗೊಂಡ ಜೂದುಂ
ಗಾಱನವೊಲ್ ಲಗ್ಗೆಮಾಡಲೊಲ್ಲದೆ ಪಡೆಯಂ
ಸಾಱಿಸಿ ಮುಂ[1]ತಂ[1] ಪಿಂಗುವ
ನೀಱಿಯವೊಲ್ ತೆಗೆಯವೇಟ್ದನಾ ವಸುಷೇಣಂ ೨೭

ವ॥ ಅಂತು ಪರವಿಗ್ರಹದ ಮೇಲಣ ತೋಳ್ವಲಮುಮಂ ನಿಜವಿಗ್ರಹದ ಮೇಲಣ ಬಾಳ್ವಲಮುಮೋಸರಿಸದೆ ಸುತ್ತಿಱಿಂದ ಮುತ್ತಿದ ಬೀಡಂ ತೆಗೆಯಿಸಿ ಮಗುಟ್ದು ಬರ್ಪಾಗಳ್

ಬಿರುದಿನ ಕಾಳೆ ಬಾರಿಸುವ ಬೀರದ ಡೌಡೆ ತೆರಳ್ವ ಕೇತನೋ
ತ್ಕರದ ವಿಡಂಬಮೊಲ್ಲನು[2]ಲಿ[2]ತಪ್ಪ ಚತುರ್ಬಲದುರ್ವು ಕೂರ್ಪಿನಿಂ
ದುರಿವರಿವಸ್ತ್ರಶಸ್ತ್ರಕಿರಣಂ ವಸುಷೇಣನೊಳಾದುವೆಯ್ದೆ ಕೊ
ಕ್ಕರಿಕೆಗೆ " ದುಃಖಿತೇ ಮನಸಿಸರ್ವಮಸಹ್ಯ "ಮೆನಿಪ್ಪ [3]ನೀ[3]ತಿಯಂ ೨೮

ವ॥ ಅಂತು ನಿರ್ವೇಗಪರನಾಗಿ ಮಗುಟ್ದು ಬಂದಸ್ತಂಗತಪ್ರಭೆಯಂತೆ ನಿಜ ಮಂಡಲಮಂ ಪೊಕ್ಕು

ನಡುನಾಡ ತೀರ್ಥಮೆನಿಸ
ಲ್ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂ
ಬಿಡಿದು ನಿಜಕಟಕಮಂ ತಾಂ
ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ ೨೯

ಸಮಭಾಗಂ ಬರೆ ಹಸ್ತಿವಾಜಿಸಹಿತಂ ಭಂಡಾರಮಂ ಪಚ್ಚುಗೊಂ
ಡು ಮಗಂಗರ್ಧಮನಿತ್ತು ಚೈತ್ಯನಿವಹೋದ್ಯಾನಕ್ಕೆ ತಾಂ ಬಂದು ಧ
ರ್ಮಮನುದ್ಯೋಗಿಸೆ ಸಂಯಮೋಪಕರಣಕ್ಕರ್ಹತ್ಪದಾಭ್ಯರ್ಚನ
ಕ್ಕೆ ಮನೋರಾಗದಿನಿತ್ತನಿತ್ತು ಗಜವಾಜಿಸ್ತ್ರೀಸಮಾಜಂಗಳಂ ೩೦

ವ॥ ತದ್ಗಿರೀಂದ್ರವಿಶೇಷಕಮಪ್ಪ ಭುವನಭೂಷಣಜಿನಾಲಯಮಾದಿಯಾಗಿ

ಇವು ಘಟಿಕಾಸ್ಥಾನಂ ಮ
ತ್ತಿವು ತೀರ್ಥಸ್ಥಾನಮೆಂಬ ರೂಢಿಯ ಭಗವ
ದ್ಭವನಕ್ಕಲಂಘ್ಯಮಟಿಲುಂ
ತವೆ ಮುಕ್ಕೊಡೆಯೆತ್ತಿಬಿಟ್ಟನಾ ವಸುಷೇಣಂ ೩೧

1 ದಂ (ಅಇಉ) 2 ರ (ಎ) 3 ಭೀ (ಎ)

ಪಲರುಮವನೀಪಾಲರ್ತಮ್ಮೊಳ್ಸಮಾನಸುಖಂಗಳಿಂ
[1]ಬಳೆ[1]ದ ಕೆಳೆಯರ್ದೀಕ್ಷಾ[2]ಭಾ[2]ರಕ್ಕೆ [3]ಮೆಯ್ಗ ಜಡೆ ತನ್ನಮಾ[3]
[4]ಡಲಘು ಹೃದಯಂ[4] ಸಾರ್ವೇಭೂತತ್ರಯಂ ವಸುಷೇಣನ
ಗ್ಗಳಿಪ ತಪಮಂ ಕೊಂಡಂ ಶ್ರೇಯೋ ಮುಮುಕ್ಷುಸಮಕ್ಷದೊಳ್ ೩೨

ವ॥ ಅಂತಾ ನೃಪಾಲನೊಂದೆ ಮನದೊಳೆತ್ತಿಕೊಂಡ ತಪದೊಳೆರಡುಂ ಪರಿಗ್ರಹಮಂ ತೊಱೆದು ಮೂಱುಂ ಗುಪ್ತಿಯೊಳ್ನೆಱೆದು ನಾಲ್ಕುಂ ಕ್ರೋಧಾದಿಗಳನೊಕ್ಕಯ್ದುಂ ಸಮಿತಿಯೊಳ್ಪೊಕ್ಕು ಆಱುಂ ಕ್ರಿಯೆಗಳೊಳ್ನಿಟ್ಟೆವಟ್ಟೇೞುಂ ಭಯಂಗಳಂ ಬಿಟ್ಟೆಂಟುಂ ಮದಮನುೞಿದೊಂಬತ್ತುಂ ಕಷಾಯಮಂ ಕಳೆದು ಪತ್ತುಂ ಧರ್ಮದೊಳ್ನೆಱೆದು ಪನ್ನೊಂದು [5]ಗುಣಸ್ಥಾನದೊಳ್[5] ನೆಱೆದು ನೆಗೞ್ವ[6]ನ[6]ಗಾರಧರ್ಮಮೂಲಮಾದ ಪನ್ನೆರಡುಂ ತಪೋಮಾರ್ಗದೊಳ್ ಪ್ರಾಯಶ್ಚಿತ್ತಂ ಮೊದಲಾದಭ್ಯಂತರತಪಮನಾಚರಿಸುತ್ತುಂ ಅನಶನಂ ಮೊದಲಾದ ಬಾಹ್ಯತಪಕ್ಕೆ ಪೊಕ್ಕೆಡೆಯೊಳ್ ಸಾಕಾರ ನಿರಾಕಾರಭೇದಮನುಪ್ಪ ಮಾರ್ಗದ್ವಯಮನೆತ್ತಿಕೊಂಡು ಚಾಂದ್ರಾಯಣದೊಳತಂದ್ರನುಮವಮೋದರ್ಯದೊಳವಾರ್ಯನುಂ ಆಚಾಮ್ಲವರ್ಧನದೊಳನುವರ್ಧನನುಂ ಸಿಂಹನಿಃಕ್ರೀಡಿತದೊಳ್ಪೀಡಿತೇಂದ್ರಿಯನುಮಾಗಿ

ಗಿಡಿಗಿಡಿಜಂತ್ರಮಿದೆನೆ ತ
ನ್ನೊಡಲುಂ ಉನ್ಮೀಲನೇತ್ರಮೆನೆ ತನ್ನ ಮೊಗಂ
ಗುಡಿಯುಂ ತಪದಿಂ ಕ್ಷಪಿಯಿಸಿ
ಕಡುಬಡತನದಂದಮಾದನಾ ಮುನಿಮುಖ್ಯಂ ೩೩

ಲಲನಾವಿಯೋಗಹೇತು
ಚ್ಚಲಮೆರ್ದೆಯೊಳ್ನಟ್ಟ ಶೂಲದಂತಿರೆ ತಪದಿಂ
ಗೆಲೆ ಜೀರ್ಣಮಾಗೆ ತನು ಕೂ
ರಲಗಿನ ಪೞ[7]ದೊವಲೊಲಿ[7]ರ್ದನಂತಾ ಮುನಿಪಂ ೩೪

ವ॥ ಅಂತು ತಪಸ್ತಪ್ತಶರೀರನಾಗಿ ನಿಜಾಯುರವಸಾನದೊಳೊಂದು ತಿಂಗಳ್ವರಂ ಮರುಮಂಡಲದಂತಿರನಶನಕ್ಷೇತ್ರನಾಗಿ ನೋಂತು ಕಡೆಯೊಳೆನ್ನ ತಪದ ಫಲಮುಂಟಪ್ಪೊಡಾನನ್ಯಜನ್ಮದೊಳಾರ್ಗಮಜೇಯನುಮತಿಸುಭಗರೂಪಸೌಂದರ್ಯನುಮ...ಪದ್ಮಾವಲ್ಲಭಜ್ಯಾಯನುಮಾಗಿ ಪುಟ್ಟುವನಕ್ಕೆಂದು ನಿಶ್ಚಯಿಸಿ ...ರ್ಗಂಡಂತೆ ಮೆಱೆ

1 ನವಿ (ಎ) 2 ಚಾ (ಅಇಉ) 3 ಬಂದುಕೂ
(ಇಉ) 5 ನೆಲೆಯೊಳ್ (ಎ) 6 ಸಾ (ಅಇಉ) ಲಿಸಿ (ಎ) 4 ತೋ
ದೋಜೆ[?]ಪೋಲಿ (ಎ)

ತೋಱಿ ನಟೆಯಿಸುವ ಚೋಹಮ
ನೇಱಿಸಿ ಕೊಳ್[1]ಲಿ[1]ದರ್ ಚೋಹ[2]ದು[2]ದ್ದೆಸದಿಂದಂ
ಜಾಱಿಸುವಂತಿರೆ ತಪದಿಂ
ತಾಱಿದ ತನುವಂ ನಿಧಾನದಿಂ ಮುನಿ ಬಿಟ್ಟಂ ೩೫

ವ || ಅಂತು ಮುಡುಪಿ

ಕಟ್ಟಿತನಾರ್ಗಂ ಕಳೆಯ
ಲ್ಕೆಟ್ಟನೆ ಬಾರದವೊಲಂತು ನೆಗಟ್ದುಗ್ರತಪಂ
ಕಟ್ಟಿದ ಪುಣ್ಯದ ಫಳದಿಂ
ಪುಟ್ಟಿ ಸಹಸ್ರಾರಕಲ್ಪದೊಳ್ಸುರನಾದಂ ೩೬

ಮದನೋದ್ದೀಪನಪಿಂಡದಿಂ ಕಡೆದರೋ ಕಣ್ಣಿಟ್ಟರೋ ಚಂದ್ರಬಿಂ
ಬದ ಸೌಂದರ್ಯದೆ ಬಣ್ಣಮಿಟ್ಟರೊ ವಸಂತಶ್ರೀವನಾಮೋದಸಾ
ರದಿನೆಂಬಂತಿರೆ ಕಂಪು ಸೊಂಪು ಸೊಬಗಿಂಪಂ ಪೆತ್ತ ವೃಂದಾರಕಂ
ಪದಿನೆಂಟಬ್ದಮಿತಾಯು ನಾಲ್ಕುಮೊಟನುದ್ದಂ ಕೂಡೆ ಕಣ್ಗೊಪ್ಪಿದಂ ೩೭

ತೆಱೆದುವು ಮುನ್ನಮಿಕ್ಕಿದ ವಿಮಾನದ ಮುಚ್ಚುಳಲಂಪಿನಿಂದೆ ಬಂ
ದೆಱಗಿದರಪ್ಸರಪ್ರಮದೆಯರ್ಪರಿಚಾರಮಹತ್ತರಾಮರರ್
ಪೊಱಗೊಳಗೆನ್ನದೋಲಯಿಸಿದರ್ದಶಭೇದದ ಕಲ್ಪವೃಕ್ಷಮಾ
ಗೊಱುಕೆಯನೀಯಲಾಟಿಸಿದುದಾ ವಸುಷೇಣಚರಾಮರೇಂದ್ರನಾ ೩೮

ಪದಿನೆಣ್ಬಾಸಿರವರ್ಷಮಾದೊಡುಣಿಸಂ ಭಾವಿಪ್ಪನೊಂಬತ್ತು ಮಾ
ಸದಿನುಚ್ಛ್ವಸಿಸುವಂ ಶ್ರವಸ್ಸುಭಗಲೀಲಾಲಾಪಸಮ್ಮಿಶ್ರದಿಂ
ಮದನೋನ್ಮಾದಸುಖಂಗಳಿಂದೆ ನಲಿವಂ ವಾಚಪ್ರವೀಚಾರನಾ
ತ್ರಿದಶಾವಾಸವಿಳಾಸದೊಳ್ತಣಿವ ರೂಪಾದಂ ಸಹಸ್ರಾರಜಂ ೩೯

ನವರತ್ನವಿಮಾನಚ್ಛವಿ
ದ್ವಿವಮಂ ಬಾಸಣಿಸೆ ಧವಳತನುರುಚಿಯಿಂ ವಾ
ತ್ಸ್ರಿವು ತಿಾಪದ ಮಂಡಪದೊಳ್
ದ್ಭವನಕ್ಕಲಱರ್ಪಂತಿರಿರ್ದನಾ ದಿವಿಜೇಂದ್ರಂ ೪೦
ತವೆ ಮುಕ್ಕೊಽ

1 ದಂ (ಅಇಉ) 2 ಮ (ಎ) 3 ವೊಲ್ದ (ಎ)

ಪಾಡುವ ಸುರಗಣಿಕಾಜನ
ಮಾಡುವ ದೇವಾಂಗನಾಜನಂ ಭಾಜನೆಯಂ
ಮಾಡುವಮರೀಜನಂ ತೇಂ
ಕಾಡಿಸುವುದು ರಾಗರಸದೊ[1]ಳವುರನ[1] ಸಭೆಯಂ ೪೧

ವ॥ ಅಂತಾ ದೇವಂ ದೇವಲೋಕಸುಖಾನುಭವಸುಧಾಂಬುಧಿಯೊಳೋಲಾಡುತ್ತುಮಿರ್ದಲ್ಲಿ ತನ್ನಿಂ ಮುನ್ನಂ ಪ್ರತೀಂದ್ರನಾಗಿ ಪುಟ್ಟಿರ್ದ ಮಹಾಬಲಚರಾಮರೇಂದ್ರಂ ಪ್ರಾಕೃತಜನ್ಮದೊಳ್ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ವತ್ಸಕಾವತೀವಿಷಯದೊಳಾನಂದಪುರಮನಾಳ್ವ ಮಹಾಬಳನೆಂಬ ಮಹೀವಳಯುವಲ್ಲಭನಾಗಿರ್ದು

ರಸೆಗೆಲ್ಲಂ ಶ್ರೀಪ್ರಭಾಪಾಲನ ಜಿನರ ಸಭಾನವ್ಯದಿವ್ಯಾಂಬುದಂ ಧ
ರ್ಮಸುಧಾಂಭೋವರ್ಷಮಂ ಮಾಣದೆ ಕಱೆವೆಡೆಯೊಳ್ ತನ್ನ ಹೃಚ್ಛಾತಕಂ[2]ಸೇ[2]
[3]ವಿಸೆ[3] ಸಮ್ಯಕ್ತ್ವತ್ತ್ವಮಂ ನಿರ್ಮಲಘನರಸಮಂ ನಿರ್ಭರಾನಂದದಿಂ[4]ದಾ[4]
ಱಿಸಿ ಕೊಂಡತ್ತಂಗಭೋಗಾವನಿಚರಣತೃಷಾ [5]ಪೀಡೆಯಂ ಕ್ರೀ[5]ಡೆಯಿಂದಂ ೪೨

ವ॥ ಅಂತು ತಿಳಿದ ತತ್ವವಿಚಾರಂ ಸಂಸಾರಮನಸಾರಂ ಮಾಡೆ ನಿರ್ವೇಗಪರನಾಗಿ

ಈತನಿಂದು ತೊಱೆದಂ ಭವದಿಂದಂ
ಜಾತರೂಪಧರನಾದನೆನುತ್ತುಂ
ಭೂತಳಂ ನುಡಿಯೆ ನಿಶ್ಚಲಚಿತ್ತಂ
ವೀತರಾಗಮುನಿಮಾರ್ಗಮನಾಂತಂ ೪೩

ವ॥ ಅಂತು ಶೀಲಗುಣವ್ರತಾಚಾರಂಗಳುತ್ತರೋತ್ತರಮಾಗೆ ಸಿಂಹನಿಃಕ್ರೀಡಿತಾದ್ಯುಗ್ರೋಗ್ರತಪದೊಳ್ನೆಗಟ್ಟಿ ಕಾಲಾಂತರದೊಳೊಂದು ತಿಂಗಳ್ ಸನ್ಯಸನ ವಿಧಿಯಿಂ ದಂಡಿತಕರಣನಾಗಿ ಪಂಡಿತಮರಣದಿಂ ಮುಡುಪಿ ರತ್ನದಂತಿರಾಕಲ್ಪದೊಳುದಯಿಸಿರ್ದನಾ ಮಹಾಬಳಚರೇಂದ್ರನುಮಿತರೇತರ ಪ್ರೀತಿಯಿಂ ಸಮನಿಸಿದ ಸೌಹಾರ್ದದೊಳ್ ದೇವಲೋಕಶೇಖರರಾಗಿರ್ದರ್. ಇತ್ತ ಜಂಬೂದ್ವೀಪದ ಭರತಕ್ಷೇತ್ರದೊಳಖಿಳಸುಖಮುಖದ್ವಾರಂ ದ್ವಾರಾವತೀಪುರಂ ಪುರಂದರಪುರೀವಿಳಾಸಮಂ ಪೆಸರ್ಗೊಂಡಂತೆ ಮೆಱೆದಿರ್ಪುದಲ್ಲಿ

1 ಳಾಸುರ (ಎ) 2 ಸ (ಎ) 3 ಲಿಸಿ (ಎ) 4 ತೋ (ಅಇಉ) 5 ಕ್ರೀಡೆಯಿಂ ಪೀ (ಅಇಉ)

ಸುರರಾಜರ್ಪದಿನಾಱು ಕಲ್ಪದವರ್ಗಂ ಸ್ತ್ರೀರತ್ನಮಂ ಸಾರ್ಚುತಿ
ರ್ಪಿರವಿಂ ಮನ್ಮಥಸೃಷ್ಟಿಯಂತೆಸೆವ ಮಾಹೇಂದ್ರಾಗ್ರದಿಂ ಬಂದ ನಿ
ರ್ಜರನಾ ನಿರ್ಜರೆಯರ್ಜಯಾವತಿಯುಮಂತಾ ಸೀತೆಯುಂ ಪೆಂಡಿರಾ
ಗಿರೆ ತೇಜಃಪ್ರಚುರಪ್ರಭಂ ಧರೆಯನಾಳ್ದಂ ಸಂದ ಸೋಮಪ್ರಭಂ ೪೪

ತನುಮಯ್ವತ್ತೊಂದು ಬಿಲ್ಲುದ್ದದ ತನು ಬರೆಯಲ್ಬಚ್ಚಿಸಲ್ಬಾರದಾ[1]ಯು
ಷ್ಯನಿ[1]ಬಂಧಂ[1] ನಾಲ್ವತೆಣ್ಬಾಸಿರ ಬರಿಸಮದಂತೇಕೆನಲ್ಬಾರದಾ ಭೂ
ಪನ ಶೌರ್ಯಾಟೋಪಮಾ ಭೂಪನ ಭುವನಜನೋದ್ಧಾರಕತ್ಯಾಗಮಾ ಭೂ
ಪನ ಸತ್ಯೋದಂತಮಾ ಭೂಪನ ಸಕಲಗುಣಂ ಬಣ್ಣಿಸಲ್ಬಾರದಾರ್ಗಂ ೪೫

ವಿತತೋರಸ್ಸ್ಥಳವಕ್ತ್ರಪಂಕರುಹದೊಳ್ತಮ್ಮಿರ್ವರುಂ ಶ್ರೀಸರ
ಸ್ವತಿಗಳ್ಗಣ್ಬಳವಟ್ಟ ವೀರವಿಜಯಶ್ರೀಭಾಮೆಯರ್ಸಂದ ದೋ
ರ್ದ್ವಿತಯಸ್ತಂಭದೊಳೆಂಬಿನಂ ಮೆಱೆದು ತನ್ಮೊಂದಾನುಕೂಲ್ಯಂ ಜಯಾ
ವತಿಯುಂ ಸೀತೆಯುಮಿರ್ಪಿನಂ ಸೊಬಗನಾಳ್ದಂ ತಾಳ್ದಿ ಸೋಮಪ್ರಭಂ ೪೬

ಎರಡುಂ ಪಕ್ಕದೊಳೊಪ್ಪೆ ಕಲ್ಪಲತೆಗಳ್ಕೈಕೊಂಡ ಮಂದಾರಭೂ
ಮಿರುಹಂ ತಾನೆನೆ ಪೂರ್ವಜನ್ಮಜನಿತಸ್ನೇಹಂಗಳಿಂ ಬಂದ ಷ
ಟ್ಚರಣಾಲೋಲ ವಿನೀಲಕುಂತಳೆಯರಿರ್ವರ್ಲೀಲೆಯಿಂದೊಪ್ಪೆ ಮೂ
ರ್ತಿಯುಮಂ ತಾಳ್ದಿದ ಕಾಮದೇವನಲರ್ವಿಲ್ಲಂತಿರ್ಪನಾ ಭೂಭುಜಂ ೪೭

ವ|| ಆ ಪ್ರಚಂಡಮಂಡಲವಲ್ಲಭನಾ ವಲ್ಲಭಾದ್ವಿತಯಸಮೇತಂ ನಾಕಲೋಕಾನೇಕ ಸುಖ[2]ಮೆ[2] ಬೆಂಬೞಿಬಂದಂತಿರಾದ ರಾಜ್ಯಸುಖದೊಳಿಷ್ಟವಿಷಯಕಾಮಸುಖಭೋಗಸಂಪದಮನನುಭವಿಸುತ್ತುಮಿರೆಯಿರೆ

ಏತೆಱದಿನೆಂದುಮಱಿಯೆಂ
ಸೀತಾದೇವಿಗೆ ತನೂಜದೋಹಳಚಿಂತಾ
ಪಾತಂ ತಂದುದು ಘರ್ಷಿತ
ಜಾತೀಮಾಳಿಕೆಯ ದೊರೆಗೆ ತನ್ಮಾಳಿಕೆಯಂ ೪೮

ಪದೆದಮರ್ದಪ್ಪಿಕೊಂಡು ಬಿಗಿಯಪ್ಪಿ ತನೂಜನ ಮೆಯ್ಯ ಧೂಳಿ ಪ
ತ್ರದ ನಳಿತೋಳ್ಗಳೇಕೆ ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ
ಪುದಿಯದುರೋಜಮೇಕೆ ಪರಿಚುಂಬಿಸೆ ಕಂದನ ಕೈದೊಡಂಕೆ ಸೂ
ಸದ ಕುರುಳೇಕೆ ಬೇಱೆ ಪೊಱೆಯೇಕಿವಱಿಂ ಕುಲವೆಣ್ಗೆ ಲೋಕದೊಳ್ ೪೯

---

1 ಗರ್ಂತ (ಅಇಉ) 2 ಮೇಲೆಯಿಂವಂದು (ಎ)

ಮುಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ ಮೆ
ಲ್ಲಗೆ[1]ಯಿಂ[1] ಮುದ್ದುಮೊಗಂ ತುಳುಂಕೆ ಪರಸುತ್ತುಂ ನೋಡಿ ಬಾ ದೇವ ಬಾ
ಜಗತೀವಲ್ಲಭ ಬಾರ ಮಾಣಿಕವೆ ಬಾರೆನ್ನಾನೆಯೆಂದಿತ್ತಿ ಮೆ
ಯ್ಗೆಗೆವನ್ನಂ ಮೊಲೆಯೂಡಿ ತೂಪಿಱುವ [2]ಪುಣ್ಯಂ[2] ನೋನದಳ್ಗಕ್ಕುಮೇ ೫೦

ಅರಸನ ಕರತಳಲೀಲಾ
ಸರೋಜಮಂ ಬೇಡಿಕುಡದೊ[3]ಡೀಸಿ[3] ಕುಡಲ್ಕಾ
ತುರಿಸಿ ಪಿಡಿದೆನ್ನ ತೋಳಂ
ಬರೆತೆಗೆವ ಕುಮಾರನೆಂದು ತೊಡೆಯೇಱಿದಪಂ ೫೧

ಮೊಲೆಯುಣುತುಮುತ್ತರೀಯಾಂ
ಚಲದಿಂದೆ ಮುಸುಂಕಿಕೊಂಡು ಭುಜದೊಳ್ ಬಂದ
ಗ್ಗಲಿಸಿದೊಡಾನಂಜುವೆನ
ವ್ವಲವ್ವಲೆನೆ ನಗುವ ಮುಗನನೆಂದೆತ್ತಿದಪೆಂ ೫೨

ಉದಯಾದ್ರಿಶಿಖರದೊಳ್ಬಾ
ಲದಿವಾಕರನೆಂ[4]ತು ಬರ್ಪನಂತಾ ಕರಿ[4]ಕುಂ
ಭದ ಮೇಲೆ ಬರ್ಪನಂ ಪರಿ
ದಿದಿರ್ಗೊಂಡಣುಗನನದೆಂತು ನಿವಳಿಸಿದಪೆನೋ ೫೩

ಅರಸನುಮಾನುಂ ಕೈಗೊ
ಟ್ಟಿರೆ ದಟ್ಟಡಿಯಿಡುತೆ ಮತ್ತೆ ಮಣಿಕುಟ್ಟಿಮದೊಳ್
ಬರೆ ಪಿಂದೆ ನಿಲಿಸಲೊಲ್ಲದೆ
ಮುರಿದೆತ್ತಿಸಿಕೊಳ್ವ ಕಂದನೆಂದಾದಪನೋ ೫೪

ವ || ಎಂದಿಂತನಂತಚಿಂತಾಕ್ಷುಭಿತಸಂಕಲ್ಪಶರಧಿಕಲ್ಲೋಲತರಂಗಿತಾಂತೆಯಂ ತಾಗಿರ್ದ ವಲ್ಲಭೆಯಲ್ಲಿಗರಸಂ ಬಂದು ಬಾಷ್ಪೋದಬಿಂದುಸಂತಾನದಂತುರಿತಪಕ್ಷ್ಮಾವಳೀ ವಿಳೋಚನಯುಗಳೆಯಂ ಕವೋಷ್ಣನಿಶ್ವಸನಸಂತಾಪಸಂತಪ್ಯಮಾನಪಾಟಳಪ್ರಸೂನಾಯತಪಲ್ಲವಾಧರೆಯುಂ ಚರಣನಖದರ್ಪಣ ಪ್ರೇಕ್ಷ್ಯಮಾಣದೀನಲಪನಪಂಕಜಾತೆಯಂ ಭೋಂಕನೆ ಕಂಡತಿಚಕಿತಚಿತ್ತನಾಗಿ ಮೆಲ್ಲನೆ ಪೊರ್ದಿ ಸಾರ್ದು [5]ತಕ್ಕೈಸಿ[5] ಕಂಬನಿಗಳಂ ತೊಡೆಯೆತ್ತುಮಾಗಳಿಂತೆಂದಂ

1 ಯಂ (ಎ) 2 ಸ್ಯೆಪೇಂ (ಸೂಸು) 3 ಡಿಸಿ (ಅಇಉ)
4 ತೆತೋರ್ಪನಂಕದೊಳಿಭ (ಅಇಉ) 5 ತಕ್ಕಿಸಿಕೊಂಡು (ಅಇಉ)

ದೊರೆವೆತ್ತಿರ್ಪುದು ನಿಮ್ಮ ನಣ್ಪು ಸಪತಿತ್ವಾಭಾವದಿಂದೊರ್ವರೊ
ರ್ವರಜಾತಕ್ಷುಧೆಗೊಂಡು ನಿದ್ರೆಗೊಱಗುತ್ತಿರ್ದಪ್ಪಿದಂತಿಲ್ಲ ಮ
ಚ್ಚರಮಾಂ ನಿಮ್ಮವಿಲೋಕಮಾಗಿ ನಡೆಯುತ್ತಿರ್ದಪ್ಪಿನಂತಿಲ್ಲನಾ
ದರವಿಂತೀ ಪರಿಖೇದಮೇತಱದಿನಾಯ್ತುತ್ತಾನಪೀನಸ್ತನೀ ೫೫

ನೀನಿಂತು ನಿರ್ನಿಮಿತ್ತ
ಗ್ಲಾನಿನಿದಾಘದೊಳೆ ಮಱುಗಿ ಬಱದಾದೊಡೆ ಮ
ನ್ಮಾನಸಮರಾಳಲೀಲೆಗ
ದೇನಾಸೆ ಸರೋಜಕುಮುದದಳಮುಖನಯನೇ ೫೬

ಮೃಗಮದತಿಲಕಕಲಂಕಂ
ಮೊಗಸಿದುದಿಲ್ಲೇಕೆ ನಿಟಿಲಮೃಗಧರಖಂಡ
ಕ್ಕೊಗಸುಗಮದಿಲ್ಲದೇಕೆಲೆ
ಮೃಗಲೋಚನೆ ಬಂದುದಳಕರಾಹುಗ್ರಹಣಂ ೫೭

ವ|| ಅದಲ್ಲದೆಯುಮೀಗಳ್

ಕುರುಳಮದಾಳಿಮಾಳಿಕೆಗದೇಕೊಳಗಾಗವು ಚೆನ್ನಪೂ ಮುಖಾಂ
ಬರುಹದಿನೇಕೆ ಸೂಸದು ಲತಾಂಗಿ ವಚೋಮಕರಂದಮುಂಗುಲಿ
ಸ್ಮರಶರಮುಂಗುಲೀಯಮಣಿರಶ್ಮಿಗಳಿಂ ಗಱಗಟ್ಟವೇಕೆ ಪೀ
ವರಕುಚಕೋಕಮೇಕೆಳಸಲೊಲ್ಲವು [1]ಹಾರ[1]ಮೃಣಾಳನಾಳಮಂ ೫೮

ಬಾಳೆ ನೆಲೆಮೊಲೆಗಳಂ ನೀ
ನೇಳಿಸಿದೆಯಿದೇಕಿವಕ್ಕೆ ತಾಮುಮ್ಮಳದಿಂ
ದಾಳೋಕಮೆಂಬ ಪೊಳೆವೆಳೆ
ವಾಳೆಗಳಿಕ್ಕಿದಪುವಶ್ರುಮುಕ್ತಾಫಲಮಂ ೫೯

ಕರಪಲ್ಲವಶಯನೀಯಂ
ದೊರೆಕೊಂಡುದಿದೆಂಬವೊಲ್ ಕಪೋಳಶ್ರೀಗೀ
ವಿರಹವ್ಯಥೆಯಂ ತಂದುದು
ತರುಣಿಯಿದೇಂ ಸುಭಗಮಕರಿಕಾಪತ್ರಚಯಂ ೬೦

ವ|| ಎಂದು ನೊಂದು ಮನಮಂ ಮುಂತಿಟ್ಟು ಬಹುಪ್ರಕಾರದಿಂ

---

1 ಬಾಲ (ಸೂಸು)

ನುಡಿಯಿಸಿದೊಡೆ ಮತ್ತಿನಿಯ
ಳ್ನುಡಿಯದೆ ಮಱುಮಾತನಶ್ರುವಿಹಿತವಿಲೋಕಂ
ಜಡಭರಿತಕುಮುದದಳಮೆನೆ
ಕಡೆಗಣ್ಣಿಂ ನೋಡಿದಳ್ ವಯಸ್ಯೆಯ ಮುಖಮಂ ೬೧

ವ॥ ಅಂತು ನೋಡಿದ ಕಣ್ಣಱುದಾಕಾಂತೆ ಮಹೀಕಾಂತನೊಳ್ ದೇವರ ದಯೆಯಿಂ ದೇವಿಯರ್ಗಾವುದಱಿಕೊಳಂ ಕೊಱತೆಯಿಲ್ಲ ನಿನ್ನೆ ಬಂದ ನಂದೀಶ್ವರಾಷ್ಟಮಿಯೊಳಷ್ಟಮಲೋಕಚೂಡಾಮಣಿಯ ವಂದನಾಭಿಷವಣಪೂಜಾನಿಮಿತ್ತಂ ಚಾರಣರವತಾರಂ ಮಹೀಧರಕ್ಕೆ ನಿಮ್ಮೊಡನೆ ಬಿಜಯಂಗೆಯ್ದು ಮಗುೞ್ವಾಗಳಾಂಬೆರಸು ಪುಷ್ಪರಥಾರೂಢೆಯಾಗಿ ತದ್ಧರಾಧರದ ಪರಿಸರ ಪ್ರದೇಶದೊಳ್ ಮರಾಳೀಮರಾಳಶಿಖಿನೀಮಯೂರ ಹರಿಣೀಹರಿಣ ಮಹಿಷೀಲುಲಾಯ ಕರಿಣೀಕರೀಂದ್ರ ಸಿಂಹೀಮೃಗೇಂದ್ರ ಕ್ರೀಡೆಗಳಂ ನೋಡುತ್ತು ಬರೆವರೆ

ಕಡೆವಾಯಂ ಬಿರ್ಚಿ ಬೆನ್ನಂ ಕುಸಿದು ನೆಗಪಿ ವಾಳಾಗ್ರಮಂ ಬೇನೆಯಿಂ ಧೂ
ಳಿಡುತುಂ ಶೈಲಾಗ್ರದೊಳ್ಕುಕ್ಕುಱಿಸಿ ಮಱುಕದಿಂದೀಂಬ ಸಿಂಹೀ ಕಿಶೋರಂ
ನಡುಸೂಲೊಳ್ಸಿಕ್ಕಿ ಕಣ್ಣಂ ತೆಱೆದಿಭ[1] ಶಿಶುವಂ[1] ತಾರಲೊಳ್ಕಂಡು ಕಾಯ್ಪಿಂ
ನಡುಪಾಯ್ದಾತಾಯ್ಗೆ ದುಃಖಪ್ರಸವಸಮಯದೊಳ್ತಂದುದಂತೊಂದಲಂಪಂ ೬೨

ವ॥ ಅದಂ ಕಂಡು ನೀಡುಮುಚ್ಚರಿವಟ್ಟು ನೋಡಿ ಮಾಣದೆನ್ನಂ ನೂಂಕಿ ತೋಱಿ ಕೌತುಕಂಬಟ್ಟು ತಲೆಯಂ ತೂಗಿ

ಪಡೆವೊಡೆ ಸಿಂಹಿವೊಲ್ಪಡೆವುದಾತ್ಮಜರಂ ಬಱಿದೇಕೆ ಮಕ್ಕಳಂ
ಪಡೆದಪೆನೆಂದು ಹಿಗ್ಗುವರೊ ಪುಟ್ಟದ ಮುನ್ನಮೆ ಜಾತಿವೈರದಿಂ
ಸಿಡಿಲೆಱಪಂದದಿಂದೆಱಗಿಪ್ಪುದು ಹಸ್ತಿಗೆ ಶತ್ರುಸಿಂಹನಂ
ಪೊಡವಿಗಧೀಶನಂ ಪಡೆಯದಾಕೆಯ ಜೀವನಮುಳ್ತೆ ನಿಷ್ಫಲಂ ೬೩

ಇಂತೆನ್ನ ಕೂಡೆ ನುಡಿದಳ್
ದಂತಾವಲಗಮನೆ ಬಂದು ರಾಜ್ಯಾಲಯದೊಳ್
ಚಿಂತಾಸಹಚರಿಯೊಡನೇ
ಕಾಂತಮನಾಡುತ್ತುಮಿರ್ಪಳಾಸದನಱನೆಂ ೬೪

ವ॥ ಎಂದು ನುಡಿದ ಕೆಳದಿಯ ಮಾತು ಭೂತಳಾಧಿಪನ ಚೇತೋಭೂಮಿಯೊಳ್ ಪುತ್ರಲಾಭೋದ್ಯೋಗಬೀಜಾವಾಪಮನೊಡರ್ಚಿ ಬಿಚ್ಚನೆಸುಯ್ದು ಘನರವಹಿತ ಹೃದ²ಯಂ[2] ವಲ್ಲಭೆಯನಿಂತೆಂದಂ

---

1 ಪತಿಯಿಂ (ಅಇಉ) 2 ಯ (ಎ)

ಅದು ಸುಕೃತಾನುರೂಪಮದು ನೆಮ್ಮ ಮನೋರಥದಂತೆ ತಿರ್ದಿ ಬ
ರ್ಪುದೆ ದೊರೆಕೊಳ್ವುದಕ್ಕೆ ದೊರೆಕೊಳ್ಳದುದಕ್ಕಧಿಕರ್ವಿವೇಕಿಗ
ಳ್ಪದೆವರೆ ದೇವಿ ಮಾಣ ಮನದುಮ್ಮಳಿಮಂ ಭವದೀಯದಾನಧ
ರ್ಮದ ಸುದೃಢವ್ರತಾಚಾರಣವೃತ್ತಿಗೆ ಕೂಡದುದೇಂ ಮನೋರಥಂ ೬೫

ವ॥ ಅದಲ್ಲದೆಯುಮಿಾಗಳ್

ಅವಿರಳಪಕ್ಷ್ಮನೇತ್ರೆ ನಿನಗೀ ದಿವಸಂ ಮೊದಲಾಗಿ ಮುಂದೆ ಸಂ
ಭವಿಸುವ ಸತ್ಫಲೋದಯನಿಮಿತ್ತಮನಿಲ್ಲಿ ಬರುತ್ತೆ ಕಂಡೆನೀ
ಭವನದ ರತ್ನಮಂಡಪದ ಶಾಂತವಿಭಾಗದೊಳಿರ್ದು ತತ್ತ್ರಿಯಿ
ಕ್ಕುವ ಗೃಹಕೋಕಿಲಾಂಗನೆ ನಿಜಪ್ರಿಯನಂ ಕರೆಯುತ್ತುಮಿರ್ದುದಂ ೬೬

ವ॥ ಎಂದು ನುಡಿದ ಚಿತ್ತವಲ್ಲಭನ ಸಂತರ್ಪಣವಚನಮೆಂ[1]ಬೀ ತೆಂಬೆಲರ[1] ತೀಟದಿಂ ಮನದುಮ್ಮಳಿಮೆಂಬ ಘರ್ಮೋದ್ರೇಕಮಂ ಘಣ್ಮನಾಜಿಿಸೆ ಕಣ್ಮಲರೆಂಬ ಕಮಲ ದೊಳಾನಂದಾಶ್ರುಬಿಂದುಮಕರಂದಮಂ ಸಂಧಿ[2]ಸುವಿನಮ[2]ನಂತರಮಾ ಪಲ್ಲವಪಾದಯು ಗಳೆಯಲ್ಲಿಂ ತಳರ್ದು ಬಳ್ಳಿಮಾಡದ ಬಹಿರ್ವಣಕ್ರೀಡಾಸರೋವರದೊಳೇಕಕ್ಷಣಂ ತಡೆದು ಕಂಜ ಕುಬ್ಜ ವಾಮನ ಕಿರಾತ ವಾರವನಿತಾಸಹಚರೀಜನಮನತಿದೂರಪರೀತ ರಾಗಿ ಬರೆ ಪರಮಪ್ರಸಾದಿತ ಚೇಟಿಕಾಕರಸ್ಕಂಧಾವಲಂಬಿತವಾಮಹಸ್ತಪಲ್ಲವೆಯುಂ ಭ್ರೂಲತಾಸ್ಪರ್ಧಿನೀಲತಮಾಲಶಲಾಕಾಂದೋಳಿತ[3]ತದಿತರಕ[3]ರಸರಸಿಜೆಯುಮಾಗಿ ವಿಳಾ ಸದಿಂ ನಡೆತರ್ಪಾಗಳ್

[4]ಇರು ನೀಂ[4] ಕೈಗೊಟ್ಟಳಂ ಮುಟ್ಟಿದೆಯೆನೆ ನಗುತುಂ ಚೇಟಿಯ ಸೌವಿದಲ್ಲಂ
ದರಹಾಸಂ ದೇವಿಗಾಗುತ್ತಿರೆ ಕೆಳರ್ದಳುರ್ದಂ ಪ್ರಸ್ಫುರದ್ವೇತ್ರಹಸ್ತೋ
ದ್ಧರಣಂ ದೂಕಾರ[5]ನಾ[5]ಳಿಪ್ರದರವಮುಖರಂ [6]ಲುಂಛಿ[6]ತಶ್ಮಶ್ರುಕೂರ್ಚಾ
ತರಲೋಮಂ ದಷ್ಟದಂತಂ ಧ್ವನಿವಿಧೃತಮುಖಂ ಕಂಪಿತಾಶೇಷಗಾತ್ರಂ ೬೭

ವ॥ ಆ ವೃದ್ಧಕಂಚುಕಿಯ ರೋಷಾವೇಶಂ ಪ್ರಾಣಪ್ರಿಯನ ವದನಾರವಿಂದಕ್ಕೆ ಮಂದಸ್ಮಿತಮನೋಲಗಿಸುವಿನಮೆಯ್ದೆವಂದು

ತನಿರಸದಿಂಪು ಕಂಪಮರೆ ಮಾಣಿಕದೊಳ್ಕೃತಖಂಡಮಾಗೆ ಮು
ತ್ತಿನ ಪುಡಿಯಂ ಪೊರಳ್ಚಿ ಪೊಸಪೊಂದಗಡಂ ತಱಿದಿಕ್ಕಿದಂತೆ ತೋ
ರ್ಪಿನಿಯನ ಬಾಯ ಕರ್ಪುರದ ತಂಬುಲಕೊಯ್ಯನೆ ಕೆಯ್ಯನೊಡ್ಡಿದ
ಳ್ತನುಲತೆ ಕೊಂಕೆ ಪುಷ್ಪವತಿ ಲಜ್ಜೆಯ ಪಜ್ಜೆ ತೊಡಂಕಿ ಕೊಂಕಿನೊಳ್ ೬೮

---

1 ಚೆರಲ (ಅಇಉ) 2 ಸಿಯ (ಅಇಉ) 3 ಕ (ಎ)
4 ಬರುತುಂ (ಅಇಉ) 5 ಗಾ (ಅ) 6 ಕುಂಚಿ (ಎ)

ವ॥ ಅಂತು ನಲ್ಲಳಾಂತ ಪಲ್ಲಪಾಣಿತಳದೊಳ್ ಮಂದಸ್ಮಿತಪಲ್ಲವಂ ಚಂದನ ರಸಾಭ್ಯುಕ್ಷಣಮುಂ ಮುನ್ನಮಾಗಿಸೆ ಬಟಿಕ್ಕೆ

ಅನುರಾಗರಸಂ ತಾಂಬೂ
ಲನಿಬದ್ಧರಸಕ್ಕೆ ಕುಡೆ ಸುಧಾರಸಪರಿಷೇ
ಚನಮುಂ ಸುತಜನ್ಮಶ್ರೀ
ವನಿತೆಗೆ ಸೇಸಿಕ್ಕುವಂತಿರಿಕ್ಕಿದನರಸಂ ೬೯

ವ॥ ಅಂತು ಕಂಡು ಶುಭನಿಮಿತ್ತಕ್ಕೆ ಋತುಸಮಯಮೆ ನಿದರ್ಶನಮೆಂದು ಸಂತಸದಿನಿರ್ಪಿಸನಾ ಚತುರಕಲಭಾಷಿಣಿ ಚತುರ್ಥದಿನದೊಳ್ ಮಂಗಳ ಮಜ್ಜನ ಪವಿತ್ರೀಭೂತಗಾತ್ರಲತಿಕೆಯುಂ ಧವಳಪ್ರಾಸಾದನದಿಮುಲ್ಲಾಸವಿಲಾಸೆಯುಮಾಗಿ ಪಾಲ್ಗಡಲ ತೆರೆಯೊಳಗೆ ಮುಳುಂಗಿ ನೆಗೆದ ಚಂದ್ರಕಳಾಲಕ್ಷ್ಮಿ ಶಾರದನೀರದಂ ಪದಮನೇಱುವಂತೆ ಸೆಜ್ಜೆಯುಜ್ಜ್ವಲಿಪ ಧವಳಾರಮನೇಱಿ ನಿಜವಲ್ಲಭನ ಸೂೞ್ಗೆವಂದು ಸುರತಸುಖ ಯಾಮಿನೀವಿರಾಮಸಮಯದೊಳ್

ಕಳಶಂ ಕನ್ನಡಿ ಬಾಸಿಗಂ ತಿಳಿಗೊಳಂ ಸಿಂಹಾಸನಂ ಚಾಮರಂ
ಕಳಭಂ ಪೂರ್ಣಸುಧಾಂಶು ಕೇಸರಿ ಗವೇಂದ್ರಂ ಭಾನು ರತ್ನಾಕರಂ
ಬೆಳಗೆಯ್ಬೆಳ್ಗೊಡೆ ಲಕ್ಷ್ಮಿ ರತ್ನತತಿಯಿಂದೊಪ್ಪಿರ್ದುವಂ ಸೀತೆ ಕಂ
ಡಳಿರುಳ್ಪಿಂಗಲೊಡರ್ಚಿ ಷೋಡಶಶುಭಸ್ವಪ್ನಂಗಳಂ ಮಂಗಳಂ ೭೦

ವ॥ ಅಂತು ಕಂಡ ಕನಸುಗಳನಾ ಸೀತಾದೇವಿ ನಿಜಕಾಮಪ್ರೇಮಭೂಮಿಯಪ್ಪ ಸೋಮಪ್ರಭಮಹಾರಾಜಂಗೆ ಪೇೞ್ವುದುಮಾ ನೃಪೇಂದ್ರಂ ಪರಮಾನಂದಸಂದರ್ಶಿತಹೃದಯನಾಗುತ್ತುಮವಱ ಫಲಮನಿಂತೆಂದು ನುಡಿದಂ

ಪರಮಫಲಪ್ರದಮಿಂತಿವು
ಸರಸಿಜಮುಖಿ ನಿನ್ನಗರ್ಭದೊಳ್ಪುಟ್ಟಿದಪಂ
ಪುರುಷೋತ್ತಮಂ ಶಲಾಕಾ
ಪುರುಷಂ ರಿಪುದನುಜಮರ್ದನಂ ಚಕ್ರಧರಂ ೭೧

ವ॥ ಎಂದು ನುಡಿದ ಚಿತ್ತಪ್ರಿಯನ ಪರಮಪ್ರಮೋದಂ ತನ್ನ ನಿಜಸ್ವಾಂತದೊಳ್ನೆಲಸೆ

ಪದಪಿಂ ಬಂದು ಜಯಾವತೀಜಠರದೊಳ್ಮುನ್ನಂ ಸಹಸ್ರಾರಕ
ಲ್ಪದೊಳೊಪ್ಪಿರ್ದಮರಂ ಮಹಾಬಳಚರಂ ಪೊಕ್ಕಿರ್ದು ಕೈಸನ್ನೆದೋ
ಱದವೊಲ್ಬೆಂಬಿಡಿದಲ್ಕಱಿಂ ನೆಲಸಿದಂ ತತ್ಕಲ್ಪದಿಂ ಬಂದು ತ
ತ್ರಿದಶೇಂದ್ರಂ ವಸುಷೇಣಭೂಭುಜಚರಂ ಸೀತಾಂಬಿಕಾಗರ್ಭದೊಳ್ ೭೨

ವ|| ಅಂತು ನೆಲಸಿದ ಗರ್ಭಾವತಾರದೊಳ್

ಆ ದೇವಿಯ ಬಡನಡುವಿನೊ
ಳಾದ ರಸಾಯನದ ಸೇವೆಯಂತಿರೆ ವಳಿಯೇಂ
ಪೋದತ್ತೊ ಕೆಟ್ಟನಾಟ್ಗಿರ
ಸಾದಂತಿರೆ ಮಧ್ಯದೇಶಮೇಂ ತೀವಿದುದೋ ೭೩

ಲಲನೆಯ ಬಾಸೆಯ ಕರ್ಪೇಂ
ಗೆಲೆವಂದುದೊ ವಿಷ್ಣು ಗರ್ಭದೊಳ್ನೆಲಸಲೊಡಂ
ನೊಲೆಯೆಂಬ ಜನಳಿ[1]ಗೊ[1]ಡೆಗ
ಳ್ಗಲರಂಬಂ ತಿರ್ದಿ ಪಿಡಿದ ನೀಲದ ಕಾವಂ ೭೪

ಹೆಟ್ಟುಗೆಗೆ ಗುಜ್ಜುಗರೆದುದು
ಮೆಟ್ಟುವ ಮೆಲ್ನಡೆ ನೊಗಂ ಬೆಳರ್ತುದು ಪಗೆ ಬಂ
ದಿಟ್ಟಳಿಸಿದ ಪಂದೆಯವೊಲ್
ತೊಟ್ಟು ಕಱಂಗಿದುವು ಲೋಭಿಯಂತಿರೆ ನೊಲೆಗಳ್ ೭೫

ಕನ್ನಡಿಯಿರ್ದವೊಲ್ತೊಳಪ ಚಕ್ರದ ಬೆಳ್ಮಸೆಯಲ್ಲಿ ನೋಡುವ
ಳ್ತನ್ನಮುಖಾಬ್ಜಮಂ ಸರಸಖಾದ್ಯಸುವಸ್ತುಗಳಿರ್ದ ಪಾಂಗೆ ಮ
ಣ್ದಿನ್ನದೆ ಸೈರಿಸಳ್ನಿಜಕೃಶೋದರದೊಳ್ನೆಲಸಿರ್ದನೆಂಬುದಂ
ಕನ್ನಡಿಪಂತೆ ಪಂಕರುಹಲೋಚನೆ ಚಕ್ರಧರಂ ಧರಾಧರಂ ೭೬

ವಳಿ ಕಿಡುವಂತೆ ತಂಬುಲದ ಬಾಯ್ಸವಿಗೆಟ್ಟುದು ಕಣ್ಗಳಂತೆ ಬೆ
ಳ್ವೆಳಗನಳಂಕೆಗೊಂಡುವು ಕಪೋಲದಳಂ ಸರದಂತೆ ಮೆಲ್ಪನ
ಗ್ಗಳಿಸಿ[2]ದಂಚೆಗಂಚೆ[2]ರಮನಾಗಿಪ ಮೆಲ್ನಡೆ ಗರ್ಭಚಿಹ್ನದೊಳ್
ಬಳೆದುದು ಕೆಯ್ಯ ಸೆಳ್ಪುಗುರ್ಗಳಂತೆ ಲತಾಂಗಿಯ ಕುಂತಳೋತ್ಕರಂ ೭೭

ವ|| ಆ ಸಂತೋಷವರ್ಧನಾವಸರದೊಳ್

ಸುತಲಾಭಾನುಭವಕ್ಕೆ ವಲ್ಲಭರತಪ್ರೇಮಾನುಭೋಗಕ್ಕೆ ತ
ತ್ಪತಿಪತ್ನೀದ್ವಯಮೇಕಮೆಂಬಿನೆಗಮಂತರ್ವತ್ನಿಯಾಗಿರ್ದು ಗ
ರ್ಭತನೂಜಂ ಪೊಱಮಟ್ಟನೆಂದು ನಲಿವನ್ನಂ ಧಾತ್ರಿ ಮುನ್ನಂ ಜಯಾ
ವತಿ ಪೆತ್ತಳ್ಬಲದೇವನಂ ರಿಪುಕುಲಾರಣ್ಯಾವನೀದಾವನಂ ೭೮

---

1 ಕೊ (ಅಇ) 2 ದುದಂ....(ಅಇಉ)

ವ॥ ಅಂತು ಶುಭಮುಹೂರ್ತೋದಿತ ಪುತ್ರಜನ್ಮೋತ್ಸವದೊಳ್

ಪುರಲಕ್ಷ್ಮೀಲುಳಿತಾಳಕಾಳಿ ಪುರಲಕ್ಷ್ಮೀಕೇಕರಾಲೋಕನಂ
ಪುರಲಕ್ಷ್ಮೀಮುಖಬಿಂಬಮೆಂಬಿನೆಗಮೆತ್ತಂ ಪ್ರತ್ಯಗಾರಂ ನಿರಂ
ತರಮುತ್ಪಲ್ಲವತೋರಣಂ ಸಿತಪತಾಕಾಶ್ರೇಣಿಪೂರ್ಣಾಂಭಸಂ
ಕರಕಾದರ್ಶಮದೇಂ ಬೆಡಂಗಮದುರ್ದೋ ದ್ವಾರಾವತೀಶೋಭೆಯೊಳ್ ೭೯

ವ॥ [1]ಅಂತು[1] ಮುನ್ನವಮಾಸ್ಥಾನಮಂಟಪದೊಳಿಱಿಪಿದ [2]ಶಂಕು[2]ವಿನೊಳಮಿಟ್ಟ ಗಳಿಗೆವಟ್ಟಲೊಳಂ ಶುಭಮುಹೂರ್ತಮನೆ ಪಾಱುತ್ತುಮಿರ್ದ ಗಣಕಗಣನಿರೂಪಣ ಪ್ರದತ್ತ ಮುಖಾಂಭೋಜಂ ಸೋಮಪ್ರಭಮಹಾರಾಜನಹಮಹಮಿಕಾಯಾತಶುದ್ಧಾಂತ ಗೃಹಮಹತ್ತರೀನಿಕರವಿಜ್ಞಾಪನದೊಳಂ ಪ್ರಮೋದಪ್ರಮುಷ್ಟ ಪ್ರೌಢವಾರನಾರೀನಿಜ ಭುಜಾಪಹೃತಪಾರಿಹಾರ್ಯದೊಳಮುಱಿದು ಪುತ್ರಮುಖದರ್ಶನೋತ್ಸುಕಹೃದಯನವ ಹಿತಶುಭಮುಹೂರ್ತನಲ್ಲಿಂ ತಳರ್ದು ರಕ್ನಾಭಿರಚಿತರತ್ನಬಹಳೀಪ್ರಾಂತಪ್ರದೇಶಮುಂ ಸಿದ್ಧಾರ್ಥಾದಿದಿವ್ಯದ್ರವ್ಯಧೂಪಧೂಮಧೂಸರಿತಮುಖದ್ವಾರಾಭಿರಾಮಮುಂ ಅಂಜನ ವಿಲಿಖಿತಖಡ್ಗಧರ ಪುರುಷೋಭಯಭಿತ್ತಿಭಾಗಮುಂ [3]ಮುಸಲ[3]ಹಲಾರ್ಪಿತದ್ವಾರೋಪ ಕಂಠಮುಂ ರತ್ನಕಂಠೀಜನಜೇಜೀಯಮಾನಮಂಗಳಕೈಶಿಕಾಸಂಗೀತಮುಖರಮುಮಪ್ಪ-ರಿಷ್ಟಭವನಮಂ ತತ್ಸಮಯಸಮುಚಿತಸಹಾಯಸಮೇತಂ ಪೊಕ್ಕು [4]ಮಂದಾಕ್ಷ[4]ಭಾವ ಸಂಧಾನಿತಹಸ್ತಪಲ್ಲವಾಂತರಿತವದನವನರುಹೆಯಾದ ವಲ್ಲಭೆಯಲ್ಲಿಗೆ ವಂದು ಮಂದಹಾಸ ಮಂದಾಕಿನೀಪ್ಲವನಾಭಿಷವಣಮಂ ಮಾಡುತ್ತುಂ ನೋಡುವಾಗಳ್

ತ್ಯಕ್ತಾಖಿಲದೋಷಂ ಸು
ವ್ಯಕ್ತಾಂಗಂ ತಾಯ ಸೋಂಕಿಲೊಳ್ಸಿತಕಾಯಂ
ಶುಕ್ತಿಕೆಯ ಸೋಗೆಯೊಳ್ ನವ
ಮುಕ್ತಾಫಲದಂತೆ ತೊಳಗುತಿರ್ದಂ ತನಯಂ ೮೦

ವ॥ ಅಂತು ಮೆಱೆವ ಬಾಳಕನ ವದನಾರವಿಂದದೊಳಾತ್ಮಾವಳೋಕದ್ವಿರೇಫ ವಾ[5]ಬಾ[5]ಲ್ಯರಸಮಕರಂದದಿಂ ತಣಿದು ಚೇತೋಮರಾಳಂ ಸ್ನೇಹಲೀಲೆಯಿಂ ನಲಿದು ನಿರ್ವ ರ್ತಿತಜಾತಕರ್ಮವಿಧಾನನಾಗಿ ದಶಮದಿನದೊಳರ್ಭಕಂಗೆ ನಿರ್ಭರ [6]ಪ್ರಭಾವಿ[6]ಭಾಸಿ ಯಪ್ಪುದಱಿಂ ಸುಪ್ರಭನುಂ ದೋರ್ವಳದೊಳ್ ಸರ್ವತೋಭದ್ರನಪ್ಪುದಱಿಂ ಬಲಭದ್ರ ನುಂ ಲೋಕಾವಲೋಕಾಭಿರಾಮನಪ್ಪುದಱಿಂ ರಾಮನೆಂಬನ್ವರ್ಥನಾಮಂಗಳನಿಟ್ಟುತ್ಸ ವದ ಪರಮ ಸೀಮೆಯಿಂದಮಿರೆ

---

1 ಅಲ್ಲಿಂ (ಅಇಉ) 2 ಸಂಪು (ಎ) 3 ಪಿಚುಮಂದಸಿಂದು ವಾರವಜಪಾಂತರಿತಾಭ್ಯುಕ್ಷಮೋದಕಮುಸುಹಳ (ಎ) 4 ಲಜ್ಜಾಂತಾ (ಎ) 5 ತ್ಸ (ಎ) 6 ಪ್ರಿಯ (ಎ)

ಒಸಗೆಯ ಮೇಲೆ ಮತ್ತೊಸಗೆ ಪೊರ್ಕುಟಿ ಪೆರ್ಚಿನ ಮೇಲೆ ಪೆರ್ಚು ಸಂ
ತಸಿಕೆಯ ಮೇಲೆ ಸಂತಸಿಕೆ ಮಂಗಳಚಾರದ ಮೇಲೆ ಮಂಗಳಂ
ಪಸರಿಸುವಂತಿರಗ್ರಜೆ ತನೂಭವನಂ ಪಡೆದುತ್ಸವಾನಕಂ
ಮಸುಳದ ಮುನ್ನೆ ಸೀತೆ ಪಡೆದಳ್ಮಗನಂ ಸರಸೀಜನಾಭನಂ ೮೧

ವ॥ ಅಂತು ಪಡೆದ ಸುಖಪ್ರಸವಸಮಯದೊಳ್

ಪೊಕ್ಕುಟಿ ಕುಡಿಯಂ ಪೆರ್ಚಿಸ
ಲಿಕ್ಕಿದ ಮಣಿಕನಕಪುಂಜಮೆಸೆದಿರೆ ಮೂಲೋ
ಕಕ್ಕೋಜನೆನಿಸುವಜನಂ
ಪೊಕ್ಕುಟಿ ಪೂವಿಂದೆ ಪಡೆದುದುಂಟೆನಿಸಿರ್ದಂ ೮೨

ಪ್ರಸವಾಲಯದೊಳ್ ಜಗತೀ
ಪ್ರಸವಾಭಾರಕ್ಕೆ [1]ಕಸ್ತು[1]ಕೆಲದೊಳ್ಸಾ[2]ರ್ಚಿ
ರ್ದ[2]ಸಿಲತೆಗೆ ಕಾಳಬಜ್ಜರಿ
ವೆಸರಾಯ್ತುಂದಿಂಗೆ ಕೃಷ್ಣನಂಗಚ್ಛವಿಯಿಂ ೮೩

ಸೆಱೆ[3]ಗ[3]ಳ್ಪಡ್ಡಿಗಳೆಯ್ದೆ ಮಾಣ್ದುವು ಮರಾಳಂ ಪಾರಿವಂ ಕೀರಮು
ಳ್ಪಱದೀವನ್ನೆಱೆ[3] ಬಿಟ್ಟುವಟ್ಟಿ ಜನಮೇಕಚ್ಛತ್ರಮುಂ ಪಟ್ಟಮುಂ
ಪೊಱಗಾಗರ್ಥಿಸಿತಿಲ್ಲ ಮುಂ ಪಡೆದುದಾ ಸೋಮಪ್ರಭಂ ಮೇಗು ಮ್ಮೆ
ಮಱೆ[3]ದಂ ದಾನದ ಚಾಗದಗ್ಗಳಿಕೆಯೊಳ್ಪುತ್ರೋತ್ಸವಾನಂದದಿಂ ೮೪

ತನುಜೇಂದೂದಯದೊಳ್ ಪರೀಸರದಿ ಸಂಕ್ಷೋಭಂ ಪೊದಟ್ಟಿತ್ತು ವಂ
ದನಮಾಲಾಧ್ವಜವಾಸಚೂರ್ಣರಮಣೀಶೃಂಗಾರಭೃಂಗಾರ ಕಾಂ
ಚನಕುಂಭೋದಕದರ್ಪಣದ್ವಿಜಜನಾಶೀರ್ವಾದಧಾತ್ರೀವಿನ
ರ್ತನಸಂಗೀತಕಪುಣ್ಯಪಾಠಕನೃದಂಗೋತ್ತಾಳಕೋಳಾಹಳಂ ೮೫

ವ॥ ಆಗಳರಸನಾ ಕುಮಾರಂಗೆ ಜಾತಕರ್ಮನಿರ್ಮಾಪಣಮಹೋತ್ಸವಾನಂತರಂ ನಾಮಕರಣಮಂ ಶುಭವಾಸರದೊಳಷ್ಟೋತ್ತರಶತಾಖ್ಯಾತನೀತಂ ಪುರುಷೋತ್ತಮನುಮೆಂಬ ಪೆಸರ್ಗಳಸದಳಮೆಸೆಯೆ

ಕಳಹಂಸಧವಳನಗ್ರಜ
ನಳಿನೀದಳಶ್ಯಾಮನನುಜನಿರ್ವರ ಗಡಣಂ
ಬಿಳಿಯ ಕರಿಯಾಲಿಯಂತು
ಜ್ಜ್ವಳಿಸಿರೆ ಲೋಕಕ್ಕೆ ತಾಮೆ ಲೋಚನಮಾದರ್ ೮೬

---

1 ಕಿಟ್ಟು (ಅಇಉ) 2 ಜ್ಞಾಟ್ಟ (ಎ) 3 ಕೊ (ಎ)

ಅಂಗಣದ ಪಾರಿಜಾತದ
ಮುಂಗುಡಿಗಳ್ ತಂದೆತಾಯ ನಗೆಗಣ್ಗಳ ಪ
ರ್ವಂಗಳೆನೆ ರಾಮಕೃಷ್ಣರ
ಸಂಗಡಿಸಿದ ಬಾಲಕೇಳಿ ಪಡೆದುದು ಮುದಮಂ ೮೭

ಬಲವತ್ಕ್ಷತ್ರಕುಲದ್ವಿಪಕ್ಕೆ ರದಯುಗ್ಮಂ ಶೌರ್ಯಸಿಂಹಕ್ಕೆ ಕೋ
ಮಳದಂಷ್ಟ್ರಾಯುಗಳಂ ಸಮಸ್ತಪುರುಷಾರ್ಥಾಕಾರವೀರಂಗೆ ಮಂ
ಗಳಬಾಹಾಯುಗಮೆಂಬಿನಂ ಹಳಿಯುಮಂಭೋಜಾಕ್ಷನುಂ ಲೀಲೆಯಿಂ
ಬಳೆಯುತ್ತಿರ್ದರನಾಕುಲಂ ತ್ರಿಭುವನೈಕಾನಂದಕಂದಾಂಕುರರ್ ೮೮

ಬಳೆಯುತ್ತಿರ್ದುವು ಕೂಡೆಕೂಡೆ ಬಳೆವಾಗಳ್ ಶಸ್ತ್ರಶಾಸ್ತ್ರಾದಿ ಸ
ತ್ಕಳೆಗಳ್ ಪೌರುಷಮೊರ್ಮೆಗೊರ್ಮೆ ಶಿಶುಭಾವಂ ಪಿಂಗೆ ಮೆಯ್ಗೊಡೆ ಮಾಂ
ಸಳಮಾಯ್ತನ್ವಿತರಾಜನೀತಿಗೆ ನವಪ್ರಾಗಲ್ಭ್ಯದೊಳ್ಪಾಡೆ ಕೌ
ಶಳಮಾಯ್ತಿಂತು ಕುಮಾರರುರ್ವಿಗವತಂಸೀಭಾವದಿಂದೊಪ್ಪಿದರ್ ೮೯

ಐರಾವತಮುಮನಂಜನ
ವಾರಣಮುಮನಡ್ಡಮಿಕ್ಕಿದಂತಿರೆ ಬಲನುಂ
ನಾರಾಯಣನುಂ ಜಗಮಂ
ಕೂರಿಸಿದರ್ ಕಾಯ ಬಲದೊಳಂ ಬಣ್ಣದೊಳಂ ೯೦

ಜಗುನೆಯ ಕಡಲೊಳ್ತಾರಾ
ಮೃಗಧರಮಂಡಲದ ಕಾಂತಿ ಸಾಪ್ಲೊಳೆದವೊಲೇ
ನುಗಿಬಗಿಮಾಬ್ಬುವೊ ಪೆಂಡಿರ
ಬಗೆಯಂ ಕೃಷ್ಣನ ವಿಲೋಲಲೋಚನರುಚಿಗಳ್ ೯೧

ನುಡಿಯಲ್ಬಾರದು ರಾಮಕೇಶವರ ಚೆಲ್ವೇವೇಳ್ಬಿನಯ್ವತ್ತು ಬಿ
ಲ್ನಿಡಿಯಾರಯ್ವೊಡೆ ನಾಲ್ವತೊಂಬತರೆ ಲಕ್ಷಾಬ್ದಂಗಳಿರ್ವರ್ಗಮೊ
ಳ್ಪಡದಾಯುಃಪರಿಮಾಣಮಾಗೆ ಚತುರಾಸ್ಯಂ ಮಾನವಾಕಾರದಿಂ
ಕಡೆದಂತಿರ್ಪುದು ಗಂಡ[1]ಗಾಡಿ[1] ಹಿಮವತ್ಕುತ್ಕೀಲನೀಲಾದ್ರಿಯಂ ೯೨

ನಳಿನಾಕ್ಷಂಗೆ ಕುಮಾರರಾಜ್ಯಮಧಿನಾಥಂ ತಂದೆ ಸೋಮಪ್ರಭಂ
ಗಳವಟ್ಟುತ್ತು ವಿದಗ್ಧರಾಜ್ಯಮಧಿರಾಜ್ಯಶ್ರೀಯನಾಳ್ದಂ ಜಗ
ಜ್ಜಳಜಾರ್ಕಂ ಕವಿತಾನಟೀನಟನಶೈಲೂಷಂ ಜಯಶ್ರೀವಧೂ
ಕುಳಗೇಹಂ ಬಲಭದ್ರನುಜ್ಜ್ವಲಯಶಂ ಸಾಹಿತ್ಯರತ್ನಾಕರಂ ೯೩

1 ಗಂಡ (ಅಇಉ)

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ
ವಿರಚಿತಮಪ್ಪ ಅನಂತನಾಥ ಪುರಾಣದೊಳ್ ಸುಪ್ರಭ
ಪುರುಷೋತ್ತಮಾವತಾರವರ್ಣನಂ ದ್ವಾದಶಾಶ್ವಾಸಂ
ಸಂಪೂರ್ಣಂ

# ತ್ರಯೋದಶಾಶ್ವಾಸಂ

ಶ್ರೀರಾಮಂ ಹಲಹಸ್ತಸ
ರೋರುಹನವನತನೃಪಾಲದಂಭೋಳಿಪ್ರಾ
ಕಾರಂ ನೀತಿನದೀನದ
ಪಾರಾವಾರಂ ವಿನೇಯಜನಮುಖತಿಲಕಂ ೧

ವ|| ಅಂತು ಬಲದೇವನುಂ ಶ್ರೀಕಾಂತನುಮೌದಾರ್ಯಶೌರ್ಯ ಧೈರ್ಯಂಗಳ್ ತಮ್ಮಂ ತೊಳಗಿ ಬೆಳಗೆ ಜಗದೊಳ್ ಸಂತೋಷದಿಂ ದ್ವಾರಾವತಿಯೊಳಿರ್ಪಿನಮಿತ್ತಲ್

ಒಡಸತ್ತಂದಿನ ಚಂಡಶಾಸನನೆ ಘೋರಾಕಾರಸಂಸಾರದ
ಟ್ಗಿಡಲೊಳ್ಪಿಟ್ದು ಮುೞುಂಕಿ ಬಂದು ಭವನಾವಾಸಕ್ಕೆ ದೈತ್ಯಾನ್ವಯಂ
ಬಡೆದಲ್ಲಿಂದಮೆ ಬಾಣರಾಸಿವೊಟಲೊಳ್ ಧಾತ್ರೀತ್ರಿಖಂಡಕ್ಕೆ ತಾ
ನೊಡೆಯಂ ಭೂಪರೊಳರ್ಧಚಕ್ರಿ ಎನೆ ರಾಜಾಮ್ನಾಯದೊಳ್ಕೂಡಿದಂ ೨

ಪೆಸರ್ವೆತ್ತಾ ಮಧು ಕೃಷ್ಣನಿಂ ಮಡಿದಪಂ ಕೃಷ್ಣಂ ಬೞಿಕ್ಕರ್ಧಚ
ಕ್ರಿ ಸಮುಸ್ತಾವನಿಗಾಗಿ ಸಲ್ವನವಧಿಸ್ಥಾನಕ್ಕೆ ಕಾಲಾಂತದೊಳ್
ದೆಸೆಗೆಟ್ಟಾತನ ಶೋಕದಿಂ ಬಳಸಿ ಬಂದಾ ಸುಪ್ರಭಂ ಕಂಡು ಬೋ
ಧಿಸೆ ಸೋಮಪ್ರಭರಲ್ಲಿ ದೀಕ್ಷೆವಡೆದಾಳ್ವಂ ಮುಂದೆ ನಿರ್ವಾಣಮಂ ೩

ಈಕಥೆಯ[1]ನಿಂತೆ[1] ಕೇಳ್ದಿನ
ನಾಕುಲಮೆಂದಾಕೆ ಪೇೞ್ದೊಡೆನಗ[2]ವಗತಮಿ[2]
ನ್ನಾಕಥನಮೆಂದು ಮದನಪ
ತಾಕೆಗೆ ಕಡೆಮುಟ್ಟೆ ಚಿತ್ರಲತೆ ಪೇೞ್ವಾಗಳ್ ೪

ಎನ್ನ ಮನಃಪ್ರಿಯಂ ಖಚರಸೇನೆಗೆ ನಾಯಕನಾದನಲ್ಲಿ ತಾಂ
ಮನ್ನಣೆಯಾತನಂ[3]ತಱಿವೆ ನಾಂ ತಱಿವೆ ನಾ[3] ಮಧುಕೈಟಭಾಂಕನ
ತ್ಯುನ್ನತನಣ್ಮನೊಳ್ಬಲದೊಳತ್ಯಧಿಕಂ ಛಲದೊಳ್ನಿರರ್ಗಳಂ
ತನ್ನ ಮಹತ್ವದೊಳ್ತೃಣ [4]ವಿಶ[ಲ್ಯಕಲ ಘೂರ್ಣಿತ ವಿಶ್ವವಿಷ್ಟಪಂ][4] ೫

1 ನೆಂತು (ಎ) 2 ಳವಡೆಯಿ (ಅಇಉ) 3 ತಱಿವೆ [ನಾತನ] (ಅ) ತಱಿವೆನಾಂ (ಇಉ) ತರಿಣಿವೆನಂತಱಿನಾ (ಎ) 4 ವಿಶಲ್ಯಲಘೂರ್ನುತ ವಿಶ್ವ ವಿಷ್ಟಪಂ (ಅಇಉ) ವಿಶಲ್ಯಲಂಘೂರ್ಣೀಕೃತ ನಿಷ್ಟುಳಿಷ್ಟಪಂ (ಎ)

ನಿನಗೇವೇೞ್ದಪ್ಪೆನಾಭೂಭುಜನರಸುತನಂ ಪೇೞ್ವಿ ಕೇಳ್ವಂತುಟೆಲ್ತು
ರ್ವಿನಮಿಾ ತ್ರೈಖಂಡಮುಂ ತ್ರೈಭುವನದನಿತು ಚಕ್ರೇಶ್ವರತ್ವಂ ಚತುರ್ನಾ
ಕಿನಿಕಾಯಕ್ಕೆಂಬವೊಲ್ದುರ್ಜನಸುಜನಜನಂ ನಿಗ್ರಹಾನುಗ್ರಹಕ್ಕ
ಪ್ಪಿನಮೇಕಚ್ಛತ್ರದಿಂ ದಳ್ಳಿಸಿ ಮಧು ಮಧುಮತ್ತಂಬೊಲುದ್ವೃತ್ತನಾದಂ ೬

ಬೆಸವೇೞ್ವಂ ದಿಗಧೀಶರಂ ಬನದ ಬಾಳ್ಗಂಬಂಗಳೊಳ್ತಂದು ಕ
ಟ್ಟಿಸವೇೞ್ವಂ ದೆಸೆಯಾನೆಯಂ ತನಗವಾಱೀಱೀಕೆ ಸೂರ್ಯಂಗೆ ವಾ
ಹಸಮೂಹಂ ಪುಗಿಸೆಂದು ಮಂ[1]ದು[1]ರಮನೆಂಬಂ ದೈತ್ಯ[2]ನಿಟ್ಟೆತ್ತು[2] ಸು
ಟ್ಟಿಸಿ ತೋರ್ಪಾತನ ಬೊಟ್ಟು [3]ಸೋ[3]ರ್ಕುವ[4]ರಿ[4]ಗುಂ ಪ್ರತಾಪಾಗ್ನಿಯಿಂ ೭

ಮೇರುವಿನ ಹಳಿಗ[5]ಳಂ[5] ಭಂ
ಡಾರಕ್ಕೆನ್ನಾಣೆ ವಜ್ರಧಾರೆಗಳಿಂದಂ
ಕಾರಿಸಿ ಸಲಿಸದೊಡೆಂದು ಬ
ಲಾರಿಗೆ ದಿವಿಜಾರಿ ರಾಯಸಂ ಬರೆಯಿಸುವಂ ೮

ಬಱಿಂದೆ ತಿರುಗಿದೊಡೆ ಮುಱಿಯಂ
ಕಱಿಯದೆ ವಕ್ರಿಸಿದೊಡುರ್ಚಿ ಮುಕ್ಕುವೆನೆಂದ
[6]ಳ್ಳಿ[6]ಱಿಸಿ ಮಧು ತನಗೆ ಪನ್ನೊಂ
ದಱೊಳಲ್ಲದೆ ಮಿಡುಕಲೀಯನೇೞುಂ ಗ್ರಹಮಂ ೯

ವ॥ ಇಂತೞುಂಬಮುಮಚುಂಬಿತಮುಮಾದ ಭುಜಬಲಲತಾವಲೇಪಮಲ್ಲದೆಯುಮಾತ್ರಿಖಂಡಲಾಧೀಶ್ವರನ ವಿಲಾಸಮಂ ಪೇೞ್ವೊಡೆ

ಅಮರೇಂದ್ರಂ ನಿಜಹಸ್ತದಿಂದಗೆಯನಾಯ್ದುದ್ಯಾನದಿಂ ತಂದು ಕ
ಲ್ಪಮಹೀಜಂಗಳನಿಟ್ಟೆ ಕೇಳಿವನಮಾದೈತ್ಯಂಗೆ ಬಂದೆತ್ತುವಂ
ಕಮಲಪ್ರೋದ್ಭವನಬ್ಜವೃದ್ಧಿಗೆ ಸುಧಾರೋಚಿಃಕಲಾದ್ರೋಣಿಯಿಂ
ಹಿಮವದ್ಭೂಧರದೇತದಿಂ ಗಗನಗಂಗಾವಾರಿಪೂರಂಗಳಂ ೧೦

ವ॥ ಅದಲ್ಲದೆಯುಂ

---

1 ದ (ಎ) 2 ನಿರ್ದತ್ತ (ಅಇಉ) 3 ಪೋ (ಎ) 4 ರಿ (ಅಇಉ)
5 ಳೀಂ (ಅಇಉ) 6 ಳ್ಕ (ಎ)

ವನಿತೆಯರಂ ಮರುಳ್ಗೊಳಿಸುವಾ ಕೃತಿಗಾಗಿರೆ ಮಿಾನಕೇತನಂ
ತನಗರಲಂಬುಗಳ್ತನಗೆ ಕರ್ಬಿನ ಬಿಲ್ ತನಗೇಕೆ ತನ್ನಿಮಾ
ತನನೆನೆ ಬೆರ್ಚಿ ಪೆತ್ತು ಪೆಸರಿಟ್ಟು ಬರ್ದುಂಕಿದನಲ್ತೆ ಕಂತು ನಂ
ದನವನಲಕ್ಷ್ಮಿಗಾದ ಸುತನಂ ಮಧುವೆಂದು ವಸಂತರಾಜನಂ ೧೧

ವ || ಆ ತ್ರಿಲೋಕಪ್ರತಾಪಮಾರ್ತಂಡಮಂಡಳಿಕಮುಕುಟಮಾಣಿಕ್ಯಶೋಣಾಂಶುಪಟಲಪಲ್ಲವೋಪಮುಹರಿಪೀಠಪರಿಸರಪ್ರಾಂತಪ್ರದೇಶಂ ಭೀಮಬಾಹು ದಂಡೋ[1]ತ್ಖಾತಶುಂಭತ್ಪರಿಲತಾಶಾಖಾಯಮಾನಶ್ರೀಕ[1] ವಕ್ರದಾಢಾಕರನಿಶಿತಾಂಶುರೂಕ್ಷರಾಕ್ಷಸಾಂಗರಕ್ಷಕಪರೀತಂ ಪ್ರಸೂನಮಂಜರೀಪುಂಜಾವನಮ್ರಕಂದರ್ಪಕಲ್ಪಲತಾಭಿರಾಮನಿರ್ನಿಮೇಷಯೋಷಾಜನಹಸ್ತಕಿಸಲಯ ಚಮರಜಾನೀಕಪವನಪರಿನಟತ್ಕಂದಲೀಕುಂಡಲಾಗ್ರಕುಂತಳಂ ಸ್ವಾಂಗಮೃಗಮದಾಮೋದವಿಭ್ರಮಭ್ರಮರೀಝಂಕಾರಪರೀತಕಿನ್ನ[2]ರಕನ್ಯಕಾ[2] ಜೇಗೀಯಮಾನ ವೀರವಿತರಣವಿಳಾಸಪ್ರಬಂಧಂ ಜಂಗಮಮೇರುಗಿರಿಶೃಂಗಸಾತ್ಮತೇಯನುಂ ಬಾಹಾಸ್ಫಾಳನಕೋಳಾಹಳವ್ಯಾಕುಳೀಕೃತಯಾಮಸಾಮಜಸ್ತೋಮರಾಜಾಂಗಣಂ ಕೇಕರಾವಲೋಕನಕಾಂತಕೌಮುದೀವಿಭ್ರಮೋಪಾತ್ತ ಸಿದ್ಧವಿದ್ಯಾಧರಗಂಧರ್ವನಾಯಕಮುಹುರ್ಮುಕುಳಿತಕರಕಮಲಷಂಡಮಾನವ ದಾನದ್ವಾರಪಾಲವೇತ್ರದಂಡಾಗ್ರತಿಷ್ಠೋತ್ತಿಷ್ಠಕ್ರಿಯಾಪ್ರತರ್ಜಿತಸೇವಾಸಮಯಾಭಿರಾಮಯಾತದಿಶಾಧಿನಾಥಯೂಥನೊಡ್ಡೋಲಗಂಗೊಟ್ಟಿರ್ದಾ ಪ್ರಸ್ತಾವದೊಳ್

ದ್ಯುನದೀತೋಯಕನತ್ಕಮಂಡಲಕರಂ ಯಜ್ಞೋಪವೀತಾಂಶುಪಾ
ವನಪಕ್ಷಂ ದಶನಚ್ಛವಿಸ್ಫುರಿತವಕ್ತ್ರಾಂಭೋಜನುದ್ಧೂತಭೂ
ತಿನಿಮಗ್ನಂ ಗಗನಾಧ್ವದಿಂದಿೞಿದು ಬಂದಾಸ್ಥಾನಮಂ ಪೊಕ್ಕನ
ರ್ಜುನರೋಚಿರ್ಧವಳೀಕೃತಾಭ್ರತಳ ನಾನಾ ನೀರದಂ ನಾರದಂ ೧೨

ವ || ಅಂತು ಪುಗಲೊಡಂ ಪರಿಹೃತಕೇಸರೀಸಮಾನನುಂ ಪ್ರಕ್ಷ್ಯೋದಪೀತವಪುಃಶಲಾಕನುಮಾನಮತ್ಕಿರೀಟಾಗ್ರಭಾಗನುಂ ಸಂಘಟಿತಕರಕಿಸಲಯನುಮಾಗಿ ತನ್ಮುನಿಪರಿವೃಢನನರ್ಘ್ಯಪಾದ್ಯಪುರಸ್ಸರಮುಚ್ಚಾಸನದೊಳಿರಿಸಿ ತಾನುಂ ನೀಚಾಸನದೊಳಿರ್ದುಬೞಿಯಂ ಕ್ಷೇಮಕುಶಲಸಂಭಾಷಣಾನಂತರಂ

ಎಮ್ಮ ಪುರಾಕೃತಪುಣ್ಯಮೆ
ನಿಮ್ಮಂ ತರೆ ಬಂದಿರಾವಕಾರ್ಯನಿಮಿತ್ತಂ
ಕೆಮ್ಮನೆ ಸಂಭವಿಸುಗುಮೇ
ನಿಮ್ಮ ಸಮಾಗಮುಮುಮಿಷ್ಟದೈವಾಗಮುಮುಂ ೧೩

1 ತ್ಖಾತಶುಭಂಕರಿಲತಾಕಾಯಮಾನಸತ್ವ (ಎ) 2 ರನಿಕಾಯ (ಎ)

ಎನೆ ನಾರದನಿಂತೆಂದಂ
ದನುಜೇಂದ್ರುಂಗಖಿಲಭುವನಭಾಗ್ಯಶ್ರೀಭಾ
ಜನನಂ ನಿನ್ನಂ ಕಣ್ಣಾ
ಱಿ ನೋಡಿ ಮನಮಾಱಿ ಪರಸಿ ಕಂಡುದನಱಿಪಲ್ ೧೪

ವ॥ ಬಂದೆವದೆಂತೆಂದೊಡೆ

ಪ್ರಿಯ[1]ರ್ಗ[1]ಱಿಪಿದುದನಱಿ[2]ಪ[2]ನ
ಪ್ರಿಯನಱಿಯದ ಮಾತನಱಿಪುವಂ ಖಳನದಱಿಂ
ಪ್ರಿಯನಪ್ಪ ನಿನ್ನ ರಾಜ್ಯೋ
ದಯದೊಳ್ ಪೆಱರೊಡ[3]ವನ[3]ನಗೆ [4]ನೋ[4]ಳ್ಪುದಸಹ್ಯಂ ೧೫

ನಿನಗೆಂದುಂ ತೆತ್ತು ಪೊತ್ತೊಕ್ಕಲಿಗರ ಪರಿಯಾಗಿಪ್ಪ ಸೋಮಪ್ರಭಂ ನಂ
ದನರೀಗಳ್ಕೊರ್ವಿ ತಾಮುಂ ಮಲೆದಪರವರುಂ [5]ತೇಳ[5]ಕೊಂಡಂತೆ [6]ಚಯ್ಯು
ೞತ್ರ[6]ನುತಿರ್ಪರ್ ಸಿರಿನಾರಾಯಣರೆಸಕಮನೇವೇಟ್ದಿ ಪೆಂ ದಳ್ಳದಳ್ಳಿಂ
ಬಿನಮುರ್ಕಿಂ [7]ಸೊಕ್ಕಿ[7] ದಕ್ಕುಂದಲೆವರಿ[8]ದುರಿದಪ್ಪರ್ಕರಂ ನಂದಿದಪ್ಪರ್[8] ೧೬

ವ॥ ಆದೊಡಂ

ಕರಿಕಂ ದ್ವಿಜರೊಳ್ಕಿಂಚಂ
ಪರಜಾತಿಯೊಳಾಗೆ ತಲೆಯನೂಱುವರವರಿ
ರ್ಪರೊಳಂ ಕೃಷ್ಣನ ಕಾಯ್ಪು
[9]ಬ್ಬ[9]ರಮುರಿದಪುದೊಮ್ಮೆ ನಿಲ್ಲದವನಲಗೊಱಿಯೊಳ್ ೧೭

ದಾನವಮಾರಿ ದಾನವಕುಳಾಂತಕನುದ್ಧತಚಕ್ರಿಸಿಂಹನೆಂ
ದಾನೆಯ ಕಾಲ್ಗೆ ಪೆಂಡೆಯದ ಪಾಪೆಯನಿಕ್ಕಿದನಾತನೆಂದು ಕ
ಟ್ಟಾನೆಯುಮುಂತುಟಿಲ್ಲ ಸರಿ [10]ದಿಕ್ಕರಿಯೊಳ್ಕರಿಗಿಂದು[10] ನಿನ್ನ ಪಾ
ದಾನತಮಾಗದೇ ಮುಳಿದು ನೀನದನೇಱಲೊಡಂ ಜಗತ್ತ್ರಯಂ ೧೮

---

1 ನ(ಉ) 2 ದಪ(ಉ) 3 ವೆನ(ಉ) 4 ನೂ (ಎ) 5 ತೆಳ್ಳ (ಅ) 6 ಚಚ್ಚುಟ್ಟೆ (ಅ) 7 ದುರ್ಕಿ (ಅಇಉ) 8 ವೃತ್ತಿಪ್ಪದಾರ್ನವೇಂದ್ರಾ (ಅಇಉ) 9 ರ್ಪ (ಅಇಉ) 10 ದಿಕ್ಕಿಲಿಯೊಳ್ಕರಿನಿಂದು (ಎ)

ಧರೆಯಂ ಮುಚ್ಚಿ ಮುಸುಂಕಿಕೊಳ್ವ ತಮದೊಡ್ಡಿಂ ಕಾಯಮಂ ಚಂದ್ರಭಾ
ಸ್ಕರರಿಂ ಕಣ್ಗಳನಬ್ಧಿಭಂಗತತಿಯಿಂ ಕರ್ಣಂಗಳಂ ತಾರಭೂ
ಧರದಿಂ ಕೋ[1]ಟ್ಕ[1]ಳನಂತಕಾನಿಳನಗುರ್ವಿಂ ಮೇಘಮಂ ಕೂಡೆ ಕಂ
ಡರಸಿಟ್ಟಂತಿರಜಾಂಡಮಂ ತಿಳಿದು ತೀವಿರ್ದಪ್ಪುದುಗ್ರದ್ವಿಪಂ ೧೯

ಬಿದುತಟದೊಳ್ತೊಱಂಬೊಳೆವ ಮುತ್ತಿನ ಲಂಬಣದಂತಿರಾಱಲಿ
ರ್ಪುದು ವಿಧುವಾಯ್ತು ಕುಂಭತಳದೊಳ್ತಿಲಕಂ ಬರೆದಂತೆ ತೋಱುತಿ
ರ್ಪುದು ರವಿಮಂಡಲಂ [2]ತೊ[2]ಡೆದ [3]ಭಕ್ತಿಯದಂತಿರೆ[3] ದಾನದೊಪ್ಪಮಂ
ಮದಗಜದುನ್ನತಿಕ್ಕೆಯನದೇವೆಸರ್ಗೊಳ್ವೆ ಧರಾಧಿನಾಯಕಾ ೨೦

ವ|| ಅದಾವುದೆಂದೊಡೆ

ಅದಱ ಬಿದು ಮುಟ್ಟೆ ದಿವಮಂ
ಮದಧಾರಾಸಾರದಿಂ ತಡಂಗಡಿದ ವಿಯ
ನ್ನದಿಯುಸಿತಮಾಗೆ ಮೃಗಮದ
ನದಿಯೆಂದೇವೈಪರಮರರಘಮರ್ಷಣದೊಳ್ ೨೧

ವ|| ಆ ವಾರಣದ ತೋರಹತ್ತ್ರಮಾನುಪೂರ್ವಿಸ್ಥೂಳಮುಮಾಭೀಳಮುಮತಿ ಪ್ರಲಂಬಮುಮಾಗೆ ಸಿಂಬೆಗೊಂಡು ನಖಮುಖದೊಳ್ ಕುಪ್ಪಳಿಸಿ ರೌದ್ರರಸಮಂ ಕಱಿವ ಕಾರಮುಗಿಲೊಡ್ಡು ಕಾಲೂಱಿದಂತಿರ್ಪುದು. ಮತ್ತಮದಱ ಕರ್ಣತಾಳಂಗಳ್ ಜಾಳ ಪ್ರವಾಹಮಾದ ಮದಜಳದ ಕದಡನಡಿಗಡಿಗಪ್ಪಳಿಸಿ ಕರ್ಪುಮಸಗಿ ದೆಸೆಯನಳುರ್ವ ಕೆಂಬೀಡೆಂಬ ಕೆಂಡದ ಕೊಂಡಂಗಳಂ ಬಿಡದೆ ಬೀಸುವ ಕಾಲಾಗ್ನಿರುದ್ರನ ಕೆಯ್ಯ ಕಾಳ ಕೂಟಪಟಲದ ತಾಲವೃಂತದಂತಿರ್ಪುದು. [4]ಮತ್ತಮದಱ ಮೂಱಿಗೊಲೆಯೊ[4]ಳೋರಂತೆ ಪೆತ್ತ್ರನೆತ್ತ್ರರ ನೆಣದ ಮೆತ್ತಿದ ಮದಕದಿಂ ಕಟ್ಟಾಸುರಮಾಗಿ ಮೆಟ್ಟೆ ಬಾಗಿದ ನಿಗ್ಗಮಂಗಳ ಜಾಂಡಪಿಂಡಮನಂಡಲೆಗೊಂಡು [ಮೊಗೆದದ] [5]ನುಂಗಲ್ ನೀಡಿದ ಮೊಗದೊಡ್ಡೆಂಬ ಕಾಳರಕ್ಕಸನ ತೋಳ್ಗಳಂತಿರ್ದಪವು[5]. ಮತ್ತಮದಱ ಕರ್ಣಚಮರದ ಝುಲ್ಲಿಯಂತೆ ಜಲ್ಲೆನೊಳ್ಕೆ ಧಾರೆಗೆದಱಿಪೇರ್ಸೈಸಿ ಸೂಸುವುಭಯಕಟತಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ ಜಗಮನಿಕ್ಕಲೆಂದು ಮಹಾವ್ರತಮನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚ ಜಾಳಂ ಪರ್ಚಿಕ್ಕಿ ಬೇಱಿ ಬೆರ್ಚಿದಂತಿರ್ದಪುದು. ಮತ್ತಮದಱ [6]ಗಾತ್ರಪತಂಗಳು ಕಾಳದ ಕಾಲೆಡೆಗೆ ಬಿಳ್ದ ಜೊನ್ನದಂತಿರಿವೋದಕೋಶಮುಖದೆ ಮುಱಿದುನೊಡೆವಿಟ್ಟು ಪರಿವ ಕೀಲ್ಮದದ ಪೂರದೊಳ್ ಪಾವಸ ಮುಸಗಿದ ನೀಲಗಿರಿಯ ಪಿರಿಯ ದರಿಯೊಳ್ ಪಚ್ಚೆಯ ಪಾಸಱಿ ಪರ್ವಿದಂತಿರ್ದಪುದು[6] ನಡುಪಟ್ಟೆ ಕಟ್ಟಣಕದ [7]ಮು[7]ದದ ಕಾಯ್ಪಿನೊಳೊಲ್ಲನೊನಲ್ದು ಕಲ್ಲನೆ ಕನಲ್ದು ಸಂತಾಪಕ್ಕೆ ಸೈರಿಸದೆ ಹಿಮಕರ ಮಂಡಲಕ್ಕೆ ಕೆಯ್ಯನೆತ್ತಿ

1 ಳ್ಗ (ಅ) 2 ಪೊ (ಎ) 3 ಭತ್ತಗೆಯಂ (ಎ) 4 ಈ ಭಾಗ (ಅಇಉ) ಗಳಲ್ಲಿಲ್ಲ. 5 ಈ ಭಾಗ (ಅಇಉ) ಗಳಲ್ಲಿಲ್ಲ 6 ಈ ಭಾಗ (ಎ) ನಲ್ಲಿ ಮಾತ್ರವಿದೆ 7 ವಾ (ಅಇಉ)

ಬೆರ್ಚಿದ ಹರಿಣಂ, ಮತ್ತೇಂ ಪಾಯ್ದುಕೊಂಡೋಡಿದೊಡೆ ಕೊಳ್ದಪ್ಪಿ ಸುಯ್ದು ಸುಱಿದ ಸೀಕರಾಸಾರದಿಂ ಮಂಜು ಪಂಜರಿಸಿದಂಜನಾಚಲದಂತಿರ್ಪುದಂತುಮಲ್ಲದೆಯುಂ

ದಾನವಸತ್ವಂ ತಾಂ ಸಿಂ
ಹಾನುಕರಂ ಭದ್ರಜಾತಿ ದೇವಾನ್ವಯಮಾ
ದಾನಗಜೇಂದ್ರಂ ಜಗದೊ
ಳ್ಮಾನಱಿವಿನಮಿಲ್ಲ ಬನದೊಳಂ ಶಾಲೆಯೊಳಂ ೨೨

ವ॥ ಎಂದಾ ಮುನೀಂದ್ರಂ ದನುಜೇಂದ್ರನ ಚಿತ್ತಕ್ಷೇತ್ರದೊಳಂ ಶತ್ರು ಸೂದನದೊಳಂ ಕ್ಷೋಭಮುಮಂ ಮಾತಂಗದೊಳ್ ಲೋಭಮುಮಂ ಸಮ ಸಮನೆ ಬಿತ್ತಿ ಬೆಳೆಯಿಸಲೊಡಂ ಕಿಂಚಿದಾಕಳಿತನೇತ್ರತ್ರಿಭಾಗನುಂ ಮುಹುರ್ಮುಹುರುಚ್ಚಾಳಿತಾಂದೋಳಿತಮಸ್ತಕನುಮಾಗಿ

ಎಮಗೆ ತಪಸ್ವಿಗಳ್ಗೆ ನೃಪವಾರ್ತೆಯ ದಂದುಗಮೇವು[1]ದೆಂ[1]ದು ನಿ
ರ್ಮಮತೆಯಿನಿಪ್ಪುದೇ[2]ನ[2]ರಿದೆ ನಿಮ್ಮಡಿಯೆಮ್ಮಯ ಮೇಲೆ ಮಾೞ್ಪ ಮೋ
ಹಮೆ ತರೆ ಬಂದಿದಂ ನುಡಿವಿರೇ ದಯೆಯೆಂಬುದೆ ಕಾರ್ಯಸಿದ್ಧಿ ಮುಂ
ತೆಮಗಭಿವೃದ್ಧಿಯೆಂದಱಿದುಮಿಂ ಬಿಜಯಂಗೆಯಿಮಿಂದ್ರವಂದಿತಾ ೨೩

ವ॥ ಎಂದನುನಯಾಭಿವಾದನಸಮನ್ವಿತಂ ಮಧುಕ್ಕೈಟಭಂ ಕಳಿಪೆ ನಾರ[3]ದಂ[3] ನಾರ[4]ದೆ[4] ನುಡಿದರೆಂಬಂತೆ ಪಿಸುಣ್ಗೆಡೆದು ಸನ್ಮಾರ್ಗಾನುವರ್ತಿಯಾಗಿ

ಕ್ಷೋಣೀಶ್ವರರಿರ್ವರುಮಂ
ಪೂಣಿಸಿ ಮಸೆಯಲ್ಕೆ ಬಗೆದು ತತ್ಸಭೆಯಂ ಗೀ
ರ್ವಾಣಮುನಿ ಪೊಱಮಡುತ್ತುಂ
ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮುಗುೞ್ದಂ ೨೪

ವ॥ ಅಂತು ಮುಗುೞ್ದಾತಂ ದ್ವಾರಾವತಿಗೆ ಬಂದು ತದ್ರಾಜಭವನದೊಳ್ [5]ಗೋ[5]ಮಿನೀ ಚೂಡಾ[6]ಕ[6]ಲ್ಪದಂತೆ ಮೆಱೆವ ಲಕ್ಷ್ಮೀನಿಲಯಮೆಂಬ ಕರುಮಾಡದುಪರಿಮತಳದ ಮಣಿರಂಗದೊಳ್ ವಿದ್ಯಾವಿನೋದಗೋಷ್ಠಿಯೊಳಿರ್ದ ಸುಪ್ರಭಪುರುಷೋತ್ತಮರಲ್ಲಿಗೆ

ಬರಲೊಡಮಿದಿರೆೞ್ದತ್ತರ್ಘ್ಯಮುಂ ಪಾದ್ಯಮುಂ ಬಿ
ತ್ತರಿಸಿ ಪೊಡೆಮಡುತ್ತುತ್ತುಂಗಪೀಠಾಗ್ರದೊಳ್ಕು
ಳ್ಳಿರಿಸಿ ಬೞಿಯ [7]ನಿ[7]ಮ್ಮೊಂದೆೞ್ತಿರಂ [8]ನಿ[8]ಮ್ಮದೊಂದೆ
ೞ್ತಿರವು ಪೊಸತದೆಂದಿಂದಿತ್ತ ಚಿತ್ತೈ[9]ಸಿ[9] ಬಂದಿರ್ ೨೫

---

1 ದೊಂ (ಅಇಉ) 2 ವ (ಅಇಉ) 3 ದ (ಅಇಉ)
4 ದಂ (ಅಇಉ) 5 ರಾಜ್ಯಗಾ (ಅಇಉ) 6 ತ (ಅ) 7 ಮೆ (ಎ)
8 ನಿ (ಎ) 9 ಸಿ (ಅಇಉ)

ಕ್ಷೇಮದಿನಿರ್ದಿರೇ ಕುಶಲಮೇ ಮುನಿಮಾಳಿಗೆ ಸಂತಮೇ ಗ್ರಹ
ಸ್ತೋಮದ ವರ್ತನಕ್ಕೆ ಸುಖಮೇ ಸುರಕೋಟಿಗೆ ಕಲ್ಪಭೂರುಹಾ
ರಾಮಫಲೋದಯಕ್ಕೆ ನಿರವಗ್ರಹಮೇ ನಿಜಕಾಮಧೇನುವುಂ
ಕಾಮಿತಹವ್ಯಕವ್ಯರಸದಾಯಕಮೇ ಮುನಿಮೌಳಿಮಂಡನಾ ೨೬

ವ॥ ಎಂಬುದುಮಂಬುರುಹಗರ್ಭನಂದನನಿಂತೆಂದಂ

ಎಮ್ಮನದೇಂ ಕೇಳ್ದಪ್ಪೈ
ನಿಮ್ಮಱಿಯದುದೇ ಚರಾಚರಸ್ಥಿ[1]ತ[1]ಕರಣಂ
ನಿಮ್ಮವತಾರದೆ ನೀಂ ಕ್ಷೇ
ಮಂ ಮುನ್ನಂ ಪೇೞಿಕೊಳ್ವುಡುಂತು ಸರ್ವಕ್ಷೇಮಂ ೨೭

ವ॥ ಅದೆಂತೆಂದೊಡೆ

ಈ ಕಾಶೀವಿಷಯಾಬ್ಧಿಯೊಳ್ ವಿಷಮೆ ಮೂಡಿರ್ದಂತೆ ಲೋಕೈಕಲುಂ
ಠಾಕಂ ದಾನವಮೂರ್ತಿ ಮೂಡಿ ಮಧುವೆಂಬಂ ದುರ್ವಿನೀತಂ ನಿಜ
ಸ್ವೀಕಾರಪ್ರತಿಘಾತಕಂ ಕದಡಿ ತಾನೆಯ್ದಿತ್ತು ಲೋಕಂ ನಿರಾ
ಲೋಕಂ ಮರ್ಕಟಹಸ್ತದುಸ್ತ್ರುಟಿತ ಮಲ್ಲೀಮಾಲಿಕಾವಸ್ಥೆಯಂ ೨೮

ಬೇಡಂ ತರುಶಾಖಾಖಗ
[2]ನೀ[2]ಡಮನಳ್ಳಿಱಿದು ದೋಂಟೆಯಿಂ ಕೆದಱುವವೊ
ಲ್ಕೂಡೆ ನಿಜತೇಜದಿಂದಂ
ಗೂಡಾಡಿ ಸುತಿರ್ಪನಮರಲೋಕಮನಸುರಂ ೨೯

ಹುತ [3]ಮುನಿದು[3] ಕೆಟ್ಟುಪೋದುದು
[4]ಕಿತವಾ[4]ಹರಣಂಗಳಿಂದೆ ತಪಮಧ್ಯಯನ
ಪ್ರತಿಯುಂ [5]ಶ್ರು[5]ತಿಯುಂ ಸ್ಮೃತಿಗಂ
ಸ್ಮೃತಿಗಳ್ ಗೆಂಟಾದುವಮರಮುನಿಮಂಡಲದೊಳ್ ೩೦

ಅರವಱಿಸದೆ ಮಧುಮದದಿಂ
ಸುರತಾಸಕ್ತೆಯ ಕುಚಂಗಳೆಂತಂತೆ ನಿರಾ
ವರಣಂಗಳಾಗಿ ಪರಿವುವು
ಕರಪೀಡನದಿಂದಮಗ್ರಹಾರಚಯಂಗಳ್ ೩೧

---

1 ರ (ಎ) 2 ಱೀ (ಎ) 3 ತಪಮೆನೆ(ಎ) 4 ಕುತಪಾ (ಎ)
5 ಸ್ಮೃ (ಅಇಉ)

ಗುರುಲಘುಗಣನಂ ಕೆಟ್ಟುದು
ಪಿರಿದಾದುದು ವರ್ಣಸಂಕರಂ ದಾನವನಿಂ
ದೊರೆಯಾದುದು ಭೂವಲಯಂ
ಪರಿಣತನಲ್ಲದನ ಕವಿತೆಗಂ ಚಿತ್ರಕ್ಕಂ ೩೨

ಅದು ಕಾರಣದಿಂ [1]ನಿಮ್ಮ[1]
ಭ್ಯುದಯಮೆ ತಾ[2]ನೆ[2]ಮಗೆ ನಿತ್ಯಕರ್ಮಾನುಷ್ಠಾ
ನದ [3]ಪರಮಸೇವೆಯೆಂ[3]ದತಿ
ಮುದ[4]ದಿಂದಭ್ಯುದಯ[4]ಮಾಗೆ ಪರಸಲ್ಬಂದೆಂ ೩೩

ಕಾರಣಪುರುಷರಿರವನೀ
ಭಾರಧುರಂಧರ[5]ದಿರು[5]ಗ್ರಶಾತ್ರವಕುಲಸಂ
ಹಾರಕ್ಕೆ ನೀಮೆ ನಿಮ್ಮವ
ತಾರಂಗಳ್ ಸಕಲಲೋಕಸುಕೃತಫಲಂಗಳ್ ೩೪

*ಮೇಗಾಯ್ತು ಯಾದವಾನ್ವಯ
ಮಾಗಳ್ ನಿಮ್ಮುದಯದಿಂದಮುಖಿಳಾನ್ವಯಕಂ
ಯಾಗಂ ದಾನಂ ಧರ್ಮಂ
ಚಾಗಂ ನಿಮಿರ್ದಪುವು ನಿಮ್ಮ ತಲೆ ನಿಮಿರಲೊಡಂ ೩೫

*ತೀವಿದುವು ಮಖದ ನಿರ್ಬಂ
ಧಾವಳಿಗಳ್ಕಮಳನಾಭ ನೀನುದಯಿಪುದುಂ
ಪಾವಕಮಾನಸನೀಯಂ
ದೇವರ್ಕಳ ಬಾಯ ಬಿಯಗಮಂ ಕಳೆಯಿಸುವೈ ೩೬

ಕಣ್ಬಡೆದ ಫಲಂ ಶುಭಮಂ
ಕಾಣ್ಬುದೆ ವಲಮುಖಿಳಶುಭನಿಧಾನರ್ನಿಮ್ಮಂ
ಕಾಣ್ಬನಿತುವಡೆದು ಕುರುಡಂ
ಕಣ್ಬಡೆದವೊಲಾದುವೆಮ್ಮ ಜನ್ಮವೆ ಸಫಲಂ ೩೭

1 ನಿಮಗ (ಅಇಉ) 2 ಮೆ (ಅಇಉ) 3 ಪ್ರಶಮೆಯಪ್ಪುದೆಂ (ಅಇಉ) 4 ದಿನದಾಯೊದ (ಎ) 5 ತೆಗು (ಅಇ) ರೆಗು (ಉ)

* 'ಎ'ಯಲ್ಲಿಲ್ಲ.

ಉದ್ವೃತ್ತರ್ಸ್ಥೈರ್ಯರಿಸುವರೆ
ಸದ್ವೃತ್ತರ ನಿರತಿಶಯಸಮುದ್ಭೂತಿಗದೇ
ನುದ್ವೇಗಂಬಡೆಯದೆ ಭಾ
ಸ್ವದ್ವಲಯಾಭ್ಯುದಯಮಾಗೆ ಗೂಗೆ ನಿತಾಂತಂ ೩೮

ವ॥ ಅದುಕಾರಣದಿಂ

ನೀಮಾ ದೈತ್ಯನ ಕಣ್ಣ ಮುಳ್ ಮನದ ಶೂಲಂ ನಿಮ್ಮ ಬಾಹಾಬಲಂ
ಸೀಮಾತೀತಮಸೂಯೆಯಂ ಪಡೆಯದಾರ್ಗುಂತುಂ ಧರಾಚಕ್ರಿ ತಾಂ
ಸಾಮಾನ್ಯರ್ಪೆಱರಿಂದವುಂಕದಿರನಾತಂ [1]ತ[1]ಮ್ಮನಂತೌಂಕಿದಂ
[2]ದೇ ಮಾತಕ್ಕು[2]ಱಿದಿರ್ಪುದಾರ್ಜಿಸುವುದಿನ್ನಂ ಮಂತ್ರತಂತ್ರಂಗಳಂ ೩೯

ವ॥ ಮತ್ತಮೊಂದು ರಹಸ್ಯಮುಂಟದಂ ನಿಮ್ಮ ಮನದೊಳಱಿದಿರ್ಪುದದೆಂತೆಂದೊಡೆ

ಒಳಗಾರಯ್ಯುತುಮಿರ್ಪೆಮಾಮುಮೆಮಗಂತೇವಾಸಿಯಾಗಿರ್ಪ ಕಾ
ಪಿಳಮಿ[3]ಶ್ರಂ[3] ಮಧುವಿಂಗೆ ಸ[4]ಲ್ಗೆ[4]ಯ ಪುರೋಧಶ್ರೇಷ್ಠನಂತಾ ಸಭಾ
ಸ್ಥಳದೊಳ್ಪುಟ್ಟಿದ ವಾರ್ತೆ ತಾಂ ವಿದಿತಮೆಂದೇಕಾಂತದೊಳ್ನಾರದಂ
ಬಳಕೃಷ್ಣರ್ಗವತಂಸದಂತೆ ಕಿವಿವೊಕ್ಕೇನಾನುಮಂ ಪೇೞ್ದಂ ೪೦

ಪೇೞ್ದ ನಡೆನೋಡಿ ಪೊಲ್ತಿಂ
ಬೆೞ್ದ ತೆಱದಿಂದಮೆಟ್ಟಿನುಷ್ಠಾನದ ದೇ
ವಾರ್ಚನದ ಸಮಯಮೆಮಗಿದೆ
ಸಾೞ್ದುಡಿಂ ನಿಮಗೆ ಸಕಲ ಮಂಗಳವಿಜಯಂ ೪೧

ವ॥ ಎಂದಮೋಘವಚನದಿಂ ಪರಸಿ ಮತ್ತಮಶೇಷಕಾರ್ಯಪರ್ಯಾಪ್ತಿಗಳೊಳಮವಹಿತಚಿತ್ತರುಮಪ್ರಮತ್ತರುಮಪ್ಪುದೆಂದಾ ಮುನೀಂದ್ರನಂ ಬಲೋಪೇಂದ್ರರ್ ಪೊಡೆಮಟ್ಟು ಕಳಿಪೆ ಪೊಡೆವಟ್ಟ ಸೆಂಡಿನಂತೆ ಗಗನಕ್ಕೊಗೆದನನ್ನೆಗಂ ಮಧುಕೈಟಭಂ ಕಳಿಪಿದ ದೂತಂ ಬಂದು ಬಾಗಿಲೊಳಿರ್ದುದಂ ದೌವಾರಿಕಪರಿಜ್ಞಾತಂ ಕಂಚುಕಿ ಬಂದು ಬಿನ್ನವಿಸಲೊಡಮಲ್ಲಿಂ ತಳರ್ದು ಪರಿಷನ್ಮಂಡಪಕ್ಕೆ ಬಂದು ಸುಪ್ರಭಂ ಸೋಮಪ್ರಭನೃಪೇಂದ್ರ ಪಾದಪದ್ಮಾಂತಿಕದೊಳ್ ಪದ್ಮನಾಭಸಮನ್ವಿತಪರಿಜನಪರೀತನವಸರಂಗೊಟ್ಟು ದೂತನಂ

1 ನಿ (ಎ) 2 ದೇಮಾತಟ್ಟು (ಅಇಉ) ತೇಮಾತಕ್ಕು (ಎ) 3 ತ್ರಂ (ಅಇಉ) 4 ಲ್ಕೆ (ಅಇಉ)

ಬರಿಸಿ [1]ಕೊಳ್[1]ಲೊಡನಾತಂ ಕಂಡು ವಿನಯವಿನಮಿತೋತ್ತಮಾಂಗನಾಗಿ ಸಮುಚಿತಾಸನದೊಳ್ಕುಳ್ಳಿರ್ದಿಂತೆಂದಂ

ಅಭಿಜನವತ್ಸಲಂ ನೃಪಶಿರೋಮಣಿಪೀಠಪದಾಂಬುಜಂ ಬಲ
ತ್ರಿಭುವನಚಕ್ರವರ್ತಿ ಖಚರೋರಗಕಿನ್ನರ[2]ಗೀ[2]ಯಮಾನದೊಳ್
ವಿಭವದೊಳಿಂದ್ರಸನ್ನಿಭ[3]ಕುಲೋದ್ಧರಣಂ ಮಧುಕೈಟಭಂ ಭವ
ತ್ಪ್ರಭುಗುಣಪಾಲಕಂ ಬೆಸಸಿದಂ ಶರಣಾಗತವಜ್ರಪಂಜರಂ ೪೨

ವ|| ಎಂದು ತದನಂತರಂ ಪ್ರತಿಹಸ್ತಹ[4]ಸ್ತಾನೀತ[4] ಲೇಖಪ್ರಾಭೃತಂಗಳಂ ಕಳೆದುಕೊಂಡು ಸಂಧಿವಿಗ್ರಹಿಯ ಕೈಗೆ ನೀಡುವೆಡೆಯೊಳ್ ಪುರುಷೋತ್ತಮಂ ಮುನ್ನಮನ್ನೆಗಂ ನಿನ್ನ ಬಂದ ಕಾರ್ಯಮನೆ ಪೇಳೆಂಬುದುಮಾತನಿಂತೆಂದಂ

ಪೊಗಟ್ಟಿರ್ದಾನವರಾಜನೋಲಗದೊಳಿರ್ದಾರೋಹಕರ್ನಿಮ್ಮದಂ
ತಿಗಳೊಳ್ ವೈರಿಘುಳಪ್ಪನಂ ಕುಳಿಸಿಯಂ ದೇವರ್ಗೆ ಚೌದಂತನೋ
ಲಗಮೆಂದಂಕುಶಮಿತ್ತನಾಗಳದುವಂ ಕೈಕೊಂಡು ನಿಮ್ಮಲ್ಲಿಗಾ
ಜಗದೇಕಪ್ರಭು ಪಕ್ಕೆಸಾರಿಗಿದುವೇಟ್ಕುಂ ತ[5]ಕ್ಕು[5]ದೆಂದಟ್ಟಿದಂ ೪೩

ಕುಡುವುದು ಬೇಟ್ಪುದಂ ಕಳೆದುಕೊಳ್ವುದು ವಕ್ರತೆಯಿಲ್ಲದುಳ್ಳುದಂ
ನುಡಿವುದು ಲೇಸನುದ್ಭವಿಪ ಪೊಲ್ಲಮೆಯುಂ ಮಱೆದೇಕ[6]ಮಾರ್ಗ[6]ದೊ
ಳ್ನಡೆವುದು ಹಾನಿವೃದ್ಧಿಯೊಳಭೇದಕನಪ್ಪುದು ಭೋಗ್ಯವಸ್ತು ಬಂ
ದೊಡೆ ಸಮನಾಗಿ ಭೋಗಿಸುವುದಿಂತುಟು ಸಜ್ಜನಬಂಧುಲಕ್ಷಣಂ ೪೪

ಇದು [7]ನಾಯಂ[7] [8]ನಿಮಗಾದಿಯಿಂ[8] ನಯವಿದಂ ನಿಮ್ಮಂ ಮಮಸ್ವಾಮಿ ಕೂ
ಡಿದರೊಳ್ತೆಳ್ಳಿದನಾದ ಬಂಧುಕೃತಿಯುಂ ಪಾರಂಗಮಂ ಮಾಡಲಾಂ
ತ್ವದಧೀನಂ ಬಟುಕೇನಿದಿ[9]ರ್ಚಿದು[9]ಪಸಾಯಂ ರಾಯಸಂ ತ[10]ಳ್ವ[10]ಲಾ
ಗದು ಕೈಕೊಳ್ವುದು ಮಾಟ್ಪುದತ್ಯಧಿಕರೊಳ್ಸಂಪ್ರೀತಿಸಾಮಾನ್ಯಮೇ ೪೫

ವ|| ಎಂದು ದೂತನ ಮಾತಿಂಗೆ ನೀತಿರತ್ನಾಕರಂ ದೋಷಗರ್ಭೀಕೃತದರಹಸಿತವದನನುಂ ಕಿಂಚಿದಾಂದೋಳಿತಮಸ್ತಕನುಮಾಗುತ್ತುಮಾಗಳಿಂತೆಂದಂ

---

1 ಕಾಣಿಸ (ಅಇಉ) 2 ಗೇ (ಅಇಉ) 3 ನೋರ್ವೀಭರನುದಗ್ರದಾನವ (ಎ) 4 ಸ್ತಂಗಿತ್ತಂ (ಅಇಉ) 5 ಟ್ಕು (ಎ) 6 ವಾಕ (ಅಇಉ) 7 ನೈಜಂ (ಎ) 8 ನೃಪಗಾಡಿಯಿಂ (ಅಇಉ) 9 ರ್ಚೆರು (ಎ) 10 ಳ್ಪ (ಅಎ)

ಮೊದಲೊಳ್ದಂಡೋಕ್ತಿಯಂ ಮಾಡಿದೆಯದು ಹೃದಯಂ ನಿನ್ನನಾಳ್ದಂಗೆ ನೀನಾ
ಡಿದ ಸಾಮಂ ಭೇದಮುಂ [1]ಕೂ[1]ಡಿದ ಬೆರಗು ಕರಪ್ರಾಭೃತಚ್ಛಾಯೆಯಿಂ ತೋ
ಱಿದ ದಾನಂ ಮಂತ್ರಿಗಳ್ಗಿಲ್ಲೆಡೆ ನುಡಿವರ ಮಾ[2]ತಿಕ್ಕೆ[2] ನಿಮ್ಮೋ[3]ಜೆ[3]ಯಂ[3] ಮೆ
ಚ್ಚಿದೆವಾ ಮಾತಿರ್ಕೆ ನಿಮ್ಮಾಳ್ದನ ಮನದೊಳಗಿರ್ದಂತುಟಂ ಮಾಡಲಕ್ಕುಂ ೪೬

ವ॥ ಎಂದು ಬಱಿಕ್ಕೆ ಲೇಖಮುಂ ಪಾವುಡಮುನಭಿಜ್ಞನ ಗಾಹೆಯಂತಿರ ಲೋದಿಸದೆಯುಂ ಶೋಧಿಸದೆಯುಮುನ್ನೆಗಮಾತನಂ ಬೀಡಿಂಗೆ ಕಳುಪಿಯೆಂದ ಮುಕುಂದನ ವಚನದಿಂ ಕನಕಪಾತ್ರಪ್ರಣಿಹಿತತಾಂಬೂಲ ಪ್ರಶಸ್ತಹಸ್ತನಾದ ಸಂಧಿವಿಗ್ರಹಿಯ ಕೆಯ್ಯಂ ನೂಂಕುತ್ತುಮಾತನಿಂತೆಂದಂ

ನಿತ್ತರಿಸದೆ ಚಕ್ರಿಗೆ ಬೆ
ನ್ನಿ[4]ತ್ತು ಮೊದಲ್ಗಿಡಿಸಿ ತೆತ್ತು[4] ಬಿರುದಂ ತಲೆಯೊಳ್
ಪೊತ್ತ ಪೊಱೆಗಂಡುಗೆಯ್ತ್ತದೆ
ಸತ್ತ ಮಹೀಭುಜರನಾರನಾರಂ ಪೋಲ್ವರ್ ೪೭

ಮಚ್ಚರದಾಯಮುಂ ಮಱೆದು ಕೈದುಗಳಂ ತೊಱೆದುಟ್ಟು ತೊಟ್ಟ ಪೆ
[5]ಣ್ಬು[5]ಚ್ಚಮೊಡಂಬಡಂ ಪಡೆ[6]ಯೆ[6] ಮೈಲೆಯ ನಚ್ಚನೆಯಂತೆ ಸೂಲಮುಂ
ಬಚ್ಚಿಸಿ ಪೊತ್ತುಗೂಡಿಡುವ ಗುಬ್ಬಿಗಳಂತಿರೆ ಬಾಗಿಲಲ್ಲಿ ಪು
ಲ್ಗಚ್ಚಿ ಪುಗುತ್ತುಮಿರ್ಪರರಿಭೂಮಿಭುಜರ್ಮಧುಕೈಟಭೇಂದ್ರನಾ ೪೮

ಬ[7]ರೆದ[7]ಟ್ಟಲ್ ರಾಯಸಕ್ಕಿಲ್ಲಿಳೆಯೊಳರಸುಗಳ್ದಿಗ್ಜಯಕ್ಕೊರ್ಮೆ ದೈತ್ಯಂ
ಭರದಿಂ ಸೂಟ್ಸೈಸಲಿಲ್ಲೆಣ್ದೆಸೆಯ ದಿಗಧಿಪರ್ತನ್ನ ತೇಜ :ಪ್ರತಾಪಂ
ಮುರಿದೇಟಲ್ಕಿಲ್ಲ ಮೂಱುಂ ಜಗಮುತುಳಬಳಂಗಳ್ಕದೀಮಾತನಾಡ
ಲ್ನಿರುತಕ್ಕೆಂದೊರ್ವರಿಲ್ಲಿಲ್ಲೆಣೆ ನಿಮಗೆ ವೃಥೋನ್ಮತ್ತರೊಳ್ಸತ್ತುಬಲ್ಲರ್ ೪೯

ವ॥ ಎಂದು ಒಱಿಕ್ಕೆ ಸೋಮಪ್ರಭನ ಮೊಗಮುಂ ನೋಡಿ

ಜಗತೀನಾಥನ ಕೊಟ್ಟ ರಾಯಸಕಮಿಟ್ಟಾಳಾಳ್ದನೊಲ್ದಟ್ಟಿದುಂ
ಡಿಗೆಗಂ ನೀ ಬೆಸಕೆಯ್ದು ಮಂಡಲಿಕನಾದ್ಯೈ ಕೇಡುಗಾಲಕ್ಕೆ ತಾ
ಮೊಗೆವರ್ತೆೞಱೂಗೆನಂತಿವರ್ನಿನಗೆ ಪಾವಂ ಪೆತ್ತವರ್ಬೇಲಿಯಂ
ಪುಗುವಂತಪ್ಪುದರಣ್ಯಮುಂ ಪಡೆದು ನೀನೀ ಮಕ್ಕಳಂ ಮೊಕ್ಕಳಂ ೫೦

---

1 ಮಾ (ಎ) 2 ತಲ್ತು (ಅಇಉ) 3 ಯಿಂ(ಅಇಉ) 4 ತ್ತಮೊದವಿದಿಸೆತೆತ್ತ (ಎ) 5 ಣ್ಬ (ಆಇಉ) 6 ಯ (ಅ) 7 ರಲ (ಆಇಉ)

ವ॥ ಎಂದು ತನ್ನಾಳ್ದನ ಭುಜಬಲಪ್ರತಾಪಲೇಪಮನೆ ಮುಂದಿಟ್ಟು [1]ದಂಡ[1]ಮನೆ ಗಂಡುಗೆದಱಿದ ದೂತನ ಮಾತಿಂಗೆ ಮುಳಿಪೊಯ್ದು ನೆಗೆವ ಜಳಧರ ಗಭೀರಧೀರಧ್ವಾನದಿಂ ದಾನವಧ್ವಂಸಕನಾಗಳಿಂತೆಂದಂ

ನಿನಗೇನೆಂದುತ್ತರಂಗೊಟ್ಟಪುದಱಿಕೆಯ ದೂತಿಂಗೆ ನಿನ್ನಾಳ್ದನೆಮ್ಮಂ
ಮೊನೆಯೊಳ್ಪಂದಾಂತು ಕೈಮಾಡಿದೊಡೆ ಬೞಿಕೆ ನೀಂ ಬೇಡುವು[2]ಗ್ರ[2]ದ್ವಿಪೇಂದ್ರಂ
[3]ಮೊ[3]ನೆಯೊಳ್ ತೂಗಾಡೆ ನೀಡುಂ ತಲೆ ಪರವಶದಿಂ ಮೆಚ್ಚಿ ಕಣ್ಮು[4]ಚ್ಚುತಾ[4]ಹಾ
ಯೆನೆ ಕಾಣ್ಬೈ ನಾಳೆ ನೀಂ ಬಿತ್ತರಮೆರ್ದೆವುಗುವಂತುತ್ತರಂಗೊಟ್ಟ[5]ಕೋಡಂ[5] ೫೧

ವ॥ ಎಂದು ಮತ್ತಂ

[6]ಬರೆದ[6]ಟ್ಟಿಟ್ಟಿ[7]ಯಿ[7]ನಿಟ್ಟಳಂ ಮೆಱೆವುದೇ ಕಟ್ಟಾಳ್ತನಂ ಪೋಗು ನೀ
[8]ಬ[8]ರವೇ[9]ಳ[9]ಣ್ಮುವೊಡಣ್ಮದಿರ್ದೊಡಿರವೇ[10]ಳಾಂ[10] ಬರ್ಪೆವೀ ಜ[11]ರ್ವು[11] ಸಂ
ಗರಮಂ ನೋಡುವ ದೇವಕೋಟಿಯ ಮನಂ ಕೌತೂಹಳಾವಗ್ರಹಂ
ಬೆರಸಾಂತಿರ್ವರ ಬಾಳ ಬಾಯ್ಗಳ ಬೞಿಂ ಪಿಂಗಲ್ಕೆವೇಡಂ ಗಡಾ ೫೨

ಏೞ್ಕೆಳ[12]ಕೆ[12] ದನುಜನಂ ಬರ
ವೇೞ್ಕಾದು[13]ವಡೆಂ[13]ದು ಸಮಯಸಮುಚಿತಧನಮಂ
ನೀೞ್ಕರಿಸದಿತ್ತು ಚರನಂ
ಬೀೞ್ಕೊಡೆ ಕೃಷ್ಣಂ ಬೞಿಕ್ಕಮಾ ಹಲಹಸ್ತಂ ೫೩

ಸಹಜನ್ಮನುತ್ತರಂಗೇ
ಳ್ದು ಹಸ್ತಿನಾಪಾದಯುದ್ಧ[14]ಮದು[14] ಬಳವದ್ವಿ
ಗ್ರಹಮೆಂಬವೊಲಸಮರಣಾ
ಗ್ರಹ[15]ಕ್ಕೆ[15] ಬೆಱಗಾದ [16]ತಾತ[16]ನಂ ಬಗೆಗೊಳಿಸಲ್ ೫೪

---

1 ಪಂಥ (ಎ) 2 ಗ್ರಾಂ (ಅಇಉ) ಗ (ಎ) 3 ಗ (ಅಇಉ)
4 ಚ್ಚಿರಾ (ಎ) 5 ಕೊಂಡಂ (ಎ) 6 ಚರವ (ಅಇಉ) 7 ಯ (ಎ)
8 ನಿ (ಅಇಉ) 9 ಡ (ಅಇಉ) 10 ಡಾಂ (ಅಇಉ) 11 ರ್ವ (ಎ)
12 ದೆ (ಅಇಉ) 13 ವುದಾ (ಅಇಉ) 14 ಮಿವ (ಎ) 15 ಣಕೆ
(ಅಇಉ) 16 ತಮ್ಮ (ಎ)

ವ॥ ಆ ಸಭಾಸನದಿಂದಮೆೞ್ದು

ವಿಗತಾಂತರ್ವಲ[1]ಯಂ[1] ವ್ಯಪೇತಪೃಥುಕಂ ನಿಸ್ತಂಭರಂಗಂ ನಿರ
ಸ್ತಗವಾಕ್ಷಂ ವ್ಯಪಸಂಭೃತಪ್ರತಿರವಂ ನಿಷ್ಕೀರವಮಾಮಂತ್ರಶಾ
ಲೆಗೆ ಬಾಹಾಜಯನಾಟ್ಯಶಾಲೆಗಧಿರಾಜ್ಯಶ್ರೀವಧೂಸೂಚ್ಯಶಾ
ಲೆಗೆ ವಂದಂ ಜನಕಾನುಜರ್ವೆರಸು ವಿಕ್ರಾಂತಪ್ರಭಂ ಸುಪ್ರಭಂ ೫೫

ವ॥ ಬಂದು ಪುರಂದರನಂತೆ ಸಚಿವಸುಮಂತ್ರಿ ಸಮನ್ವಿತಂ ಸುಖಾಸೀನನಾಗಿ
ರ್ದಲ್ಲಿ ಬಲಭದ್ರಂ ಭದ್ರಬಲನೆಂಬಮಾತ್ಯಮುಖ್ಯನ ಮೊಗಮಂ ನೋಡಿ

ಒಡೆಯರಿವರೆಂಬ ಭಯಮುಮ
ನೊಡವೆಯ ಲೋಭಮುಮನುೞಿದು ನಿಮ್ಮಭಿಮತಮಂ
ನುಡಿವುದುಭಯಲೋಭಂಗಳ
ಪಡೆಮಾತಱಿವಂಗವೊಪ್ಪಮಲ್ತಿಱಿವಂಗಂ ೫೬

ವ॥ ಎಂದು ನುಡಿದ ನೀತಿನಿರ್ಮುಚ್ಚರನ ಪೂರ್ವಪಕ್ಷಸ್ಥಾಪನಾನುಕೂಲ್ಯಮನೆ
ಸೋಮಪ್ರಭಮಹಾರಾಜನೀತೆಱದಿನನುವದಿಸಿದಂ

ಮಂತಣಕೆ ಮತ್ಸರ ಬೇ
ಡಂತಾದೊಡೆ ಕಾರ್ಯಹಾನಿ ನುಡಿವುದು ಬಲ್ಲರ್
ತಂತಮ್ಮ ಮತಮನವಱೊಳ
ಗಿಂತಿದು ನಿರ್ವಹಣಮೆಂದು ತಱಿಸಲ್ಗಱಿವಂ ೫೭

ವ॥ ಎಂಬುದುಮಾ ಭದ್ರಬಳನಿಂತೆಂದಂ

ಸದನಂ ಷಾಡ್ಗುಣ್ಯಪುಣ್ಯಕ್ಕವಧಿ ಚತುರುಪಾಯಕ್ಕೆ ಪಂಚಾಂಗ ಮಂತ್ರ
ಕ್ಕುದಯಂ ಶಕ್ತಿತ್ರಯಕ್ಕುನ್ನತಿ ಚತುರುಪಧಾಶುದ್ಧಿಗುದ್ಬುದ್ಧಿ ನಿತ್ಯಾ
ಭ್ಯುದಯಂ ಸಿದ್ಧಿ ತ್ರಯಂಗಳ್ಗೆನಿಸಿದುದು ಭವನ್ಮಾರ್ಗಮೆಮ್ಮುಕ್ತಿಗಳ್ ನಿ
ಮ್ಮಿದಿರೊ[2]ಳ್ಸ[2]ಲ್ವನ್ನೆಗಂ ಚಂದ್ರನ ಬೆಳಗಿನೊಳೇಂ ತಾರಕಕ್ಕುಂಟೆ ತೇಜಂ ೫೮

ವ॥ ಆದೊಡಮೆನ್ನಱಿವನಿತನಾಂ ಬಿನ್ನವಿಸಿದಪ್ಪೆನಾತ್ಮಪರಪಕ್ಷ[3]ಬಾಹುಲಾ
ಬಹುಲ[3]ತೆಯುಮಂ ಕ್ಷಯವೃದ್ಧಿಸ್ಥಾನಮುಮಂ ದೇಶಕಾಲ ಪ್ರವರ್ತಮುಮಂ ಪಂಚ
ಪ್ರಕಾರದೊಳ್ ವೈರಕಾರಣಮುಮನಾರಯ್ದು ನೆಗೞ್ದಂಗೆ ವಿಜಯಸಿದ್ಧಿ ಎಂಬುದನುಕ್ತ
ಸಿದ್ಧಮದಱಿನಾ ಮಧುಕೈಟ[4]ಭನವನ[4] ನಮ್ಮಂತರಂ ಸಕಲಸಾಮಗ್ರಿ[5]ಯೊಳು ಕುಲಕುಧರ
ಸ್ಥೌಲ್ಯ [5]ಕುಲಿಶತಾನವ ಪ್ರಾಯಮಂತುಮಲ್ಲದೆ

1 ಜಂ (ಅಇಉಎ) 2 ಕ್ಷಿ (ಎ) 3 ಬಳಾಬಳ (ಎ) 4 ಭ (ಎ)
5 ಯೊಳ್ಕುಶಲಕಂ ಪರಸೈನ್ಯಶೈಲ (ಅಇಉ)

ಕ್ಷಯವೃದ್ಧಿಗಳೊಳ್ ದನುಜಂ
ಕ್ಷ[1]ಯಿ ನೀಂ ವರ್ಧಿಷ್ಣು[1] ದೇಶಕಾಲಸ್ಥಿತಿಗಾ
ರಯೆ ಕಡುನಿಡಿದುಡಿಗುಂ ಗಾ
ಳಿಯ ಪೊಯ್ಲಿಂದಿಳೆಯ ಬೆಳೆದ ಸಸಿ ಮುಱಿದಪುದೇ ೫೯

ವ॥ ಆದೊಡಂ ನಮ್ಮ ಭುಜಬಲದ ವಿಜಿಗೀಷುವೃತ್ತಿಯನೆ ಮುಂದಿಟ್ಟು ಪಂತಗವೃತ್ತಿಯನೆ ನೆಗಟ್ವುದುಚಿತಮಲ್ಲದು ಸಮಯೋಚಿತಕ್ಕೆ ತಕ್ಕಂತೆ ನೆಗಟ್ವುದೆ ಮಂತ್ರಮದೆಂತೆನೆ

ಮರು[2]ಳೋ[2]ತೊರ್ಕಣ್ಣನಾಡೊಳ್ಮೆಣಸನಿಡುಗೆ ಕಾಲಕ್ಕೆ ತಕ್ಕಂತೆ ಬಣ್ಣಂ
ಬರೆಗೆಂಬರ್ದೇಶಕಾಲಕ್ಕಿದು ಪದನಱಿವಿರ್ ಮಿಕ್ಕುದಂ ದೇವರಾತಂ
ಬರೆ[3]ಯಂ[3] ಸಾಮಕ್ಕೆ ಸಾಮೋದ್ಭವರಸಿತಮನಂ ಭೇದಿಸಲ್ಬಾರದ[4]ಭ್ಯಂ[4]
ತರ[5]ರಣ್ಣ[5]ರ್ನಂಬಿ ನಮ್ಮಂ ಪಿಡಿಯ[6]ಲ[6]ತಿಬಲಂ ಮಾಟ್ಪುದಂಡಕ್ಕೆ ದೈತ್ಯಂ ೬೦

ವ॥ ಅಂತು ಮೂಱುಮುಪಾಯಪರಿಕರದೊಳ್ ದಾನೋಪಾಯಮಂ [7]ನೆವ[7]ಮಾಗಿ ನಿಲಿಸಿ ಸೋಮಪ್ರಭಸುಪ್ರಭರ ಮನದೊಳ್ ಮಂತಣಮಿರ್ದಂತೆ ನುಡಿಯದೆಯುಂ ನುಡಿದ ಮಂತ್ರಿಯ ಮಾತಂ ದೈತೇಯಮರ್ದನಂ ಮಾರ್ಕೊಂಡು

ಅಪ್ಪುದಿದಕ್ಕೆ ನಿಮ್ಮ ನೃಪನೀತಿ ವಿಶೇಷವಿಚಾರಮೇಕೆ ನಾ
ಮಪ್ಪೊಡೆ ಹೀನರಾತನಧಿಕಂ ಪಗೆಯಾದುದು ವಸ್ತುಜಾತನೆಂ
ತಪ್ಪೊಡಮಾತನ[8]ರ್ಥಿ[8]ಸಿದುದಂ ಬಿಡದಿರ್ದೊಡೆ ತಿಣ್ಣಮೆಂಬುದುಂ
ಟಪ್ಪೊಡೆ ದೇವ ತೂಗಿಬಿಡುವೆನ್ನುಮನಾನೆಯುಮಂ ರಣಾಗ್ರದೊಳ್ ೬೧

ವ॥ ಎಂದು ಮಾಣದೆ ಮತ್ತಮಿಂತೆಂದಂ

ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿ
ಪ್ರಾಯಂ ನೆಟ್ಟನಲಂಘ್ಯಮಿಂತಿನಿತನೀಗಳ್ಮೀಱಿದಂ ಮಾಱಿದ
ನ್ಯಾಯಕ್ಕಿಂದವಗಾಹಸಂಗರ ರಸಂ ತೀರ್ಥಾಂಬು ಶತ್ರುಕ್ಷಯಂ
ಪ್ರಾಯಶ್ಚಿತ್ತಮಿದಂ ನೆಗಟ್ಚಿ ಪಡೆವೆಂ ತ್ವಚ್ಚಿತ್ತಕಾರುಣ್ಯಮಂ ೬೨

ವ॥ ಎಂದು ನುಡಿದ ಮಂದರಥರನ ದಂಡೋಪಾಯ[9]ಪ್ರಪಂಚಮಂ[9] ಚಂಡಗರ್ಜನಮಂ [10]ತರ್ಜಿತಸಂದಿ[10]ಯದೆ ನಿರ್ಜಿತವಿರೋಧಿಪ್ರತಾಪಪ್ರಭಂ ಸುಪ್ರಭನನಂತರಮಿಂತು ನಿಶ್ಚೈಸಿದಂ

1 ಯ ವಿಷ್ಣೂ ಜಿಷ್ಣು (ಅಇಉ) 2 ಳಲ್ (ಎ) 3 ಯುಂ (ಅಇಉ) 4 ಪ್ಯಂ (ಅಇಉ) 5 ರೆಣ್ಬ (ಅಇಉ) 6 ದ (ಅಇಉ) 7 ನೇಯ (ಎ) 8 ಚ್ಚಿ (ಅಇಉ) 9 ಪ್ರ (ಎ) 10 ತರ್ಜಿಸಱಿ (ಎ)

ಜಯಮೆಂತುಂ ಸುಕೃತಾನುರೂಪಮುದಱಿಂಕೊಳ್ಬನ್ನಕ್ಕೆ ಪಕ್ಷ್ಯಾಗದಂ
ತು ಯಥಾರ್ಥಾಗಮಮುಮಂ ವಿಚಾರಿ[1]ಸುವೊಡೀತಂ[1] ತದ್ವಿಚಾರಕ್ಕೆ ನಿ
ಶ್ಚಯಮುಂ ಕಾಣ್ಬು[2]ದದ[2]ಱ್ತೆ ಮಂತ್ರಫಲಮಿನ್ನಾಮಂತಣಂ ನೀತಿನಿ
ಶ್ಚಯನಿರ್ವಾಹಮಿದಾಯ್ತು ಕೃಷ್ಣನ ಜಯಾರಂಭಪ್ರತಿ[3]ಜ್ಞೋತ್ಕರಂ[3] ೬೩

ವ || ಎಂದು ನಿಶ್ಚಿತಮಂತ್ರರಾಗಿ [4]ಮಂತ್ರ[4]ನಿಕೇತನದಿಂ ಪೊಱಮಡುವಾಗಳ್

ಧರೆಗಂ ವ್ಯೋಮಕ್ಕಮಾರಿಟ್ಟವೊಲೊದವಿದ ಮೈ ದಿಕ್ಕನೊಟ್ಟೈ[5]ಪ[5] ಕಣ್ಕೇ
ಸುರಿಗೆಂಪಂ [6]ಕೆ[6]ತ್ತ್ರ ಕೂರ್ವಾಳ್ಸಿಡಿಲನುಗುಟ್ವ ಕೂರ್ದಾಡೆ [7]ಮೂ[7]ಲೋಕಮುಂ ಮು
ಮ್ಮುರಿಗೊಳ್ವಾಟೋಪಮತ್ಯದ್ಭುತಮೆನೆ ಭವನಪ್ರಾಂಗಣಪ್ರಾಂತದೊಳ್ನಿ
ರ್ನೆರಮಾತಂ ಮುಂತೆ ಭೋಭೋ [8]ಕವಿಯೆನುತಮಿರಲ್[8] ರಾಕ್ಷಸಂ ರೂಕ್ಷರೂಪಂ ೬೪

ವ || ಆ ಮಹಾದ್ಭುತಪ್ರತಿಪಕ್ಷರಕ್ಷ[9]ನಿಪುಣ[9]ಭಾವಮುಂ ಕಣ್ಮುಟ್ಟೆನೊಳ್ ಕಂಡು

ದೂತನ ಬೆನ್ನೊಳಿ ಕಳಿಪಿದ
ದೈತೇಯನ ಗೂಢತೀಕ್ಷ್ಣದನುಜನೆಗೆತ್ತು
[10]ತ್ರಾತರ[10]ರಾಶಿಯನಂಭೋ
ಜಾ[11]ತೋದರನಡಸಿ[11] ಪೊಡೆಯಲೊಡನಾಕ್ಷಣದೊಳ್ ೬೫

ಉರಿವರಿವರಿವಂ ಜಳದಂ
ಬೊರೆಯಲೊಡಂ ತಣ್ಣನಾದವೊಲ್ ಕೃಷ್ಣನ ಬಾ
ಳ್ವೆರಸಲೊಡಂ ಪ[12]ರೆಯೆ[12] ನಿಶಾ
ಚರರೂಪಂ ನೋಡೆ ನೋಡೆ ಖೇಚರನಾದಂ ೬೬

ವ || ಆಗಿ ಮಕುಟತಟಘಟಿತಹಸ್ತಕುಟ್ಮಳಂ ಹಸ್ತಪಲ್ಲವಪ್ರಸರಿತ ಪಾರಿಜಾತ ಪ್ರಸೂನಾಭ್ಯರ್ಚಿತರಾಮದಾಮೋದರಚರಣನಖತಾಮರಸನಿಂತೆಂದಂ ದೇವ ನಿಮ್ಮಿರ್ವರುಂ ಪೂರ್ವಜನ್ಮದೊಳ್

ದಿವಿಜಾಧೀಶರ್ಸಹಸ್ರಾರಜರಿರಖಿಳದೇವೇಂದ್ರಸೇನಾನ್ವಿತಂ ಪೂ
ರ್ವವಿದೇಹಶ್ರೀಜಿನಾಭ್ಯರ್ಚನೆಗೆವರುತಮೆಮ್ಮೊಳ್ ಮಹಾವೈರದಿಂ ಭೈ
ರವಚೂಡಂ ತಳ್ತು ನಾಮುಂ ತಡಮುಡಿವೆಡೆಯೊಳ್ ಭೋಂಕೆನಡ್ಡೈಸಿ ಮಾತಿಂ
ಯುಮತೀವ್ಯಾಮೋಹಮುಂ ಪಿಂಗಿಸಿದಿರುಟಿುದೆನಾಂ ನಿಮ್ಮ ಕಾರುಣ್ಯದಿಂದಂ ೬೭

---

1 ದುದಿರು (ಎ) 2 ದಿರ (ಎ) 3 ಜ್ಞಾನದಿಂ (ಅಇಉ) 4 ನೀತಿ (ಎ) 5 ಸಿ (ಎ) 6 ದಿ (ಎ) 7 ಭೂ (ಅಇಉ) 8 ಯಿತಯಿತಮೆನುತಂ (ಎ) 9 ರಕ್ಷ (ಎ) 10 ದ್ಭುತಕ (ಎ) 11 ತನನವನೊಡನಿ (ಅಇಉ) 12 ಡೆಯ (ಅಇಉ)

ವ॥ ಎನ್ನ ಪೆಸರ್ ಮಣಿಚೂಡನೆಂಬುದು

ಎಸಗಲ್ಪ್ರತ್ಯುಪಕಾರಮುಂಟೆ ದಿಟದಿಂ ಪ್ರಾಣೋಪಕಾರಕ್ಕೆ ನಿ
ಮ್ಮೆಸಕಕ್ಕಾಂ ಬೆಸಕೆಯ್ವುದೇಂ ಪಿರಿದು ಮದ್ವಿದ್ಯಾಳಿಯೆಂಬಾಳಿಯ
ರ್ಬೆಸಕೆಯ್ದಿರ್ಕೆ ಭವದ್ಭುಜಾರ್ಚಿತಜಯಶ್ರೀಗೆಂದು ತನ್ನಟ್ಟಿಱಿಂ
ದೊಸೆದಿತ್ತಂ ನಿಜವಿದ್ಯೆಯಂ ಮುಸಲಿಕೃಷ್ಣರ್ಗಾ ಖಗಾಧೀಶ್ವರಂ ೬೮

ವ॥ ಎಂದು ಬಱಿಯಮಿಂತೆಂದಂ

ರಕ್ಕಸನೊಳಿಜೀವ ಕಾಯ್ವಿನ
ತಕ್ಕಂ ನೆಗಪಲ್ಕೆ ದೇವ ಕಂಡೆಂ ನಿಮ್ಮಂ
ರಕ್ಕಸರ ಜೋಹವೇಱಿದ
ಪೆಕ್ಕಣದಿಂದೆಂದು ಪೋದನಾ ಮಣಿಚೂಡಂ ೬೯

ಮದನಪತಾಕೆಯಿದಂ ಕೇ
ಳ್ವುದುಮೆಂದಳ್ ಚಿತ್ರಲತೆಗೆ ಮನದೊಳ್ಮುನ್ನ
ಱಿಕ್ಕಿದ ಸೋಮಪ್ರಭನಾಗಳಿ
ವಧುವಿನ ತಲೆ ಕೈಗೆವಂದುದೆಂದೊಡೆ ಧೀರಂ ೭೦

ಬಲನಾರಾಯಣರುಂತಜೇಯಮಹಿಮಾವಷ್ಟಂಭರುಚ್ಚಂಡದೋ
ರ್ವಳರಾ ಖೇಚರವಿದ್ಯೆ ಸಾರ್ದ ಬಱಿಕೆಂತುಂ ಮಾಣ್ಬರೇ ದುರ್ಧರಂ
ಕುಲಿಶಾಸ್ತ್ರಂ ವಿಲಯಾನಲಾಂಶುರಸದಿಂ ನೀಂ ಮಾಡಿದಂದಾಜಿನೋ
ಬಲದಿಂದಾಮಹಿಶೈಲನೋದ್ಯಮನದೊಳ್ಮೇಲೆತ್ತಿ ಬೂತಟ್ಟುಗುಂ ೭೧

ವ॥ ಎಂಬುದುಂ ಚಿತ್ರಲತೆಗಿನ್ನೊಂದತಿರಾಗಲತಾಜ್ಞಾನಹಸ್ತಂ ತಮಗೆ ಹಸ್ತಗತಮಾದ ಖೇಚರವಿದ್ಯೆ ನಿಶಾಚರನಂ ಗೆಲ್ವುದಕ್ಕೆ ನಿಗಮಮಾದಂತಿರಾಕ್ಷಣಂ ದಿಗ್ವಿಜಯೋದ್ಯುಕ್ತರಾಗಿ ಬಲಾಧ್ಯಕ್ಷನಂ ಪಡೆಗೆ ಸಾಱಲ್ವೇಳ್ದಾ ವಿಜಯಪ್ರಯಾಣಭೇರಿಯಂ ಪೊಯ್ಸಿಸಲೊಡಂ

ದೆಸೆಯೆಂಟುಂ ವಾರ್ಧಿನಾಲ್ಕುಂ ವಿಯದಿಳೆಯೆರಡುಂ ತಾಗಿ ತಟ್ಟು[1]ಚ್ಚೆ ಸಂ[1]ಕ್ಷೋ
ಭಿಸಿ ತಾಳಂ ಕೂಡಿ ಕೋಳಾಹಳಮಯಮೆನಿಸಲ್ಸಾ[2]ಲ್ಗೆ[2] ಮೂಲೋಕಮಂ ಮು
ದ್ರಿಸಿದತ್ತರ್ಕಾಶ್ವಕಂಠಸ್ಖಲಿತರದಯುಗಂ ಪದ್ಮಜಾಗ್ರಾರಹಸ್ತ
ಪ್ರಸಭಪ್ರೋದ್ದೀನಪಾದಂ ಮುಸಲಿಹರಿಪರಸ್ಥಾನಭೇರೀನಿನಾದಂ ೭೨

---

1 ತ್ತುರಿ (ಅಱಲು) 2 ರಿ (ಎ)

ವ॥ ಆ ಪ್ರಯಾಣಭೇರೀಭಾಂಕಾರಮೆಂಬ ಹೂಂಕಾರದೊಳೆ ಗೃಹೆಮಹೆತ್ತ್ರರ ಮಹೇಂದ್ರಜಾತಿ ಕರಾಕರ್ಷಣಂ ಮಾಡಿದಂತೆ ಮೀಱಿದ ಪುರಬಹಿರ್ವಣದ ಪರಿಸರ ಪ್ರದೇಶದೊಳ್

ಎಡದೊಳ್ಪಿಂಗಲಿ [1]ಮ[1]ಟ್ಟು ಮೇಲ್ವಱಿದುದಿಂಬಿಂದೊಂದೆ ತಾರ್ಗೊಟ್ಟು ಪೂ
ಗಿಡುವಂ ಸಾರ್ದುದು ಗಂಡುಪ್ರೋದಗೆ ಪಸುಂಬಂ ಕಟಿತ್ತಿ [2]ಕಬ್ಬಳ್ಳಿ[2] ಬಂ
ದೆಡದೊಳ್ದೀಪ್ತದೊಳಾಂದುವೇಱಿತು ಸೃಗಾಲಂ ತಿರ್ದಿ [3]ಮೇಲ್ದಿಣ್ಣೆ[3]ಯಂ
ನಡೆವಾಗಳ್ ಪೊಱವೀಡುವಿಟ್ಟೆಡೆಗೆ ವಿಷ್ವಕ್ಸೇನ ತಾಳಧ್ವ[4]ಜರ್[4] ೭೩

ತಿವುರಿ ಗುಡಿ ಗೂಡಾರಂ ಝಂಪಾಳಿ ಚೌಕಿಗೆ ಜಂಪೆ ಮಂ
ಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂ
ಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಂ
ತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗನುರಾಗಮಂ ೭೪

ಹಯಪರ್ಯಾಣಪ್ರಭಾಮಂಜರಿಗಜಬಿದುಸಿಂಧೂರರಾಗಂ ಭಟಶ್ರೇ
ಣಿಯ ಚೆಂಬೊಂಗಟ್ಟು ತಳ್ತ್ತಡ್ಡಣದ ಪೊಳೆಪು ಕೆಂದೂಳಿಯಿಂದೊಂದಿ ಕೆಂಬ
ಟ್ಟೆಯ ಮೇಲ್ಗಟ್ಟಾದುದಾ ಚೌಕಿಗೆಯ ಗುಡಿಯ ಗೂಡಾರದೊಡ್ಡಿಂಗೆ ತದ್ದಿ
ಗ್ಜಯಯಾತ್ರೋದ್ಯೋಗದೊಳ್ ಕೊಲ್ಲಣಿಗೆ ಮೆಱೆಯೆ ಬರ್ಪಲ್ಲಿ ಭೂಪಾಲಸಿಂಹರ್ ೭೫

ವ॥ ಅಂತು ಬಿಟ್ಟ ವಿಜಯಪ್ರಸ್ಥಾನಶಿಬಿರದಿಂ ತಳರ್ದು ನಿಚ್ಚವಯಣ ದಿನೆತ್ತಿಬರ್ಪನ್ನೆಗಮಿತ್ತಲ್

ಆ ದೂತಂ ವಾರಣಾಸೀಪುರಮನಿರದೆ ಪೊಕ್ಕೋಲಗಂಗೊಟ್ಟು ಕುಳ್ಳಿ
ರ್ದಾ ದೈತ್ಯಾಧೀಶನಂ ಕಂಡೆಱಗಿ ಬಱಿಕೆ ಮುಂದಿಕ್ಕುತುಂ ಪ್ರಾಭೃತಂ ರಾ
ಜಾದೇಶಂ ಕಾಣ್ಕೆಯಾಗಿಂತಿರೆ ನುಡಿದನಿದೇಂ ದೇವ ನೀನಟ್ಟೆ ಬೇಟ್ಪಿಂ
ತಾದೀನರ್ಗಣ್ಯರೇ ನೀಂ ಮುನಿದೊಡೆ ಬೇಸಕೆಯ್ವರ್ಬೆಸಂಗೆಯ್ವರಲ್ಲರ್ ೭೬

ವ॥ ಅದಲ್ಲದೆಯುಂ

ತಾನಟ್ಟಿನಟ್ಟು ಬೇಡುವ
ದಾನಗಜಂಬೆರಸು ಬಂದು ಕಂಡಪೆವಾವೆಂ
ದಾನಡೆದು ಬರುತ್ತಿರ್ದರೆ
ಮೀನುಂಬುಱು ಬರ್ಪ ತೆಱದೆ ದಿನಪತಿಗಿದಿರಂ ೭೭

1 ವ (ಎ) 2 ಕರ್ವಿಳೆ (ಎ) 3 ಮೇಲ್ದಿಂಟಿ (ಎ) 4 ಜಂ (ಎ)

ಎಂದೊಡೆ ಕೋಪಾನಳನಿಂ
[1]ಬೆಂದರಲಂತಾ[1]ಸ್ಯಮರಲೆ ತಲೆದೂಗುತ್ತುಂ
ಮಂದಸ್ಮಿತಮುಂ ಶ್ಮಶ್ರು
ಸ್ಪಂದನಮುಂ ಕಣ್ಣ ಕೆಂಪುಮೊಗೆತರೆ ದನುಜಂ ೭೮

ಕಿವಿವೆತ್ತಂದಿದಮೆಮ್ಮೊಳ್ಮೊಡರ್ದಿಱದಪೆಮೆಂಬನ್ನರಂ ಕೇಳ್ದೆನಿಲ್ಲಿಂ
ದುವರಂ[2]ಭೋ[2] ಚೋದ್ಯಮೇ ಕೊರ್ವಿದ ಕುಱಿ ಪುಗದೇ ಬಾಣ[3]ವಂತಾವೆಂಬಂತೊ[3]
[4]ಡ್ಡು[4]ವುದುರ್ವೀಭಾರನಿರ್ವಾಣದ ಸಮಯಮೊ ಪೇೞ್ಮಾರಿಗಂ ಭೈರವಂಗಂ
ಜವರಾಯಂ ವಿಶ್ವಮಾಹಾಲಯವಿಧಿಯೊಳಪೋಶಾನವಿಾವಂದವೋ ಮೇಣ್ ೭೯

ವ॥ ಎಂದು ಭುಜಬಲೋದ್ರೇಕಮಂ ನುಡಿದ ಮಧುವಿನ ವಿಧುವದನವಳಯ ದಂತಕೌಮುದಿಯಿನಾಸಭಾಸಮುದ್ರಕ್ಷೋಭಮುಸದಳಮಪ್ಪಿನಮುಹನುಹವಿುಕೆಯಿನೆಟ್ಟಿ ಸುಭಟಪೇಟಕದೊಳ್ ಪಟ್ಟವರ್ಧನಗಜದಿಗ್ಗಜಸಾಧನಾಧಿಪತಿ ಮನ್ನಣೆಯ ಮೈಮೆಯ ದಾನವ ಸೇನಾನಿಯೊರ್ವಂ

ಬೇಡುವ ಸಾಧು ನೀಂ ಕುಡದ ಗಂಡರವರ್ಬೆಸಸೆನ್ನನೊರ್ವನಂ
ಕೋಡಗಗಟ್ಟುಗಟ್ಟಿ ಹಲಿಕೃಷ್ಣರನಾಳಿಸಿ ತಾಳವಟ್ಟದೊಳ್
ಮೂಡಿದ [5]ಹಾಹೆ[5]ಯಂತೆಱಲೆ ವೈರಿಝಳಪ್ಪನನಿಂದು ಕಂಬದೊ
ಳ್ನೋಡ ನೃಪೇಂದ್ರ ಕಟ್ಟಿದೊಡೆ ಬೀರದ ಬಟ್ಟಿಗೆ ಕೈದುಗಟ್ಟಿದೇಂ ೮೦

ವ॥ ಎನೆ ಮತ್ತೊರ್ವಂ ಖೇಚರಭೂಚರಪತಿಪ್ರತಾನದ ಮೊತ್ತಮೊದಲಿಗಂ ಮುಂಗೆಯ್ಯ ಕಂಕಣಮಂ ತಿರಿಂಪಿ ನೂಂಕುತುಂ ಜಾಱುವ ಝಳವಟ್ಟಗೆಯನೇಱಿ ಸಾರ್ಚುತ್ತುಮೆೞ್ದು

ಕೊಡಗೂಸಾಗಿಸಿದತ್ತು ನಿನ್ನತುಳಬಾಹಾಸಾಹಸಂ ಸಿಂಗಮುಂ
ಸಿಡಿಲಂ ಮಾರ್ಪೊ[6]ಡೆ[6]ಮೆಮ್ಮನಿಂದುವರೆಗುಂ ಮಾಱಾಂಪರ[7]ಲ್ಲಿಂ[7]ದು ಮಾ
ರ್ನುಡಿಯಾಯ್ತಿನ್ನವಧಾ[8]ರಿಸೆಂದನೆಲೆ ಕಣ್ಕೆಂ[8]ಪೇಱಿಪೆಂ ನಿನ್ನ ಕ
[9]ಣ್ಕುಡಿ ಕೆಂಗೇಱದ ಮುನ್ನೆ ವೈರಿನೃಪರಕ್ತಾಸೇಕದಿಂ ಲೋಕಮಂ ೮೧

ವ॥ ಆತನಿಂ ಬಱಿಕ ದೈತೇಯಚಕ್ರವರ್ತಿಯ ಮಾತುಲಂ ಕರಾಳಕಂಠಂ

1 ತೆಂದುರ್ವಡೆಲಾ (ಎ) 2 ಬೊಲ್ (ಅಇಉ) 3 ಸಂ ಒವ್ಮೆಬಂದಾ (ಅಇಉ) 4 ಡು (ಅಇಉ) 5 ಪಾಗೆ (ಎ) 6 ಡ (ಅಇಉ) 7 ಲ್ಲೆಂ (ಅಇಉ) 8 ಡಿಸೊಂದನೆನದಳ್ಕೆಂ (ಎ) 9 ನಸುಗೆಂಪೆ (ಅಇಉ)

ಜವನಂ ಬಾಳ್ದಲಿದಂದೆನಾಂ ಬಿಡಿಸಿದ್ದೆ ಮುನ್ನೊರ್ಮೆ ದಿಕ್ಪಾಲರಾ
ಹವದೊಳ್ ಟಂಕವಿಟಂಕರಂ ಬಿಡಿಸಿದ್ದೆ ಕೊಲ್ವಲ್ಲಿ ದೇವಾಸುರಾ
ಹವದೊಳ್ನಿಂದೊಡೆ ಮೆಟ್ಟಿ ಸೀಟಿದೆ ಬಿಡೆಂ ನಿನ್ನಾಣೆ ಕೇಳ್ ರಾಮಕೇ
ಶವರಂ ನೀನಕಟೆಂದು ಮಾಣಿಸಿದೊಡಿಂ ನಿನ್ನಾಣೆ ಚಕ್ರೇಶ್ವರಾ ೮೨

ಬಲಕೃಷ್ಣರೆನಗೆ ರಣದೊ
ಳ್ತಲೆದೋಱು ಬಱಿಕ್ಕೆ ತಮ್ಮ ಪೆಗಲೊಳ್ತು[1]ಳಿ[1]ದ
ತ್ತಲೆಯ[2]ನೆ[2]ನೆ [3]ದೇವ ತಂದೆಂ[3]
ತಲೆವಿಡಿ[4]ಕೋಪಿಡಿ[4]ಗೆ ನೀನೆ ಮಾಱಿದ ತಲೆಯಂ ೮೩

ವ॥ ಎನೆ ಮತ್ತೊರ್ವಂ

ಒರಸಿ ಬಿಸುಟಪ್ಪೆನರಿಯಂ
ಕರವಾಳಿಂದೆನ್ನ ಬೆಸಸು ಬೆಸಸೆನ್ನಂ ಸಂ
ಗರದೊಳೆನಗಿದಿರೆ ಸೋವುನ
ತರುವಲಿಗಳ್ಬಿಳಿಯ ಕರಿಯ ನರಕೀಟಂಗಳ್ ೮೪

ವ॥ ಅಂತು [5]ಸಮನಿಸಿದ[5] ವೀರಾಲಾಪಕೋಲಾಹಲಮನುತ್ತಂಭಿತ ಹಸ್ತ
ಕಂಕಣ ಝುಂಕಾರಂ ಮುನ್ನೆ ಝುಂಕಿಸಿ ಬಱಿಕ್ಕೆ ಮಧುಕೈಟಭನಿಂತೆಂದಂ

ನೊಳವಿಂಗೆ ಕುಪ್ಪೆವರಮೇಂ
ತ್ರಿಳೋಕಮೊಂದಾಗಿ ಬಂದು ತಾಗುವೊಡಕ್ಕುಂ
ಮುಳಿಸುಂ ಮೂದಲೆಯುಮಿದೇಂ
ಗಳ ಗೇಹಾನರ್ದಿಭಾವಬಾಹ್ಯಾಲಾಪಂ ೮೫

ವ॥ ಎಂದು ನಿವಾರಿಸುತ್ತುಂ

ನಡೆ[6]ವಂ[6] ಸೂೞ್ತ್ಯ[7]ಸವೇ[7]ೞನ್ನದೆ ಕಟಕಮನಿಂದೆತ್ತವೇೞನ್ನದೆತ್ತಲ್
ಪಡೆಗೆಲ್ಲಂ ಸಾಱವೇೞನ್ನದೆ ವಿಸದೃಶವಿದ್ವೇಷಮುದ್ವೇಗಮುಂ ಮುಂ
ದಿಡೆ ಮತ್ತೇಭಾಶ್ವವೈಹಾಳಿಗೆ ವನದ ವಿನೋದಕ್ಕೆ ಪೇರ್ವೆಂಟೆಗೆಂದುಂ
ನಡೆವಂತೆಟ್ದಿಂ ಸಭಾಸಂಗದೊಳವಗಹನಾರಂಭದೊಳ್ದಾನವೇಂದ್ರಂ ೮೬

---

1 ಳಿ (ಅಇಉ) 2 ರಿ (ಅಇಉ) 3 ತಾಮೆ ಕೆಯ್ಯೊಳ್ (ಅಇಉ) 4 ಕೊಟ್ಟುದಿ (ಅಇಉ) 5 ಮಸಗಿ (ಅಇಉ) 6 ಯಿಂ (ಅಇಉ) 7 ಸಿಮೋ (ಅಇಉ)

ವ॥ ಎಬ್ಬಿದ ಕುಬೇರಂ ಮುನ್ನೆ[1]ಬೀ[1]ರಕ್ಕಬ್ಬಿ ಕಪ್ಪವಿತ್ತ ಪುಷ್ಪಕವಿಮಾನವಂ ವಿದ್ಯಾಧರಸ್ಕಂಧವಾಹಕರ[2]ನಟೆಯಿ[2]ಸಿದುದನೇಱಿ ಪೊಱಮಡುವಾಗಳ್ ಮೇರೆದಪ್ಪಿದ ವಾರಿಧಿ ಚತುಷ್ಕದನುಂಗಾಳತರಂಗಸಹಸ್ರಂಗಳಂತೆ ನಿರ್ದೇಶಿತ ಸ್ಕಂಧಾವಾರಂಬರಮುಳುಂಬಮಾದ ಸೈನಿಕದೊಳಗೆ

ಕಟ್ಟಿದುವೆತ್ತಿಸೋರ್ವ ಮದಮಂ ಕಿಡೆ ಡೆಂಕಿಪ ಹಸ್ತಿ ಕಣ್ಣ ನೀ
ರಿಟ್ಟುವು ದಂಡೆಯಿಂ ಕೆದಱಿ ಕೆಂಡಮುದಗ್ರ ಹಯಾಳಿ ನುರ್ಗಿ ಮೇ
ಗೊಟ್ಟಿದ ಕೈದುಗಳ್ಮುಱಿದು ನಿಂದುವು ತೇರ್ಧರೆ ನುಂಗಿದಂತೆ ಸಾ
ಲಿಟ್ಟುವು ಮುಂದೆ ಕಟ್ಟದೊಱ[3]ಯಂ ನೆಱ[3]ದುರ್ಚಿ ಪದಾತಿಹೇತಿಗಳ್ ೮೭

ಅವನ ಪೊಱ[3]ಗಲಸಿದಂತೆವೊ
ಲವನೀಕಂಪನಮುಳುಂಬಮಾದುದು ತೇಜ
ಕ್ಕವಚತ್ರ್ರಂತೆಯೆ ಮುಸುಕಿ
ಟ್ಟುವು ದಿಗ್ದಾಹಂಗಳೆಯ್ದೆ ಮಧುಕೈಟಭನಾ ೮೮

ವ॥ ಅದಂ ಕಂಡು ಕೆಲಗೆಲದೊಳ್ ಬರ್ಪ ಮಂತ್ರಿಮಹತ್ತರದೊಳಾದ ಗುಜುಗುಜಿಯಂ ಕಿವಿ[3]ಗಿವಿಗೇಳ್ದ ದಿವಿಜದ್ವಿಷಂ ಪಾವಕರ್ಣನಮಗಂಗಿಂ[3]ತೆಂದಂ

ಇದು[4]ದಲ್[4] ದಿಗ್ವಿಜಯಂ ರಣಾಜಿರದೊಳಾರಾನುಂ [5]ಭರಂಗೆಯ್ದು[5] ತಾ
ಗಿದಪರ್ಬೆಟ್ಟಿ[6]ದು ಭೂಭುಜಂ[6] ವಿಧುಬಲಂ ತಾರಾಬಲಂ ನೋಡ ಬೇ
ಡಿದ ಬೇಳಂಬಮನಂತಕಂಗಮೆನಗಂ ತಿರ್ದೆಂಬುದೇಂ ವಕ್ರಮೆಂ
ಬುದುಮೇಂ ಮಿಕ್ಕಿನ ಹಕ್ಕಿಯೊಳ್ ಹಱುಣೆಯೊಳ್ ಸೇನಾಸಹಸ್ರಂಗಳುಂ ೮೯

ವ॥ ಎಂದು ತೋಱಿದ ತ್ಪಾತಕ್ಕೆ ಸೆಡೆಯದೆಯುಂ ಪೊಱಬೀಡಿನೊಳ್ಪಡೆಯದೆಯುಂ ಷಡಂಗಬಲವಾಹಿನೀವಾರಾಂನಿಧಾನಂ ಸಪಾದಲಕ್ಷಾಕ್ಷೋಹಿಣಿವಲ್ಲಭನೆತ್ತಿ ಬರ್ಪಾಗಳ್

ಧರೆ [7]ವೆತ್ತೆಟ್ಟಿಂ[7]ತೆ ಚಾತುರ್ಬಲಪದರಜವೊಟ್ಟೈಸೆ ದಿಕ್ಚಕ್ರಮಂ ದಿ
ಕ್ಕರಿಗಳ್ದೂಳೀಮದೋದ್ರೇಕದಿನೆಸೆದುವು ರೋದೋಂತದೊಳ್ ಪಲ್ಲಣಂ[8]ಬಿ
ಟ್ಟರುಣಂ ವೇಲ್ವೈಸಲಿಚ್ಛೈ[8]ಸಿದನಿನಹಯಮಂ ಮುತ್ತ[9]ವತ್ತಬ್ಜಜಂ[9] ಬಿ
ಟ್ಟಿರೆಯುಂ [10]ದೂಳಾಡಲಿಚ್ಛೈ[10]ಸಿದುದು ಕೆದಱಿ ಪಕ್ಷಾಂತರಾಳಂ ಮರಾಳಂ ೯೦

---

1 ಭ (ಅಇಉ) 2 ವಟಯಿ (ಅಇಉ) ನಟಯಿ (ಎ) 3 ಗಿಲಿಗಳ ವಿದ್ವಿಪನವರೆ ಪಾತಕರ್ಣವನಿಂ (ಎ) 4 ತಾಂ (ಎ) 5 ಕೆಲವರ್ಪಂದು (ಎ) 6 ದೆಯಾಬಲಂ (ಅಇಉ) 7 ಕಿಱಿತ್ತಿರ್ದಂ (ಅಇಉ) 8 ಬಿಟ್ಟಕೆನಲ್ಮೇಲ್ವಾ (ಎ) 9 ಮೊತ್ತಂಬದಿಂ (ಅಇಉ) 10 ಮಲ್ಲಾದೊಡೊಡ್ಡೈ (ಅಇಉ)

ಬಿಡುವೆಡೆಗೆ ಪೊಡವಿಯೆಯ್ದದು
ನಡೆವೆಡೆಗೆಯ್ದದು ದಿಶಾತಲಂ ಶಸ್ತ್ರಾಸ್ತ್ರಂ
ಬಿಡುವೆಡೆಗೆಯ್ದದು [1]ಬಾನನೆ[1]
ನಡೆದುದು [2]ಕಟಕಂ[2] ನಿಶಾಚರಾಧೀಶ್ವರನಾ ೯೧

ವ॥ ಅಂತು ನಿಚ್ಚವಯಣದಿನೆತ್ತಿ ನಡೆದು ಸುಪ್ರಭಪುರುಷೋತ್ತಮರ ಬಿಟ್ಟ ಬೀಡಿಂಗೆ ಕಟ್ಟಿದಿರೊಳ್ ನಿಸ್ಸಾಳಶಬ್ದಶ್ರವಣಮಾತ್ರಮನಳವಿಗೊ[3]ಟ್ಟು ಬಿಟ್ಟ[3]ಮಱುದೆವಸ ಮುದಯಸಮಯದೊಳುದಯಿಸುವ ಸಹಸ್ರಕರಮಂಡಲಕ್ಕೆ ಮಾ[4]ರ್ಮಂಡಲಮಾ[4]ದ ತೇಜಃಪ್ರತಾಪಂ ಮೂಜಗಮನೆಯ್ದೆ ಕಣ್ಣುಳ್ಕಿ ಬೆಳ್ಕುಱಿಸುವಿನೆಗಂ ಪರಿವ ಪಾಱುವ ಶರಂಭಂಗಳ್ ಪೂಡಿದ ಪೊನ್ನ[5]ರಥದ[5] ರನ್ನದ [6]ಬೆ[6]ಸುಗೆಯೊಳಗೆ ಪಿಡಿದ ಮುತ್ತಿನ ಕೀ[7]ಲ್ಗೊಡೆಯ[7] ಬಿಡದೆ ಬೀಸುವ ಪಲವು ಚಾಮರದ [8]ಬಿರ್ಚಿ ಮಿಳಿರ್ವ[8] ಕುಳಿಕನ ಪಱಿಯಿಗೆಯ ಪೆಱತಡಿಯುಮೆಡದೊಳಂ ಬಲದೊಳಮು[9]ಡ[9]ವಡಿಸಿ ನಿಂದ ದಂಡಿಗಳ ದಂಡನಾಯಕರ ದಾನವ ಸೇನಾನಿಗಳ ಕಡವಡಂಗಳುಂ ಮಾರ್ಗಪ್ರಹಾರ ಪ್ರಹನ್ಯಮಾನ ಜನ್ಯತೂರ್ಯ ನಿರ್ಘೋಷಂಗಳುಂ ಯಮಘಂಟಾಸಮೂಹ ಜಯಘಂಟಾ ಸಹಸ್ರಸಂಘಟ್ಟನ ಕೋಳಾಹಳಂಗಳುಮಾಭೀಳಮಾಗೆ ಕೋಳಱ[9]ದೊಡ್ಡಿದ ಪದ್ಮವ್ಯೂಹಶಕಟವ್ಯೂಹಾದಿ ನಾನಾವ್ಯೂಹಸಮೂಹಕ್ಕೆ ತನ್ನ ಬಾಹಾಸಾಹಸಮೆ ಸನ್ನಾಹಮಪ್ಪಿನಮುರನೆಲೆ[10]ಯೊಳಂ[10] ಕೇವಳ ಸುರಚಕ್ರಾಧಿಪನೊಳೊಡ್ಡಿ ನಿಂದಾಗಳ್

ಅದು ಬಂದೊಡ್ಡಿತ್ತು ರೌದ್ರಾದ್ಭುತಭರದಿ ನೆಲೆ ಮುಟ್ಟಿತಾಕಾಶಮಂ ಸು
ತ್ತಿದುದಾಶಾಚಕ್ರಮಂ ತುತ್ತಿದುದವನಿಯನೆಂಬಂತಿರೀ ವ್ಯೂಹಮಾ ವ್ಯೂ
ಹದ ಬಿಣ್ಪಂ ನೋಡಿ [11]ನೀ[11]ಡುಂ ಪುಳಕ[12]ದ ಕಳೆ ಪುಟ್ಟಲ್ಕೆ ಬಾಹಾತುಳಾದಂ
ಡದೆ ತೂಗಲ್ಸಾಲ್ಗುಮೆಂ[12]ಬಂತಿರೆ ಮುರಮಥನಂ ನೋಡಿದಂ ತನ್ನ ಮುಯ್ವಂ ೯೨

ವ॥ ಆಗಳ್ ವಿಮಾನಯಾನವಾಹ[13]ನಪಾಳಿ[13]ಕೇತನಾಂತಪತ್ರ ಚಮರಜಕದಂಬದ ಬಂಬಲ್ ತುಱುಗಲುಂ ತಮತಮಗೆ ಮೆಱೆಯೆ ತಿಂತಿಣಿಗೊಂಡು

ಇನಚಂದ್ರಾದಿಗಳೀಕ್ಷಿಸಲ್ಪಡೆಯುರಾ ಸಂಗ್ರಾಮಮಂ ಛತ್ರಕೇ
ತನಸಂದೋಹದ ಸಂಧಿಯಂ ಬಗೆದು ನೋಡುತ್ತಿರ್ಪಿನಂ ಬಾನೊಳಿ
ಕ್ಕೆ ನಿತಿಂಬಲ್ಲದೆ ಬಂದು ಸಂದಣಿಸಿ ನೋಡಲ್ನಿಂದುದಿಂದ್ರಾದಿದೇ
ವನಿಕಾಯಂ ಗಿರಿಶಾದಿದಿಕ್ಪತತಿ ಪೌಳೋಮ್ಯಾದಿದೇವೀಗಣಂ ೯೩

1 ಚಕ್ಕನೆ (ಅಇಉ) 2 ಪೆರ್ವಡೆ (ಅಇಉ) 3 ಟ್ಟು (ಎ) 4 ಱಂಕ (ಅಇಉ) 5 ಕತ್ತಳ (ಅಇಉ) 6 ಬಿ (ಎ) 7 ಲೊಳೆ (ಅಇಉ) 8 ಬಿಚ್ಚಳಿಪ (ಅಇಉ) 9 ಳ (ಅಇಉ) 10 ಯನಿಂ (ಅಇಉ) 11 ಬೀ (ಅಇಉ) 12 ದೆಮೊಳಗಳ್ತಳ್ತಬಾಹಾತುಳದಂಡದೆ ಮಾಗಲ್ಸಾರದೆಂ (ಎ) 13 ನ (ಎ)

ಮಕರವ್ಯೂಹಮನೊಡ್ಡಿ ನಿಂದನಸುರಂ ಲೋಕಕ್ಕೆ ಕಲ್ಪಾಂತಕಾ
ಲಕೃತಾಂತಂ ಮುಳಿದೆಯ್ದೆ ಬಾಯ್ದೆಱೆದವೊಲ್ತದ್ವ್ಯೂಹಮಂ ನೋಡಿ ಸ
ಮ್ಮುಖದೊಳ್ತಾಂ ಮೊನೆಯಾಗೆ ಭೇದಿಸುವ ಸೂಚೀವ್ಯೂಹದೊಳ್ದಾನವಾಂ
ತಕನಾಂತಂ ಪೆಱಗಾಂಕೆಯೊಳ್ನಿಲೆ ಬಲಂ ಸಾಹಿತ್ಯ[1]ರತ್ನಾಕರಂ[1] ೯೪

## ಗದ್ಯ

ಇದು ಪರಮಜಿನಸಮಯ ವನವಸಂತ ಸಂತಾನಾರಾಮ ರಾಮಚಂದ್ರ ಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನಜನಾರ್ದನದೇವ ವಿರಚಿತಮಪ್ಪ
ಅನಂತನಾಥಪುರಾಣದೊಳ್ ಸುಪ್ರಭ ಪುರುಷೋತ್ತಮ
ಸಮರಾರಂಭವರ್ಣನಂ ತ್ರಯೋದಶಾಶ್ವಾಸಂ
ಸಂಪೂರ್ಣಂ

---

1 ವಿದ್ಯಾಧರಂ (ಎ)

# ಚತುರ್ದಶಾಶ್ವಾಸಂ

ಶ್ರೀವರನುಂ ದೈತೇಯಮ
ಹೀವರನುಂ ವ್ಯೂಹಮುಖದಿನಾಂತಿರೆ ಕಾಲಂ
ಕೈವೀಸಿದಂತೆ ಬಳನೇಂ
ಕೈವೀಸಿದನೋ ವಿನೇಯಜನಮುಖತಿಲಕಂ ೧

ವ॥ ಅಂತೊಡನೆ ಕೈವೀಸೆ ಎರಡುಂ ಬಲಂಗಳಿಸುವಿಡುವಿಱಿವ ಪೊಯ್ವ ನಾಲ್ಕುಂ ತೆಱಿದ ಶಸ್ತ್ರಾಸ್ತ್ರಮುಖಂಗಳೊಳ್ ತಟ್ಟುಂತಾಱುಂ ಬೀ[1]ಟ್ವಿ[1] ಚತುರಂಗಪೃತನಾಪ್ರತಾನದ ತುಮುಲಸಮರಸಂಘಟ್ಟನಾಕಾಂ[2]ಡ[2]ಪ್ರಚಂಡಪ್ರಳಯ ಪ್ರಕ್ಷೋಭದೊಳಗೆ

ರಣಧೂಳೀಪಟಲಾಂಧಕಾರಗಿಳಿತಂ ನಿರ್ಭೇದಿಶಸ್ತ್ರಾಸ್ತ್ರವೀ
ಕ್ಷಣಜಾಲಂ ಕದಳೀಪ್ರಘಾತಪರಿಕಲ್ಪೀಭೂತಸಂಗ್ರಾಮಕಾಂ
ಗಣದೊಳ್ಸದ್ಭಟವಾಜಿವಾರಣಕ ಬಂಧೋನ್ಮುಕ್ತರಕ್ತಪ್ರವ
ರ್ಷಣಜಂಬಾಲಿತರೇಣು ಕಂಡುದುಭಯವ್ಯೂಹಂ ನಿಜೋದ್ವಾಹಮಂ ೨

ವ॥ ಅಂತು ಕುಂತಾಕುಂತಿಯುಂ ಶಸ್ತ್ರಾಶಸ್ತ್ರಿಯುಂ ಖಟ್ವಾಖಟ್ವಿಯುಮಾದ ಕಾಳೆಗದ ಕಣ್ಮುಟ್ಟಿನೊಳೊಂದಂಬುವೀಡಿನೊಳಗೆ

ಮದಗಂಧಕ್ಕೆ ಪರಸ್ಪರಂ ಮಸಗಿ ಕೋಪಾಟೋಪದಿಂ ತಱ್ತು ತಾ
ಗಿದ ದಂತಂಗಳ ಕಿಚ್ಚು ಪತ್ತಿ ತಗುಳ್ವಂದ[3]ಳ್ಕೆ[3]ಂಬಿನಂ ಬೂದಿ ಪಾ
ಱಿದ ಕೆಂಡಕ್ಕೆಣೆಯಾಗೆ ಮೇಗೆ ಕ[4]ಡುಕೆಯ್ವಾ[4]ರೋಹಕರ್ಬೇಗೆ ಪ
ತ್ತಿದ ಬೆಟ್ಟಂ ಪೊಣರ್ವಂತೆ ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ ೩

ತೆಱಪಂ ನಿಟ್ಟಿಸಿ ಪೊಕ್ಕು ಪಾಯ್ದುಲಿವ ಘೋಟಾಯ್ಲರ್ಕಳಿಂ ವಾಜಿ ಕು
ಕ್ಕುಱಿಸುತ್ತಿರ್ಪಿನಮು[5]ಟ್ಟಿಯಿಟ್ಟಳಿಕೆವಾಱುತ್ತಿರ್ಪಿನಂ[5] ಬಾಳ ಬ
ಲ್ಮುಱಿಯುಂ ನೆತ್ತರ ಪೂರಮುಂ ನೆಗೆದು ಕಣ್ಗೆಂಬಾಯ್ತು ಬಾನೆಂಬ ಕೆಂ
ಗೆಱಿ ಬೆಂಡೆರ್ದು ಕಲಂಕೆ ಮಿಾನ್ಮಿಡುಕುವಂತತ್ಯುಗ್ರಸಂಗ್ರಾಮದೊಳ್ ೪

---

1 ಟಿ (ಎ) 2 ತ (ಎ) 3 ಳ್ಪೈ (ಅಇಉ) 4 ಡಕೋಯಾ (ಎ)
5 (ಎ) ಪ್ರತಿಯಲ್ಲಿಲ್ಲ.

ತುಱಿಲಾಳ್ವಾಜಿ ಗಜಂಗಳಕ್ಷಯುಗಳ[1]ಸ್ಥೂಲಾಗ್ರದೊ[1]ಳ್ನಟ್ಟು ಕೋ
ದೆಱಲುತ್ತಿರ್ಪಿನಮಂಬು ತೀರ್ದು ಗಱಿಗಳ್ಗೇಣ್ಗೇಣ್ಗಳೊಳ್ಕುತ್ತಿ ಕೈ
ದೊಱಸುತ್ತಿರ್ಪಿನಮೊರ್ವರ್ದಲ್ಲವನ ಜಕ್ಕಂದೋಳದೊಡ್ಡೈದೆ ಮು
ಮ್ಮೞಿಯಪ್ಪಂತಿದಿರೇಱಿ ತಳ್ತುವು ರಥಾನೀಕಂ ರಥಾನೀಕದೊಳ್ ೫

ಶರದೊಳಿ ತಟ್ಟಿಗಟ್ಟಿದುದು ದಿಕ್ತಟಮಂಬಿನ ಹಂದರಿಕ್ಕಿದಂ
ಬರತಳಮೆಂಬಿನಂ ತುಱುಗಿ ಬೀಱಿತ್ತುವಡೆಯೆಚ್ಚಲಗಂಬು ತಾಗಿ ತ
ಳ್ತುರಿವುರಿಮಾಲೆಗಿಚ್ಚುವರೆಗಾಣಿಸಿದತ್ತು ನಭಸ್ಥಳಂ ಜಿತೋ
ರ್ವರೆಯೆನೆ ಪಾಯ್ವ ಪಂದಲೆಗಳಂ ಬಯಲಂಗಣವಾಡುವಟ್ಟಿಯಂ ೬

ವ॥ ಆ ಸಮರಸಂಭ್ರಮದೊಳ್ ಹೊರಜೆಯೊಳ್ ಕಾಲ್ಗೋದು ನಿಂದ ಮಂದರಾಚಲಧರನಲಗದೆಗೆದ ಮೊಗದ ಹರಿಗೆಯಿಂ ಮುಗಿಲ [2]ತೆರೆಯೊಳೊ[2]ಗೆದ ಬರಸಿಡಿಲಂತೆಯುಂ [3]ಮಿಳ್ಳೇಱಿ[3]ಸಿದ ಗಜದ ಮೊಗ[4]ರದಿಂ[4] ತೆರೆದೆಗೆದ ತಾಂಡವ[5][ದ ದಂಡಧ][5]ರನಂತೆಯುಂ ದೋರ್ವಳಾಟೋಪದಗುರ್ವಂ ತಳೆದು ಬತ್ತೀಸಕಡಿಯ ಬಾಹರಪುಟದ ಗುಳವದ [6]ಕಣಂಗಳ[6] ಕುಳಿಶದಳಂ ಪಳಕದ [7]ಪಾರ[7]ಡದುಜ್ಜಳಿಕೆಯಿಂ [8]ತುಳಿಲಸಂದರಂ[8] ಪ್ರಳಯಕ್ಕೆ ಸಂಗಳಿಸಿ ನೆಗೆದ ಪನ್ನೆರಡುವರ್ಕಬಿಂಬಂಗಳನೊಕ್ಕಲಿಸಿ ತೆಗೆದು ಮೇಲೊಟ್ಟಿಕೊಂಡಂತೆಯುಂ ಮೇರುವಿನ ಶಿಖರದ [9]ತಾರೊಲೊಳು[9] ಬೆಳೆದ ತಾ[10]ಳಬನವನಾ[10]ಳಿಗೊಂಡು [11]ಪೊಂಬೆಸ[11]ದ ಬೆಸುಗೆಯ [12]ಪಿಂಬಕ್ಕ[12]ದೊಳಿ [13]ನಿಗುಂಬಿಸಿದ[13] ಕರಿಯ ಬಿಳಿಯ ಝಲ್ಲರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ ಬ್ರಹ್ಮಾಂಡಭಾಂಡಮನಡಕಿಲ್ಗೆಡಪುವಂತೆಯುಂ ಮದಜಳದ ಕದಡಂಕದಱಿ ಕೆದಱುವ ಕರ್ಣಚಾಮರದ[14] ಕಾಳಗತ್ತಲೆಗೆ ಬಿಸಿಲಬೆಳ್ದಿಂಗಳ ಪ್ರಸರಮಂ ಪತ್ತಿಸುವ ಮುತ್ತಿನಮಾಣಿಕದ ಮೊಗವಡದ ತೊಳಪಿನಿಂ ಪ್ರಳಯ ಪ್ರಭಂಜನದ ವಿಳಯ ಸಮಯ ಪಗರಣದ ಪರ್ವಕ್ಕಗುರ್ವಿಸೆ ಮೊಗಸಿ ಮೊಗವಿಟ್ಟಂತೆಯುಂ ಮಿಂಚಿನಂಚಂತೆಗಳೋಡಿಲ್ದಂತಿರಾಡಂಬರಮಾದ ಲೋಹದ[14] ಸರ್ಪಿನ ಬಾಹರಕ್ಕೆಯುಂ ಬೊಕ್ಕರಿಸಿದ ತೋರಹತ್ತದಿನವನೀತಳಮಂ ಕವಳ[15]ಮಂ[15] ಕೊಳಲೆಂದು ಸಿಡಿ[16]ಲಿಂ ಕಡೆಗ[16]ಣಿಸಿದ ರಾಹುವಿನ ಹೊರಳಿ[17]ನುರುಳಿಗ[17]ವಿದಂತೆಯುಂ ಮೆಟ್ಟಿದ ಭರಕ್ಕೆ ಧರಣಿಯೊಗ್ಗುಡಿಸೆ ಚತುರಂಗಬಲಮನಿತುಂ ಚಿತ್ರದ [18]ಪಲಗೆಯಂ ತೊಡಗೆಡಪಿದಂತ[18]ಳ್ಳಾಡಿ

1 ಶೂಲಾಗ್ರಂಗಳೊ (ಎ) 2 ತೆರವಳಿಗೆದೆ (ಅಇಉ) 3 ಮಿಳ್ಳಿ (ಅಇಉ)
4 ರಂಬದ (ಅಇಉಎ) 5 ದಧ (ಅಇಉ) ದದಂಡವ (ಎ) 6 ಱಗೊಂಪಳ (ಎ)
7 ಪಾಡ (ಎ) 8 ಸಂಗರ (ಎ) 9 ಕೊಳಲು (ಅಇಉ) 10 ನಬನಕ (ಎ)
11 ಸೊಂಚಿಸಿ (ಎ) 12 ಪೆಂಪಿಂಚಬುಕ (ಎ) 13 ನೀಡುಂ ಬೀಸಿ (ಅಇಉ)
14 ಕತ್ತಲೆ (ಅಇ) 15 ಳಮಂ (ಅಇಉ) 16 ಲಕರಿಡಿಗಡ (ಎ) 17 ಮರಳಿಕ (ಎ)
18 ಲತೆಯುಂಗೊಡಗವಿದಂತಿರ (ಎ)

ತಳ್ಪಂಕುಗೆಡೆಯೆಯುಂ ನಡೆದು ಬಂದ [1]ವೈರಿರ್ಷುಳಪ್ಪಿ[1]ನನುಭಯಬಲದ ನಡುವೆ ನೀಡಿ ಬಿಟ್ಟ[2]ಕ್ಕೆ ರ[2]ವಿಯಪಾಯ್ದು ತನ್ನ ಬಲಮುಂ ಬೆನ್ನಿಕ್ಕಿಕೊಂಡು ನಿಂದಾಗಳ್

ನರದೇವಾಸುರಕೋಟಿ ಕೋಟಿತೆಱದಿಂ ಜೀಯೆಂಬಿನಂ ಕಣ್ಣ ಕೇ
ಸುರಿಯುಂ ಪುರ್ವಿನ ತಳ್ತ ಕ[3]ರ್ಬೊ[3]ಗೆಯುಮುಗ್ರೇಭಪ್ರತಾಪಕ್ಕೆ ಮು
ಪ್ಪುರಿಗೊಡುತ್ತಿರೆ ವೈರಿಸೈನ್ಯಮಥಿತಾಂಭೋರಾಶಿಮಧ್ಯಕ್ಕೆ ಮು
[4]ವ್ಪಿರಿ[4]ಗಾಯ್ದುಣ್ಮುವ ಕಾಲಕೂಟಮೊಗೆವಂತಿರ್ದಂ ಗರುತ್ಮಧ್ವಜಂ ೭

ವ॥ ಅಂತು ನಿಂದಳವಿಯೊಳ್ ದೊಮ್ಮಳಿಸಿ ನೂಂಕುವ ದೈತೇಯಚಕ್ರಿಯ ಚತುರಂಗಬಲಮುಮನಿತುಮೊಂದೆ ಮುಖದೊಳ್ ಕೈಕೊಂಡು ನಿಜಗಜಘಟಾ[5]ಪಟ[5]ಲಕ್ಕೆ ಸೂಚೀಯಾನೆಯಂ ಮಾಡಿ ತ[6]ನ್ನೊಂದೆ[6] ಮೆಯ್ಯೊಳಣೆದು ನೂಂಕಿ[7]ದಳವ[7]ರಿಯೊಳ್ ಪೆಣೆ[8]ದಣೆದು ಪೊ[8]ಟ್ಟಿ ಮುರಿದಿಱಿದು ಸೀೞ್ವ[9]ಮರಳೆ[9] ಪೊರಳ್ಚಿನೂಂಕುವ [10]ಉರುಳೆ ಕರುಳ್ಚಿ[10] ನೂಂಕುವ ತೇನತೇನಂ ತಿವಿದು ಬಾನೊಳೀಡಾಡುವ ದುಗುಣತಿಗುಣಂ [11]ಪ[11]ಱಿದು ದೆಸೆವಲಿ[12]ಗೆಯ್ವ[12] ನಿಘಾತದಂತದಂಡಂಗಳ ಕಿಡಿಯ ಕೆಂಡಂಗಳೊಳ್ ಪಕ್ಷ[13]ಪ[13]ಕ್ಷಂಗಳ ನುಚ್ಚಳಿಸಿ ನೆಗೆವ ನೆತ್ತರ ಸುಟ್ಟುರೆಗ[14]ಳೊ[14]ಳಂ ಕೋಡನೂಱಿ[15]ಕೆ[15]ಡೆವ ಮದಗಜಂಗಳುರಿ ಪತ್ತಿ[16]ದಿ[16]ಟ್ಟಗೆ[17]ಯೊಟ್ಟ[17]ಲಂತಿರ್ದುವು. ಮತ್ತಂ ಕಲ್ಪಾಂತಕೃತಾಂತನೆಂಬ [18]ಬೇ[18]ಡನ ಕೆಯ್ಯ ಕಳದಂಡದಂತಿ[19]ರೆ[19] ಪೊಡೆವ ಪೊಡೆದು [20]ಪಿಡಿದು ಸೆಳೆವ ಸೆಳೆದು[20] ಮರಳ್ಚುವ ಮರಳ್ಚಿ ಘ[21]ನದ[21]ಘಾಯದೊಳ್ ತತ್ತಱಿದಱಿವ ತಱಿದ ಕಡಿಗಳಂ ಬಿಡದೆ ನೋಲೊಟ್ಟಿಕೊಳ್ವಕರ ಚಂಡಾಘಾತದೊಳ್ [22]ತೊಂಡು[22]ಗೆಡದ ತುರಗದಳಂಗಳುಂ ಬಱಿ ಸಿಡಿಲ ಬಳಗಂ ಚಂದಣದ ಪೆರ್ವುರಗಾಡಂ ದಿಂಡುಗೆಡಪಿದಂತಿರ್ದುವು. ಮತ್ತಂ ಮಿಟ್ಟಿ ದೇವತೆಯ ಮೊತ್ತರಿಸುವ ಮಾರಿಯುಮೆಕ್ಕೆಕ್ಕೆಯಿನಿಕ್ಕುವ ಮುಸಲದಂಡದಂತೆ ತೊತ್ತಳದುೞಿದು ಸುತ್ತಿ ಸುೞಿ[23]ದೊಗೆದೊರ[23]ಸುವ ಕಾಲಕಂಭಂಗಳೊಳ[24]ಮು[24]ಬ್ಬರಮೆತ್ತಿ [25]ನಿರ್ವರಂ ಪೊಯ್ವ[25] ತಾಳವಟ್ಟದೊಳಂ [26]ತ್ರಿ[26]ವಳಿವಟ್ಟಮಾದ ತೇರತೆಕ್ಕೆಗಳ್ ಕಲ್ಲ

---

1 ವೀರಜಳಪ್ಪ (ಅಇಉ) 2 ಕ್ಕಿದ (ಎ) 3 ರ್ವೊ (ಎ) 4 ಮ್ಮುರಿ (ಅಇಉ) ಯ್ಬಿಡಿ (ಎ) 5 ಟೋಪ (ಎ) 6 ವೊಮ್ಮೆಳೊಂ (ಅಇಉ) 7 ದದಳಕ (ಎ) 8 ದಲೆದುಕೆ (ಎ) 9 ನನೇಲಕದಳ್ಗೆ (ಎ) 10 (ಎ) ಪ್ರತಿಯಲ್ಲಿಲ್ಲ 11 ತಿ (ಅಇಉ) 12 ಮಾಡುವ (ಎ) 13 ಕ (ಅಇಉ) 14 ಯೊ (ಎ) 15 ಸಾದನೂ ಕೆ (ಎ) 16 ದ (ಅಇಉ) 17 ಯೊ (ಎ) 18 ಕರ್ವೆ (ಎ) 19 ರೆತ್ತಿ (ಎ) 20 ನಿವಿದಿವ ಸೆಳೆವ (ಎ) 21 ನೆಯ (ಅಇಉಎ) 22 ತುಂತುದು (ಎ) 23 ದುವೊಡೆ (ಎ) 24 ನು (ಅಇಉ) 25 ನಿಬ್ಬರವೊಯ್ವ ಪಾಳೆವಟ್ಟದ (ಎ) 26 ನಿ (ಎ).

ಗಾಣದ ಕಣೆಯ ಬಾಯ್ಗೆ ಬಿಟ್ಟಿ ಕಳಿಕೆಯ [1]ಚೆಂ[1]ಡಿನಂತೆ ನುರ್ಗುನುಱಿಯಾಗಿರ್ದುವು. ಮತ್ತಂ ಭೈರವನ ಜವನ ಪಲ್ಲ ಪಙ್ಕ್ತಿಯ ಬಲ್ಲಣಿ ನೂಕಿದಂತಿರಣಿಯರಂ ನೊಣೆವ ನಖಮುಖದ ಕೋಳೊಳ್ [2]ಜೀವ[2]ವುಱುದುಱಿದಂತೆ ನೆತ್ತರನೆಣದ ಕಾರಗಲಿಸಿ ನೋರಣೆಗೆಡದ ಖೇಚರ ಭೂಚರ ನಿಶಾಚರ ಪ[3]ತ್ತ್ರಿ[3]ಪ್ರತಾನಂ ಜವನುಂಡು ಕಾಱಿ ಕಡಲಿಟ್ಟಂತಿರಿರ್ದುದು. ಅಂತು ತನ್ನ ಬಲಮನಿತುಮರ್ಧನಾರಿಯ ಬಲದಂತಿರಡಂಗಿ ಪೋಗೆಯುಂ ವೃದ್ಧನ ಬಲದಂತಿರೞಿದು ಪೋಗೆಯುಂ ಹರಡೆಯ ಬಲದಂತಿರದವಟಿಲನೊದವಿಪುವಂತುಮಲ್ಲದೆಯುಂ

ಪೊಡವಿ ಕಡಂಗಿ [4]ತಿಂ[4]ದುಗುಳ್ದ ದೊಡ್ಡಿದ ಚಿತ್ರದ ಭಿತ್ತಿಯಂ ಸಿಡಿ
ಲ್ಪೊಡೆದುದು ಸುಟ್ಟುರೆತ್ತಿ ಪಡೆಪೊಯ್ದುದು ನಂಜಿನ ಘಾಳಿಯೆಂಬಿನಂ
ಪ[5]ಡಲಿ[5]ಡೆ ಕೃಷ್ಣನೊಂದು ಗಜದಿಂ ನಿಜವಾಹಿನಿ ಕಂಡು ದಾನವಂ
ಕಿಡಿಕಿಡಿವೋಗಿ ತಾಂ ಪೊರೆದ ನಚ್ಚಿನ ಮಚ್ಚಿನ ದೈತ್ಯರೆಲ್ಲರಂ ೮

ವ|| ಅದ್ಭುತನುದ್ಭಟಂ ಕುಂಜರಕರ್ಣನಶ್ವಂಕಠನುಷ್ಟ್ರೋದರನೇಕ ಜಂಘನನೇಕಲೋಚನನುದರವದನಂ ಖುರನಾಶಂ ಖರನಾ ನಷ್ಟಪತಾಕಂ ಪಾತಾಳಕೇ[6]ತು[6] [7]ಕಾ[7]ಳನಿಗರಣಂ ಜ್ವಾಲಾಲೋಮಂ ಕಾಲಚಕ್ರಂ ಕರಾಳನಖರನರಾಲದಾಡನಜಾಂಡಪೃಷ್ಠಂ ಭುಜಂಗಬಾಹು[8]ಷಡಂ[8]ಗಪಾ[9]ದ[9]ಮೆಂಬವರ್ಮೊದಲಾದ ಪೆಸರ ಪೆಸರಱಿಕೆಯ ಲಕ್ಕಲೆಕ್ಕದ ರಕ್ಕಸರ ನಾಯಕರದನೆಕ್ಕೆಕ್ಕಿಯಿಂ ಮೂದಲಿಸಿ ಬೆಸಸೆ

ಬಱಿಸಿಡಿಲಾಗಿ ಪೊಯ್ವ ಲಯಕಾಲಮಹಾ[10]ನಿ[10]ಳನಾಗಿ [11]ಬೇ[11]ಗದಿಂ
ಮುಱಿವ ದವಾಗ್ನಿಯಾ[12]ಗುರಿ[12]ವ ಕೆಂಡದ ಪೆರ್ಮೞೆಯಾಗಿ ತಂಡದಿಂ
ದೆಱಗುವ ಬೆಟ್ಟಮಾಗಿ ಬಿಡದೊತ್ತುವ ಕತ್ತಲೆಯಾಗಿ ಮುತ್ತಿ ಬೇ
ಸಱಿಸುವಗುರ್ವು ಪರ್ವಿ ಕವಿದರ್ದನುಜಾ[13]ರಿಗತ[13]ರ್ಕ್ಯವಿಕ್ರಮರ್ ೯

ವ|| ಆ ಮಹಾದ್ಭುತ ರೌದ್ರ ವೀರ[14]ವಿಕ್ರಮ[14]ಪ್ರಚಂಡಪ್ರಳಯದೊಳ್ ಮಂದರಂ [15]ನಿ[15]ಲ್ವಂತೆ ಮಂದರಧರಂ ನಿಂದು ಮಾರ್ಕೊಂಡು

---

1 ಬೆಂ (ಅಇಉ) 2 ಬೇಚಿ (ಎ) 3 ಜ್ಞ (ಅಇಉ) 4 ನಿಂ (ಅಇಉ) 5 ಡೆವಿ (ಎ) 6 ತಂ (ಎ) 7 ಕಾ (ಅಇಉ) 8 ಷದಂ (ಅಇಉ) 9 ಲ (ಅಇಉ) 10 ಬ (ಅಇಉ) 11 ವೇ (ಪ) 12 ಗಳು (ಎ) 13 ದಿಪತ (ಎ) 14 ಕ್ರಿಯ (ಎ) 15 ಗೆ (ಅಇಉ)

ಪ್ರತಿಘಾತಪ್ರಕಟಾಸ್ತ್ರಶಸ್ತ್ರಚಯದಿಂ ದೈತೇಯಸಾಮಂತರ
ದ್ಭುತಮಾಯಾಮಯಶಕ್ತಿಯಂ ಕೆಡಿಸಿ ಭೂಮಾನಕ್ಕೆ ಬಂದಾಹವ
ಪ್ರತಿಮಲ್ಲಂ ಭಟಶೂಲಮಾಂಸಮಯಮಂ ಕ್ರೋಧಾವಳಂಗಿತ್ತನಾ
ಹುತಿಯಂ ತೋಮರ ಶಂಕು ಮುದ್ಗರ ಮುಸುಂಡೀ ಪಿಂಡಿವಾಳಂಗಳಿಂ ೧೦

ವ॥ ಮತ್ತಂ

ತಲೆ[1]ಪಱಿ[1]ದಟ್ಟೆ ತಿಂದವಸುರರ್ಕಳ ತೋಳ್ಪಳಿವೋ[2]ಗಿ ಬಿಟ್ಟು[2] [3]ಕೀ
ಳ[3]ಲಗಿನೊಳೆಯ್ದೆ ಕುತ್ತಿದುವು ಪೆರ್ದೊಡೆಗಳ್ಕಡಿಖಂಡಮಾಗಿಯುಂ
ಕೆಲವಣಿಯಂ ಕಿಮುಳ್ದುಱಿದು[4]ವೇ[4]ಟ್ದುರಿವೆಣ್ಣೆ[5]ವೊಲ[5]ಣ್ಮೆ ನೆತ್ತರೆ
ತ್ತಲುಮುರಿಪಿತ್ತು ಸತ್ತುಮಿದಿರಂ ಕೆಡಿಸಲ್ಪಳರೇಂ ಸಮರ್ಥರೋ ೧೧

ಎನಿತುಂ ಕೃಷ್ಣನ ಗಂಧಸಿಂಧುರಮಹಾಕಾಳಂಗೆ ಕೈಬೋನಮು
ಪ್ಪಿನೆಗಂ ಮಾರ್ಪಡೆ ಕಂಡು ಹೇಸಿ ಹಳಿ ಬಂದಡ್ಡೈಸಿ ಬೂತಟ್ಟಿದಂ
ದನುಜಂಗೀಬಳಘಾತಿದುರ್ಬಲಮೆ ಖಡ್ಗಾಖಡ್ಗಿಯಿಂದೆಮ್ಮನಾಂ
ಪನಿ[6]ತಣ್ಮು[6]ಳ್ಕೊಡೆ ಬ[7]ರ್ಕಿ[7]ದಂತವಿಸಿ ತಾನೆಂದಿಂಗೆ ಬಂದಾಂತಪಂ ೧೨

ವ॥ ಅಂತು ಬೂತಟ್ಟೆ ಭೂತಳಾಗ್ರದೊಳುಭಯಬಲದ ಕರಿತುರಗನರಕೋಟಿಗ[8]ಳ ಪೆಣದ[8] ಪೇರಟ್ಟೆಯ ಬೆಟ್ಟುಗಳೊಳಂ ಪರಿವ ನೊರೆನೆತ್ತರ ಕಾಲ್ಪುರಂಗಳೊಳ್ ಕಾದಲೆಡೆಗಾಣದೆ ನಿದಾಘಸಮಯದ ಬಯಲ್ದೊಱೆಯಂತತಿಲೋಹಿತಸ್ಯಂದನನಾಗಿ ಪಿಡಿದ ವಜ್ರಜ್ವಾಲೆಯೆಂಬ ಕೋದಂಡದಂಡದ ಚಂಡಪ್ರಭೆಯೊ[9]ಳಮಂ[9]ಗವಟ್ಟದೊಳ್ ತೊಟ್ಟು ಮೆಱೆವ ಪೊನ್ನ ರನ್ನದ ಸನ್ನಣದ ಬೆಳಗಿನೊಳಮಭ್ಯಂತರಾಳಸಮಭ್ಯುದ್ಗತ ಭಾನುವಿನಂತೆ ವಿಯತ್ತಳದೊಳ್ ತಳತ್ತಳಿಸಿ ತಾಳಧ್ವಜನಾಂತು ನಿಂದಾಗಳ್

ಬಳಧೂತಾ[10]ರಾವ[10]ಪೂರ್ಣಾಹುತಿಹುತಭುಗ್ಜ್ವಾಲೆವೊಲ್ತೀವ್ರಕೋಪಾ
ನಳನಾ ಬ್ರಹ್ಮಾಂಡಮಂ ಮಂಡಳಿಸೆ ನೆರೆದು ನೋಡುತ್ತುಮಿರ್ದ[11]ಪ್ಸ[11]ರೀಸಂ
ಕುಳಮುಂ ದೇವರ್ಕಳುಮ್ಮೆಯ್ದೆಗೆದಗಿದೆರಡುಂ ಕೈಗಳಿಂ ಮುಚ್ಚೆ ಕಣ್ಣಂ
[12]ಬ[12]ಳನಂ ಕೈಕೊಂಡನುಗ್ರಾಜಿಯನೊಗೆದನಿಳಾ[13]ದಾನ[13]ಮಂ ದಾನವೇಂದ್ರಂ ೧೩

ವ॥ ಅಂತು ನೆಗೆದು ನಿಂದ ರಜನೀಚರಚಕ್ರಿಯ ನಿಶಾಚರ ಖೇಚರ ಭೂಚರ ಚಮೂಚಕ್ರಂ ಚಕ್ರಧರಾಗ್ರಜಂಗಾಕ್ರಮಿಸಿ ಕವಿಯಲೊಡಂ

---

1 ವಱಿ (ಅಇಉ) 2 ಗಿಲಟ್ಟೆ (ಅಇಉ) ಗೆ ಬಿರ್ದ (ಎ) 3 ಕಿಳ್ತ (ಎ)
4 ಮೇ (ಎ) 5 ಯೊಳು (ಅಇಉ) 6 ತಿಂತು (ಅಇಉ) 7 ಕ್ಕಿ (ಎ)
8 ಳ (ಅಇಉ) 9 ಳಂ (ಅಇಉ) 10 ಲಾಪ (ಎ) 11 ಪ್ಪ (ಅಇಉ)
12 ಖ (ಅಇಉ) 13 ಧ್ವಾಂತ (ಎ)

ಇಱುಂಯಲ್ಪೊಂಗುವ ದೈತ್ಯಹಂಸತತಿ ಪಟ್ಟಂಪಾಱಿ [1]ನಾರಾಯಣಂ
ಬೆಱಗಾಗುತ್ತಿರೆ ನೋಟ್ಪವರ್ದನುಜರಾಜಂ[1] ದರ್ಪದಾವಾನಲಂ
ಬಱು[2]ದಾಗು[2]ತ್ತಿರೆ ಮೇರೆದಪ್ಪಿ ರುಧಿರಸ್ರೋತಸ್ವಿನೀಸಂಕುಲಂ
ಕಱಿದಂ ನಿಂದು[3] ಬಳಂ ಬಳಾ[3]ಹಕದವೊಲ್ಧಾರಾಶರಾಸಾರಮಂ ೧೪

ವ॥ ಮತ್ತಮಿತ್ತ ಗಜಾರೂಢನಾಗಿ ಕಾದುತ್ತುಮಿರ್ದು ಕಾ[4]ಳಿಯ[4]ಮರ್ದನಂ ಪಂದಲೆಯ ತಂದ[5]ಲೊಡವಟ್ಟಿಗಳನ[5]ಟ್ಟೀಱಿನೊಳಂ ಚುಮ್ಮನೆ ಕಱಿದವ ನೆತ್ತರ ಪೆರ್ಮೞೆ ಗಳೊಳಂ ವ್ಯೋಮಸಂಗ್ರಾಮವನಕ್ಷರ[6]ನ[6]ನಱಿದು ಪೆಱಗೆ ನಿಂದರೆ ನೆಲೆಯೊಳಗ್ರಜನಂ ಕಾಣದೆ

ಹೊರಜೆಯನುರ್ಚಿ ನಿಂ[7]ದು[7] ನಿಭೃತಾಸನದೊಳ್ ದೃಢವಾಗಿ ಕುಳ್ಳಿರಿಂ
ದಿರಿಸಿ ನಿಷಾದಿಯಂ ಪೆಱಗಣಾತನನುಗ್ರ ಮದೇಭಮೋಘದಿಂ
ದಿರದೆ ಸಿಡಿಲ್ಸಿಡಿಲ್ದೊಗೆದವೋಲ್ಗಗನಕ್ಕೊಗೆದಣ್ಣನೆಂಬ ದ
ಳ್ಳುರಿಗೆ ಪತಂಗನಂತೆಱಗಲಾಟಿಪನಂ ಮಧುಕೈಟಭೇಂದ್ರನಂ ೧೫

ವ॥ ಮಾರ್ಕೊಂಡರಾತಿಬಲಮನಾಂಕೆಗೊಂಡಗ್ರಜಾತನಂ ಕೈಕೊಂಡು ತಾನೆ ಮುಂಕೊಂಡು ನಿಂದು

ಕಡೆದಂತಾಯ್ತು ಸಮುದ್ರ ಸಪ್ತ[8]ಕ[8]ಜಲಂ ನೊಂದಷ್ಟದಿಗ್ದಂತಿ ಬಾ
ಯ್ಬಿಡುತುಂ ಕು[9]ಳ್ದಿದು[9]ವ[10]ಳ್ಗಿ[10] ತಳ್ಗಿ ನವಖಂಡೋರ್ವೀತಳಂ ಹಿಗ್ಗಿದ
ತ್ತುಡಿ[11]ಗಿ[11]ತ್ತೆಯ್ದೆ ದಿಶಾದಶಪ್ರಕರಣಂ ತಾನೆಂಬಿನಂ ನೀವಿ ಜೇ
ವೊಡೆವೊಯ್ದಂ ಮುರವೈರಿವೈರಿಕುಲ[12]ಚೇತೋ[12]ಭಂಗಮಂ ಶಾರ್ಙ್ಗಮಂ ೧೬

ವ॥ ಅಂತು ನೆಗಟ್ದು ಸಮರಾವಷ್ಟಂಭಮಾಡಂಬರಮನಪ್ಪುಕೆಯ್ದು

ಕರದೊಳ್ಬಿಲ್ಮಂಡಲಾಕಾರದಿನಿರೆ ಪೊಱಮುಯ್ವಿಂಗೆ ತೊಟ್ಟಂಬುಮಟ್ಟಂ
ತಿರೆ ರೋದೋರಂಗದೊಳ್ನೋಟ್ಟನಿವಿಷ್ಟಜನಮಿಂತೆಂದುದೀ ಕೃಷ್ಣನೇ[13]ಷ್[13]
ಚ್ಚರಿತೋಡುಂಬೀವಿಲ್ಲಿ[14]ಂತಣಿ[14] ಪೆ ಮಯುಮಾದಪ್ಪುದೋ [15]ಬಲ್ಲಿವುಗ್ರಾ[15]
ಸುರವೀರ[16]ರ್ಕ್ಕೋಲುಮೇ[16]ಱುಂಬೆರಸೊಗೆದವ[17]ಗಿಲ್ದಾ[17]ದರೆಂಬಂತಿರೆಚ್ಚಂ ೧೭

---

1 ಬಾನೆಳ್ದ ಪೋಚ್ಚರ ಪೋದಾತ ಮರೀಚಿನಂದೆ (ಎ) 2 ದೋಱು (ಅಇಉ) 3 ಮಿದಂಬುವಾ (ಅಇಉ) 4 ಳಿಂದಿ (ಎ) 5 ಱೊಡ್ಡುಜೋಮಟ್ಟಿಗಳನು (ಎ) 6 ಮ (ಎ) 7 ದ (ಅಇಉ) 8 ತಿ (ಎ) 9 ಳ್ದಿರ್ದು (ಅಇಉ) 10 ಗ್ಗಿ (ಅಇಉ) 11 ದ (ಅಇಉ) 12 ಚಿತ್ತಾ (ಅಇಉ) 13 ನ (ಅ) 14 ಚ್ಚುತೆ (ಅಇಉ) 15 ಬಲ್ಸಮುದ್ರಾ (ಅಇಉ) 16 ಕ್ಕೊಲ್ಸವೇ (ಅಇಉ)

ವ॥ ಅದಲ್ಲದೆಯುಂ

ಕರಿಯಂ ಬೀಡುವ ಬಾಯ್ಗಿದೊಂದಲಗಿನಂಬೊಲ್ದೀೞುವಂ[1]ಗ[1]ಕ್ಕೆ ಭಾ
ಸುರಭಲ್ಲಾಸ್ತ್ರಮಿದೊಂದು ನೀಡಿಬಿಡ[2]ದಿ[2]ಕ್ಕಲ್ಕೆಕ್ಕತಕ್ಕುಳ್ಳ ತೋ
ಳಿರಡಕ್ಕಂ ಕವಲಂಬಿದೆಂದೆಲವೊ ಕೊಳ್ಕೊಳ್ಳೆಂದು ಪೂಣ್ದೆಚ್ಚನ
ಚ್ಚರಿಯಪ್ಪಂತು ಜನಾರ್ದನಂ ಮುನಿದು ಸುಂಗಲ್ಮುಟ್ಟಿಪಂದಿರ್ದನಂ ೧೮

ವ॥ ಅಂತು ಮುಟ್ಟೆ ಮೂದಲಿಸಿ ಮೆಟ್ಟೆನಿಂದೆಚ್ಚ ಬಿಚ್ಚತಿಗೆಗೊಚ್ಚತಂ ಕೆಳರ್ದು

ಧರೆಯುಂ ದಿಕ್ತಟಮುಂ ವಿಯತ್ಪಟಲಮುಂ [3]ಧಾರಾಕರೋ[3]ತ್ಪಾತದಿಂ
ತಿರಿಗುತ್ತಿರ್ಪಿನೆಗಂ ತಿರಿಪ್ಪಿ ಮಧು ಕೋಪಾಟೋಪದಿಂದಿಟ್ಟೊಡ
ದ್ಧರಚಕ್ರಂ ಬಲವಂದು ನೀಲಗಿರಿಯಂ ಪೂರ್ವಾದ್ರಿಗೆತ್ತಿರ್ದ ಭಾ
ಸ್ಕರನಂತಿರ್ದುದು ದೇವ ನೀಂ ಬೆಸಸೆನುತ್ತುಂ ಕೃಷ್ಣನಂಸಾಗ್ರದೊಳ್ ೧೯

ವ॥ ಅಂತಾತ್ರಿಖಂಡಮಂಡಳಾಧಿಪತಿಯ ರಾಜ್ಯಲಕ್ಷ್ಮಿ ಚಕ್ರವರ್ತಿಪ್ರಭಾವ[4]ಮುಂ[4] ತಂದು ತನಗೋಲಗಿಸಿದ ರತ್ನಪಾತ್ರದಂತೆ ಬಲದ ಭುಜದೊಳ್ ತಳತ್ತಳಿಸುತಿರ್ದ ಚಕ್ರರತ್ನಮಂ ಕಳೆದುಕೊಂಡು

ಅನಿಲಪಥಕ್ಕೆ ಪಾಱಿ ತಲೆ [5]ಪೋಪಿನ[5] ಕೋವರಚಕ್ರದಂತೆ ತಿ
ರ್ರನೆ ತಿರಿದುರ್ವರಾತಳಕೆ ಬೀೞ್ಪಿನೆಗಂ ತೆಗೆದಿಟ್ಟನಿಟ್ಟಳಂ
ಮುನಿದೊಡೆ ಭಟ್ಟಗುತ್ತನ ಕಟಾರಡವೊಲ್ ನೆಱ ತನ್ನ ಕಯ್ದು ತ
ನ್ನನೆ ತಱಿದೊಟ್ಟೆ ದಾನವಧರಾತಳವಲ್ಲಭನಂ ಚತುರ್ಭುಜಂ ೨೦

ಬಿಡೆನಾಂ ಸತ್ತೊಡಮೀವುದದ್ವಿಪಮನೆಂಬಂತಟ್ಟೆ ಬಾನಿಂದೆ ಮು
ನ್ನಡಿಯೊಳ್ಬಿರ್ದುದು ದಾನವೇಂದ್ರವ ಶಿರಂ ಬೀೞ್ತಿಂದು ಪೂರ್ವಾಸನಂ
[6]ಬಡೆ[6]ದಂತಿರ್ದುದು ಸಾದಿಗಳ್ಕದಳಿಕಾಸ್ತಂಭಾಗ್ರದೊಳ್ಕಟ್ಟಿದ
ಪುಡಿಗತ್ತೂರಿಗೆ ತುಂಬಿ ಮಂಡಳಿಸಿ ಬಂಬಲ್ಗಟ್ಟೆ ಭಾಳಾಗ್ರದೊಳ್ ೨೧

ಸುರತರುವಿನರಲ ಸರಿಗ
ಳ್ಸುರಿದುವು ಸುರನಿಕರವೊಸೆದು ಪರಸುವ [7]ಪಸರಂ[7]
ಪರೆದುವು ಸುರದುಂದುಭಿಗ
ಳ್ಮೊರೆದುವು ಹರಿ ವಿಜಯಲಕ್ಷ್ಮಿಯೊಳ್ನೆರೆಯಲೊಡಂ ೨೨

---

1 ಕ (ಎ) 2 ವಿ (ಎ) 3 ದಾರಾಮದು (ಉ) 4 ಮಂ (ಅಇಉ) 5 ಕೋದರ (ಉ) 6 ಬಿಡ (ಅಇಉ) 7 ರಭಸಂ (ಅಇಉ)

ವ ॥ ಸಮನಂತರಂ

ರಣಮಂ ಪೂಜಿಸವೇೞ್ದು ಕಾದು ಶರಣಾಯಾತರ್ಕಳಂ ವಾಜಿವಾ
ರಣ[1]ಕುಂತಾತತಿ[1]ವಸ್ತುವಂ ಪಿಡಿದು ದಂಡಾಧೀಶರಂ ಕೊಂಡು ಪ
ಟ್ಟಣದೊಳ್ ಯೋಜಿಸಿ [2]ಬಾಣರಾಸಿ[2]ವೊಟಲೊಳ್ [3]ತಾಳಾಂಕ[3]ನುಂ ಪಂಕಜೇ
ಕ್ಷಣನುಂ ದ್ವಾರವತೀಪುರಕ್ಕೆ ಮಗುೞ್ದಿತ್ತಿಂದರ್ಮಹೋತ್ಸಾಹದಿಂ ೨೩

ವ ॥ ಅಂತು ಬರ್ಪ ಚಕ್ರ[4]ಧರನ[4] ವೀರ[5]ವಿಜ[5]ಯಲಕ್ಷ್ಮೀವಯಸ್ಯೆಯರಂ ದೂರದೊಳೆ ನೋಡಿ ಸಾರೆದೆಗೆದಪ್ಪಲ್ ಕರೆವ ಪುರಲಕ್ಷ್ಮಿಯ ಕಣ್ಗುಡಿಯ ಕರಪಲ್ಲವಂಗಳ ಪರಿಯಂ ಮಿಳ್ಳಿರ್ದು [6]ಮಿಳ್ಳಿ[6]ಸುವ [7]ವಿ[7]ಕಾರವಟ್ಟಿ[8]ಯ ಗುಡಿಯ[8] ತುಱುಗಲೊಳಂ ಸಕಲ [9]ಮಂಗಳ ಲ[9]ಕ್ಷ್ಮೀಜನಾರ್ದನಂಗೆ ಸಾರ್ದ ಮಾಲೆಸೂಡಲೆತ್ತಿದ ಸ್ವಯಂ[10]ವ[10]ರಮಾಲೆಯಂತೆ[11] ಸಾ[11]ಲೆ ಮೆಱೆ[12]ವ[12] ವಂದನಮಾಲೆಗಳೊಳಂ ಯದುಕುಲಶ್ರೀಯೊಳೊದವಿದನುರಾಗಂ ಪರಿದು ಪರ್ವಿ ಪಸರಿಸುವಂತೆ ಕೇರಿ[13]ಕೇರಿಗಳೊಳ್[13] ಸೂಸುವ ಕೇಸರದ ಸೌಸ[14]ವಂಗಳೊ[14]ಳಂ ಬೀದಿಬೀದಿಗ[15]ಳೊಳ್[15] ನೋಡಲೆಂದು ಕಣ್ದೆಱೆದಂತೆ ಬಿತ್ತರಂಬಡೆದಿತ್ತರದಿನಿಕ್ಕುವ ಮುತ್ತಿನ ರಂಗವಲ್ಲಿಗಳೊಳಂ ರಾಗರಸವರ್ಷಮನೋರಂತೆ ಕಱೆವ ಪೌರಜನೋತ್ಸಾಹ ವಾರಿವಾಹಧ್ವನಿಯಂತೆ ಬಾಜಿಸುವ ಬದ್ದವಣದೊಳಮಿದಿರ್ಗೊಳಲ್ ಪೊಱಮಡುವ ಕನ್ನಡಿಯ ಕಳಶದ ಬಣ್ಣವುರ[16]ದಾರತಿ[16]ಯ ಪುಣ್ಯಾಕಾರದ ಪಣ್ಯವನಿತಾಜನದ ಮಂಗಳಾಚಾರದ ಸಂಗೀತನರ್ತನ[17]ದೊಳುಲಿವ ಚಿತ್ರೋ[17]ತ್ಸವದೊಳಮಾಪುರಕ್ಷೋಭಚಂದ್ರೋದಯದ ಪಾಲ್ಗಡಲಂ[18]ತಿರುದ್ವೇಳ[18]ಕೋಳಾಹಳಮನಪ್ಪುಕೆಯ್ದುದಂತುಮಲ್ಲದೆ

ಮದಗಂಧೇಭತುರಂಗ [19]ಸ್ಯಂದನಬಲಂ[19] ಸೋಮಪ್ರಭಂ ಲೀಲೆಯಿಂ
ದಿದಿರ್ವಂದಾನತರಾದ ಸುಪ್ರಭಮಧುಪ್ರಧ್ವಂಸರಂ ಹರ್ಷಬಾ
ಷ್ಪದೆ ಮೆಯ್ಗರ್ಚಿದನೆತ್ತಿಕೊಂಡು ಪರಸುತ್ತುಂ ತಳ್ತು ಮುಂಡಾಡಿದಂ
ಕದಪಂ ಕರ್ಚಿದನಿಕ್ಕಿದಂ ಪದೆಪಿನಿಂ ಬಾಯ್ವಾಯ ತಾಂಬೂಲಮಂ ೨೪

---

1 ಕಾಂತಾದಿಸ (ಎ) 2 ವಾರಣಾಸಿ (ಅಇಉ) 3 ತಳಾಂಕಕ್ಷ (ಎ) 4 ವರ್ತಿಯ (ಅಇಉ) 5 ಲಕ್ಷ್ಮಿ (ಅಇಉ) 6 ಮಸಗಿ (ಅಇಉ) 7 ನಿ (ಅಇಉ) 8 ಯ (ಎ) 9 ಲ (ಅಇಉ) 10 ಬ (ಎ) 11 ಶಾ (ಅಇಉ) 12 ಯೆ (ಅಇಉ) 13 ಗೇರೆಯೊಳು (ಎ) 14 ಕದೊ (ಎ) 15 ಳ (ಎ) 16 ದಾಳ್ವೇರಿ (ಅಇಉ) 17 ದೊಳುಲಿವ ಚಿತ್ರೋ (ಅಇಉ) ದ ವಿಚಿತ್ರೋ (ಎ) 18 ತಿರುಳ (ಅಇಉ) 19 ಸೈನ್ಯ ಬಹಳಂ (ಎ)

ವ॥ ಅಂತು ಕಂಡು ತಮ್ಮನಿಬರುಂ ಬೇಱಬೇಱೆ ಪಟ್ಟದಾನೆಗಳಂ [1]ಪಕ್ಕೆಸಾರೆ[1]ಗಳ ಕಾಯಬಳದ ಕತ್ತಲೆಯಂ ಮುತ್ತಿನ ಮಾಣಿಕದ ಸತ್ತಿಗೆಯಂ ಬೆಳಗು [2]ತಳವೆಳಗಂ[2] ಮಾಡೆ ಶಂಖಭೇರೀದುಂದುಭಿಗಭೀರಧ್ವನಿಯಿಂ [3]ಕಾಹಳೆ[3] ಬಹಳಬಹುವಿಧ ಧ್ವಾನದಿಂ [4]ದಿಕ್ಕೋ[4]ಣ ಕುಹರಮಂ ಬಹಳಂ ಮಾಡೆ ಪುರಮಂ ಪುಗುತರ್ಪಾಗಳ್ [5]ಮದಿ[5]ಲ ಮಾಳಿಗೆಯ ನೆಲಮಾಡದ ದವಳಾರದ ಮತ್ತವಾರಣಮಾಟಕೂಟಪ್ರಾಸಾದಂಗಳ ಬೀದಿವೀದಿಗಳಾದಲೆಗಳೊಳ್ ನಿಂದು ನೋಡಲ್ ನೆಱೆದ ಪುರಪುರಂಧ್ರೀಜನದ ತಿಂತಿಣಿಗಳೊಳಗೆ

ತುಂಗಘನಸ್ತನಂ ಕಳಶಮಾನನಮುಜ್ಜ್ವಲದರ್ಪಣಂ ಚಳಾ
ಪಾಂಗಮೆ ಬಾಸಿಗಂ ಮಿಳಿರ್ವ ಮೇಲುದು ಬೆಳ್ಗೊಡೆ ತೋರಣಂ ಕುರು
ಳ್ದೊಂಗಲಮಾಲೆಯಾಗಿ ಬಲಭದ್ರಮುಕುಂದರನೊಲ್ದು ನೋಡಿದ
ರ್ಮಂಗಳಲಕ್ಷ್ಮಿ[6]ಯರ್ನೆ[6]ರೆದು [7]ನೋಳ್ಪ[7]ವೊಲೊಪ್ಪುವ ಪೌರನಾರಿಯರ್ ೨೫

ಪ್ರಣಯಂ ಕೈಮಿಗೆ [8]ನೋ[8]ಡಿದಳ್ನೆಗೆಟ್ದಿ ನೇಪಥ್ಯೋದ್ಯಮಂ ಮಾಣ್ದು ಕ
ಣ್ಬೊಣರಂ ರಂಜಿಸಲೆತ್ತಿದಂ ಜಿನಶಲಾಕಾ ಶೋಭೆಯಂ ರತ್ನದ
ರ್ಪಣಮಂ ಕಕ್ಕಡೆಗಡ್ಡಣಕ್ಕೆ ದೊರೆಯಾ[9]ಯ್ತೆಂದಂದು[9] ಕಂದರ್ಪನೊ
ಡ್ಡಣದಿಂ ನೂಂಕಿದ [10]ಬಿಂಕದಂ[10]ಕದವೊಲೊರ್ವಳ್ ರಾಮಗೋವಿಂದರಂ ೨೬

ವ॥ ಮತ್ತೊರ್ವಳ್ [11]ಕಂ[11]ಕಣದ ಕಿಂಕಿಣಿಯ ನೇವುರದಬ್ಬರಂ ನೆಲನನುಗ್ಘಡಿಸುವಂತಿರಡಿಗಡಿಗೆ ಪೊಡರೆ ನಡೆತಂದು [12]ನಿಂದಾಗಳ್[12]

ಪಡಪಡ ಪಾಯ್ವ ಮೆಲ್ಲೆರ್ನೆಗೆ ಘರ್ಮಜಲಂ ಕೊ[13]ನ[13]ರ್ವಾನನಕ್ಕೆ ಸು
ಯ್ಗುಡಿಯ ಬಳಲ್ವ ಮೆಲ್ನುಡಿಗೆ ಕಂಪಿಪ ನುಣ್ದೊಡೆಗಿಂಬುವೆತ್ತುವೀ
ಬಡನಡು ಶೀಘ್ರಯಾನಮುದುತಾ ನೆವಮಾದೊಡಮಾಗಳೇಂ ಪಿಸು
ಣ್ಗೆಡೆದು ತೆರಳ್ದುದಾ ಹರಿಯನೀಕ್ಷಿಪ ನೀಱೆಯ ಸೋಲ್ತ ಭಾವಮಂ ೨೭

ವ॥ ಮತ್ತಂ

ಕುರುಳಂ ತಿರ್ದುವ ಭಂಗಿಯಿಂದೆ ರದನಾಂತರ್ಲೇಖನಂ ಮಾಳ್ಪವೊ
ಲ್ಬೆರಲಂ ಮೇಲುದನೆತ್ತುವಂತೆ ಮುಡುಹಂ ಘರ್ಮೋದಹಾರಸ್ತನಾಂ
ತರಮಂ ಬೀಸುವ ದೇಸೆಯಿಂದಮುರವಂ ಕೂರ್ತಿತ್ತೆ[14]ನೆನ್ನೊ[14]ಪ್ಪುಗೊ
ಳ್ನೆರೆಯೆಂದಂಗನೆ ಸನ್ನೆದೋಱುವವೊಲೊರ್ವಳ್ ಕೃಷ್ಣನಂ ನೋಡಿದಳ್ ೨೮

---

1 ಪಕ್ಕಸಾರಿ (ಎ) 2 ತ್ತೆ ಬೆಳಗು (ಅಇಉ) 3 ಕಹಳಾ (ಎ) 4 ಕೋ (ಅಇಉ) 5 ಮಗಿ (ಎ) 6 ವೊಲ್ನೆ (ಎ) 7 ಬರ್ಪ (ಅಇಉ) 8 ಮಾ (ಅಇಉ) 9 ಗೆಯ್ತೆಂದು (ಎ) 10 ಭಾಷೆಯಂ (ಅಇಉ) 11 ಕಳಲಕಂ (ಎ) 12 ದು (ಎ) 13 ಡ (ಎ) 14 ನಾನೊ (ಅಇಉ)

ವ॥ [1]ಅದಲ್ಲದೆಯುಂ ಮತ್ತಮೊರ್ವಳ್[1]

ಕೆಳದಿ ಸಪತ್ನಿಯಾದಳಿನಿಯಂ ಪಗೆಯಾದನನನ್ಯಬಂಧುಗ
ಳ್ಮಳಿವವರಾದರಾ ಪ್ರೊಟಿಲ ನೀ[2]ಱರೆ[2] ಕಣ್ಕಿಸುಱಾದರೆತ್ತಲುಂ
ಬಳಸುವ ನೋಟ[3]ಕ[3]ರ್ತನಗೆ ದಾಯಿಗರಾ[4]ದ ಮದಾ[4]ಳಿನೀಳಕುಂ
ತಳೆ ಮರುಳಾದಳೀಕ್ಷಿಸಲೊಡಂ ಮುರವೈರಿಯ ಗಂಡಗಾಡಿಯಂ ೨೯

ವ॥ ಅಂತು ತಮತಮಗೆ ಕಪ್ವರಿಗೊಂಡು ನೋಡುವ ಮುಗ್ಧಮಧ್ಯ[5]ಮವಿದಗ್ಧ[5]
ನಾಯಕೀನಿಕಾಯದೊಳಗೆ

ಬಳಭದ್ರಂ ಚಂದ್ರನಂತಿರ್ದಪನಿರೆ ಬಲದೊಳ್ತಂದೆ ಸೋಮಪ್ರಭಂ ಕೋ
ಮಳಗಾತ್ರಂ ಚೈತ್ರನಂತಿರ್ದಪನೆಡಗೆಲದೊಳ್ಕಾಮನಂತಿರ್ದಪಂ ಕ
ಣ್ಗಳ[6]ಬೆಳ್ಪಿಂ[6] ಮೆಯ್ಯಂ ಕರ್ಪಿಂ ನಡುವೆ ಗಜದ ಮೇಲೊಪ್ಪುವೀಕೃಷ್ಣನೆಂದಾ
ಕುಳಿಯಾದಳ್ತದ್ಧರಾಲೋಕನಕುಸುಮಶರಾಘಾತದಿಂ ಪ್ರೌಢೆಯೊರ್ವಳ್ ೩೦

ವ॥ ಅಂತು ನೋ[7]ಡುವ[7] ಗಾಡಿಕಾರ್ತಿಯರ ಕಣ್ಮಲ[8]ರಂ[8] ಸೇಸೆಗೊಂಡು ಚಿತ್ರಮಂ ಕವರ್ತೆಗೊಂಡು ಯಾದವಾ[9]ನ್ವ[9]ಯರಾಜಹಂಸಂ ರಾಜಭವನಮಂ ಪೊಕ್ಕು ರಾಜಾಂಗಣದೊಳ್ ಸಕಳ ರಾಜಲೋಕಕ್ಕೆ ಸಮುಚಿತಸನ್ಮಾನದಾನಂಗಳಿಂ ಬೀಱಿಕ್ಕೊಟ್ಟು ಕಳುಪಿ ಕರುಮಾಡದ ಮುಂದಣ ಭುವನತ್ರಯಾಭರಣಮೆಂಬೊಡ್ಡೋಲಗಸಾಲೆಯ ವಡ್ಡ[10]ಪ[10]ರದ ರತ್ನಸಿಂಹಾಸನಮನಲಂಕರಿಸಿ ಮಂಗಳಾಚಾರಂ ಚಾರುನೀರಾಜನ [11]ಸಂಗೀ[11]ತಾತೋದ್ಯಹೃದ್ಯನಿರ್ಘೋ[12]ಷಂ[12] ನೀರದಪಥಕ್ಕೆ ಭೂಷಣಮಾಗೆ ತಂಡತಂಡದಿಂ ಮೆಱೆವ [13]ದಂಡಮಂಡಲಾ[13]ಧೀಶಮಂಡಲಿಕ ಮಕುಟಬದ್ಧ ಪ್ರಶಸ್ತ[14]ದ[14]ರ್ಶನೋಪಾಯನ[15]ಮರ್ಚನಾ[15]ವಿಳಾಸಂ ಗೋಸನೆವಡೆಯೆ

ಬಲಭದ್ರಂ ಮಧುಮರ್ದನಂಗೆ ಬೞಿಕಂ ಚಕ್ರೇಶಪಟ್ಟಂ ಜಗ
ತ್ತಿಲಕಂ ತಾನೆನೆ ಕಟ್ಟೆ ದಿಗ್ವಿಜಯದೊಳ್ಧಾತ್ರೀತ್ರಿಖಂಡಂ ಗುಣಂ
ಗೊಳೆ ಬಾಯ್ಕೇಳಿಸಿ ಕೀರ್ತಿವರ್ತಿಸೆ ದಿಗಂತಂ ತಮ್ಮುಕ್ತಿರ್ವರ್ನಿರಾ
ಕುಳಮಿರ್ದರ್ನೆಲೆವೀಡುಮಾಗೆ ಸುಖ[16]ದಿಂ[16] ದ್ವಾರಾವತೀಪಟ್ಟಣಂ ೩೧

---

1 (ಅಇಉ) ಗಳಲ್ಲಿಲ್ಲ 2 ಱಗೆ (ಎ) 3 ವ (ಎ) 4 ಧರರಾ (ಎ)
5 ಮ (ಅಇಉ) 6 ಬೆರ್ಪಿಂ (ಎ) 7 ಡಿ (ಅಇಉ) 8 ರಮಾಲೆಯಂ (ಎ)
9 ಭ್ಯುದ (ಅಇಉ) 10 ಪು (ಎ) 11 ನೀ (ಎ) 12 ಷಣಂ (ಎ)
13 ದಂಡಾ (ಎ) 14 ವಸ್ತುದ (ಎ) 15 ಪಾದಾರ್ಚನ (ಎ) 16 ಮಂ (ಎ)

[1]ಇ[1]ದು ಮಧುಸೂದನಾನುಚರಿತಂ ಕೃತಿಮಾಲ್ಪಿ ಕವೀಶ್ವರರ್ಗೆ ತ
ಕ್ಕುದು ರಸವೃತ್ತಿಯಂ ತಳೆದುದೀಕಥೆಯೆಂದು ಪರಸ್ಪರಾನುವಾ
ದದೆ ಪೊಗಟುತ್ತು[2]ಮೊಲ್ದು[2]ಗಲಲಾಱದೆ ಮತ್ತೆ ಮರುಳ್ದು ಪೊಕ್ಕಳಾ
ಮದನಪತಾಕೆ ಚಿತ್ರಲತೆಗೂಡಿ ಜಿನೇಂದ್ರಸಭಾಂತರಾಳಮಂ ೩೨

ವ॥ [3]ಆ ಸಮಯದೊಳ್[3]

ಅವಧಿಜ್ಞಾನದಿನಿಂದ್ರನೀಶ್ವರನ ಧರ್ಮಶ್ರೀವಿಹಾರಕ್ಕೆ ಸಂ
ಭವಮುಂಟೆಂದಱಿಂದೆಟ್ಟು ಕೈಮುಗಿದಿದಂ ವಿಜ್ಞಾಪನಂಗೆಯ್ದನಿಂ
ದುವರಂ ಕಂದಿದ [4]ಧರ್ಮಮಂ ಬೆಳಗಿ[4] ಧರ್ಮಾದರ್ಶಮಂ ಪುಣ್ಯದಿಂ
ಭವದಾರ್ಹಂತ್ಯವಿಭೂತಿಬಣ್ಣಮಿಡುಗಿಂ ಭವ್ಯಾಬ್ಜನೀಭಾಸ್ಕರಾ ೩೩

ವ॥ ಎಂದು ಪುರಂದರನ ವಿಜ್ಞಾಪನೋಪಚಾರದೊಡನೆ ವೃಂದಾರಕವೃಂದ [5]ಬಾಹಾ[5]ಪರಿಘಪರಿವಾರಿತದೈ[6]ವಿಕಾ[6]ಸ್ಥಾನೀಪ್ರಸ್ಥಾನಭೇರೀಭಾಂಕಾರಂ ಶಂಕಾಕುಳಿತ ದುರಿತಹರಣಂ ಬೀ[7]ರ್ಚೆ ಪೆರ್ಚೆ[7] ಗಗನದಿಶಾಭೂಮಿಭಾಗಮಂ ತಳ್ಪೊಯ್ದು ಮುಪ್ಪುರಿ ಗೂಡಿದಾಗಳ್

ದೆಸೆಗಳ್ದೇವವಿಮಾನಯಾನಮಣಿಘಂಟಾಜ್ಯೋತ್ಸ್ನೆಯಿಂ ತಟ್ಟೆ ಗ
ಟ್ಟಸೆ ರೋಧಃಸ್ಥಳಕೇತನಾತಪನಿವಾರವ್ರಾತದಿಂ ಸೇತುಗ
ಟ್ಟಸೆ ಧಾತ್ರೀನಿಲಯಂ ವಿನೇಯಮನುಜಸ್ರೋತ್ರಂಗಳಿಂ ಮುಚ್ಚಿ ಮು
ದ್ರಿಸೆ ತಾಂ ದಿವ್ಯವಿಹಾರದಿಂದೆ ತಳರ್ದಂ ಲೋಕತ್ರಯೀವಲ್ಲಭಂ ೩೪

ಚರಣನ್ಯಾಸದೊಳಾಂಪರಂಬುಜಮನೇಟಿಂ ದೇವದೇವಂಗೆ ದೇ
ವರಿಳಾಮಂಡಳಮಂ ಮಹಾಬಲಕುಮಾರರ್ ಪ್ರಸ್ತರಸ್ಥಾಣು [8]ಶ[8]
ರ್ಕರಜಾಳಂ ಕಿಡೆ ಶೋಧಿಪರ್ಗಗನಮಂ ಜ್ಯೋತಿಃಕುಮಾರರ್ ಪರಿ
ಸ್ಫುರಿತಾದರ್ಶಮಿದೆಂಬಿನಂ ಬೆಳಗುವರ್ತಂತಮ್ಮ ಸದ್ಭಕ್ತಿಯಿಂ ೩೫

ಇಳೆಯಂ ಚಂದನಕುಂಕುಮಾಂಬುಕಣದಿಂ ಕಮ್ಮೈಸೆ ಮೇಘಾಗಮ
ರ್ತಳವರ್ಸರ್ವದಿಶಾಧಿನಾಥರನಿತುಂ ದಿಕ್ಕಾಮಿನೀವಕ್ತ್ರಮಂ
ಡಳಮಂ ನುಣ್ಣಿಸುವರ್ಸಮಸ್ತಋತುಗಳ್ ತಂತಮ್ಮ ಸೊಂಪಂ ಪುದುಂ
ಗೊಳಿಕುಂ ಸಸ್ಯಸಮೃದ್ಧಿಯಿಂ ಮೆಱೆವುದೋರಂತುರ್ವರಾಮಂಡಲಂ ೩೬

---

1 ಮ (ಅಇಉ) 2 ಮೆಳ್ಪ (ಎ) 3 (ಅಇಉ) ಗಳಲ್ಲಿಲ್ಲ
4 ಕರ್ಮಭೂವಳಯ (ಎ) 5 ಚಾದಾ (ಎ) 6 ವತಾ (ಎ) 7 ರ್ಚೆ (ಎ)
8 ಶಾ (ಅಇಉ)

ಮನದನುರಾಗಮತ್ಯಧಿಕಮಪ್ಪುದು ಸರ್ವಜನಕ್ಕೆ ವೈರಮುಂ
ನೆನೆಯದೆ ಜೀವರಾಶಿ ಕೆಳೆಗೊಳ್ವುದು ಭಾಸುರಧರ್ಮ[1]ಚಕ್ರ[1]ಮು
ರ್ಕನಕಿರಣಕ್ಕೆ ಮಾರ್ಮಲೆವುತಿರ್ಪುದು ಮಂಗಳವಸ್ತುಜಾಲಮುಂ
ತನತನಗಾಂತು ಬರ್ಪುದಮರೀಜನಮಾ ಜಿನರಾಜಯಾತ್ರೆಯೊಳ್ ೩೭

ಅನುಕೂಲಾನಿಳನೊಯ್ಯನೊಯ್ಯನಲೆಗುಂ ದೇವೇಂದ್ರರೋರೊರ್ವರಂ
ದನಿಗೆಯ್ವುರ್ಬರೆವೇ[2]ಟ್ಟು[2] ಕೊಲ್ಲಣಿಗೆಯೊಳ್ ಧಾತ್ರೀಸುಧಾವರ್ಷಣ
ಸ್ತನಿತಂ ದಿವ್ಯನಿನಾದಮೆಣ್ದೆಸೆಯೊಳಂ ಕೈಗಣ್ಮುಗುಂ ತೀರ್ಥನಾ
ಥನನಂತಂಗೆ ಚತುರ್ದಶಾತಿಶಯಮಿಂತೊಪ್ಪಿತ್ತು ದೇವರ್ಕಳಿಂ ೩೮

ಒಡವುಟ್ಟಿರ್ದುವು ಮುನ್ನೆ ಪತ್ತತಿಶಯಂ ಘಾತಿಕ್ಷಯಾನಂತರಂ
[3]ಗೆ[3]ಡೆಗೊಟ್ಟಿರ್ದುವು ಮತ್ತೆ ಪತ್ತತಿಶಯಂ ದೇವರ್ಕಳಿಂ ನಿನ್ನೊಳೀ
ಗೆಡೆಗೊಟ್ಟಿತ್ತು ಚತುರ್ದಶಾತಿಶಯಮಾಮುಂ ದೇವ[4]ರಿಂ[4]ದಾಡುತಿ
ರ್ಪೆಡೆಗಳ್ಗೀತಱಿಯೊಳೀನುಮುಂ ವೆಸಗೊಳಲ್ಕಾಣೆಂ ಜಗದ್ವಲ್ಲಭಾ ೩೯

ವ॥ ಎಂದು ಪರಮಾನಂದಮೆ ರೂಪುಗೊಂಡಂದದಿಂ ಗೊಂದಣಿಸಿ ನಿಂದು ಸಂದಣಿಸಿ

ಪೊಗಟುತ್ತುಂ [5]ನೆಗಟ್ದೀಮಹಾತಿಶಯಮುಂ ಮೂವತ್ತು ನಾಲ್ಕುಂ ಸುತಾ
ಯೆ[5]ಗಳಿಂ ಪಾಡುವ ಗೀತವಾದ್ಯಲಯರೇಖಾರೂಪದೊಳ್ ಗೆಜ್ಜೆ ಪ
ಜ್ಜೆಗೆ ತಾಳಂಗುಡೆ ಮೆಟ್ಟುತುಂ ಕರಣದಿಂ ರೋದೋಂಗಣಪ್ರಾಂತಮುಂ
ಪುಗುತುಂ ಬಂದರನಂತನಾಥನಿದಿರೊಳ್ ಗೀರ್ವಾಣವೈತಾಳಿಕರ್ ೪೦

ಕರಿ ಮೇಷಂ ಮಹಿಷಂ ನೃಮೂರ್ತಿ ಮಕರಂ ಸಾರಂಗಮಶ್ವಂ ವೃಷಂ
ತರೆ ಪಿಂತುಚ್ಚಳಿತಾಸ್ತ್ರಶಸ್ತ್ರಪರಿವಾರಂ ವಾರನಾರೀಜನಂ
ಬರೆ ಮುಂತಂ ಪೊಡೆವಟ್ಟ ಕೈ ಪೊಗಟ್ವ ಬಾಯ್ ಚೆಲ್ವಾಗೆ ತಂತಮ್ಮ ದಿ
ಗ್ಧರೆಯೊಳ್ತಪ್ಪದೆ ಸುತ್ತಲುಂ ನಡೆದು ಬಂದರ್ದಿಗ್ವಿದಿಕ್ಪಾಲಕರ್ ೪೧

ವ॥ ಮತ್ತಂ

ತ್ರಿದಶಾಧೀಶ್ವರರಂಗರಕ್ಷಪದವೀಸನ್ನದ್ಧರುತ್ಖಾತ ಖ
ಟ್ಟಗ[6]ಘ[6]ರಂ ತಚ್ಛವಿ ಭೂಷಣಚ್ಛವಿಗಳೊಳ್ತಳ್ಪೊಯ್ಯೆ ಬರ್ಪಲ್ಲಿ ಚೆ
ಲ್ಲಿದ ನಾನಾಮಣಿಪುಂಜದೊ[7]ಳ್ತ[7]ಳೆದು ಮುತ್ತಂ ಪೂಸಿದಂತಾಗೆ ಕಾ
ಯದಮೋಯಪ್ರಭೆ ಬಂ[8]ದರೊಂದೆಡೆಗಣಾಂ[8] ಜ್ಯೋತಿಷ್ಕದೇವಾಧಿಪರ್ ೪೨

---

1 ವಭ್ರ (ಎ) 2 ಟ್ಟು (ಎ) 3 ಎ (ಎ) 4 ರಂ (ಎ) 5 ಚತುರುತ್ತರ ತ್ರಿದಶಮುಂ ದೇವಪ್ರಭಾವಾತಿಶಾಯಿ (ಎ) 6 ದು (ಅಇಉ) 7 ಳ್ಪೊ (ಅ)
8 ದು ಮುಂದೆಗಡಣ (ಅಇಉ)

ವ॥ ಆ ಪರಮ[1]ಪಾವನ[1]ಪ್ರಯಾಣಪ್ರಭಾವದೊಳ್

[2]ನ[2]ಡೆಯಲ್ವೇಱಿಂದ್ರರಂ ಪಿಂದುಱಿ[3]ಯದೆ ಬರವೇೞ್ಕೊಡೆ ದಿಕ್ಪಾಲರಂ ತಂ
ದಿಡವೇೞಿಬ್ ಹೇಮಾಬ್ಜಮಂ ಶ್ರೀಪದದೆಡಗುೞಿದಿಂದ್ರರ್ಕಳಂ ಹೋವುಫೇ ಮಾಣ್
ನುಡಿಯಲ್ವೇಡಾಲಿಸಿಂ ಶ್ರೀವಚನಮನೆ ಗಣಶ್ರೇಣಿಯಂ ಕೂಡಿದತ್ತಿಂ
ಪಡೆವಳ್ಳಸೂರ್ಱಟ್ಟಿಗ್ವಂದರ್ಸಭೆಗೆ ಚಮರವ್ಯೈರೋಚನರ್ಚಾಮರೇಂದ್ರರ್ ೪೩

ಗಣನಾಥರ್ಜಯಮುಖ್ಯರರ್ಧಶತಕಂ ಪೂರ್ವಾಂಗಮಂ ತಾಳ್ದಿದ
ಗ್ರಣಿಗಳ್ನಾಸಿರಮಲ್ಲಿ ಕೇವಳಿಗಳ್ಪೈಸಾಸಿರ್ವರೆಣ್ಬಾಸಿರಂ
ಗಣದೊಳ್ಕ್ಕೋಱಿ[3]ಳ್ಪಡೆ ವಿಕ್ರಿಯರ್ಧಿಯುತರ್ಪೈಸಾಸಿರ್ವರಂತಾ ಚತುಃ
ಪ್ರಣುತಜ್ಞಾನಿಗಳಾ ಸಭಾವಳಯದೊಳ್ ಲಕ್ಷದ್ವ[3]ಯಿ[3]ವಾದಿಗಳ್ ೪೪

ವರಬೋಧತ್ರಿತಯ[4]ರ್ನಖಾ[4]ಗ್ನಿಗತಿಸಂಖ್ಯರ್ ಮೂವತೊಂಬತ್ತು ಸಾ
ಸಿರದ್ವೈನೂರ್ವರೆ ಶಿಕ್ಷಕರ್ನೆಗಟ್ದಿ ಸರ್ವಶ್ರೀಮುಖಾರ್ಯಾಳಿ ಸಾ
ಸಿರಮೆಂಟುಂಬೆರಸೊಂದುಲಕ್ಕೆಯೆರಡುಂ ಲಕ್ಕಂಗಳಾ ಶ್ರಾವಕರ್
ಪರಮಶ್ರಾವಕಿಯರ್ ಚತುಃಪ್ರಮಿತಲಕ್ಷಂ ದೇವನಾಸ್ಥಾನದೊಳ್ ೪೫

ಸಂಖ್ಯಾತತಿರ್ಯಗಾದಿಯ
ಸಂಖ್ಯಾತಂ ದೇವದೇವಿಯರ ಕೋಷ್ಠದೊಳಿ
ಲ್ಲಂ ಖ್ಯಾತಂ ದ್ವಾದಶಗಣ
ಸಂಖ್ಯಾನಮಿದಿನಿತುವೆರಸು ಧರ್ಮವಿಹಾರಂ ೪೬

ಹರಿನೀಳೋಪಳಬದ್ಧಸಿದ್ಧಸಭೆ ಜೀಮೂತೋತ್ಕರಂ ಬೋಧ[5]ಸಾ
ಗ[5]ರದೇಹಪ್ರಭೆಯುಂ ಪ್ರಭಾವಳಯಮುಂ ವಿದ್ಯುಚ್ಛಳಸ್ಫೂರ್ಜ[6]ದು[6]
ಸ್ಫುರಿತಂ ದಿವ್ಯನಿನಾದಮಾಗುಭಯವರ್ಷಂಗುಂದೆ ಸಪ್ತಾರ್ಥವ
ತ್ಸರಲಕ್ಷಂ ಕಱೆದಂ ಜಗದ್ಗುರು ಲಸದ್ಧರ್ಮಾಮೃತಾಸಾರಮಂ ೪೭

ವ॥ ಅಂತು ನಿರ್ಮೇಘಂ ಸುರಿವಮೋಘದಿವ್ಯವಚನ[7]ವ[7]ರ್ಷಾಗಮದೊಳ್ ಕುಮತವಾದಿವನಕೃಷ್ಣವರ್ತ್ಮಂ ಕುಂದಿ ನಂದೆಯುಂ ಪಂಡಿತಮಾನಮನಸ್ಸಂಶಯಮರುಮರೀಚಿಕೆ ಸುರುಳ್ದು ಪರಿಯೆಯುಂ ಕುಮಾರ್ಗೋಪದೇಶಕಮರಾಳಜಾಳಂ ಪಟ್ಟನೆ ಪಾಱಿಯುಂ ಮಿಥ್ಯಾವಾದಿಪೇಟಕರ್ ದಂತಿಸಂತಾನದಂತೆ ಮುರುಂಟಿಯುಮಭವ್ಯಜನಮನಃಪದರಜಃಪಟಳಂ ತೆಮಳ್ದಿ ಪರಿದಡಂಗೆಯುಂ ದುಷ್ಪರಿಣಾಮಜನಹೃದಯವಿದಾರಿಕಾದ್ರೋಣಿಕೆ

---

1 ತಪೋವನ (ಆಇಉ) 2 ತ (ಎ) 3 ಯಂ (ಎ) 4 ನಗ (ಆಇಉ) ಖದಾ (ಎ) 5 ಬಂಧು (ಎ) 6 ಯ (ಎ) 7 ಸಸ್ಯವ (ಎ)

ಗಳ್ ಮುಚ್ಚಿ ಮುಸುಂಕೆಯುಂ ವಿನೇಯಜನಚೇತಶ್ಚಾತಕಂ ತಣಿದು ಕುಣಿಯಲ್ ಪಾಱೆಯುಂ ಅಗಣ್ಯಪುಣ್ಯ ತರಂಗಿಣಿಗಳ್ ಕರೆಗಣ್ಮಿ ಪರಿಯೆಯುಂ ದಯಾರಸನೀರತಟಾಕಂ ತೀವಿ ತುಳುಂಕಿ ಕೋಡಿ ಮರಳೆಯುಂ ದಾನತೀರ್ಥಸರೋವರಂಗಳಬೞಬಳಿವೋಗೆಯುಂ ಸಮ್ಯಗಾಚಾರಚಾರು[1]ಪರಂ[1]ಗಳ್ಕಡಲ್ಗಟ್ಟೆಯುಂ ಪೊದಳ್ಕೆವಡೆದ ಸದ್ಧರ್ಮಪೀಯೂಷಮಹಾಪ್ರವಾಹಂ ವಂಗಮಂಡಲದೊಳ್ ತರಂಗಂಗೊಂಡು ಕಳಿಂಗಮಂಡಲದೊಳ್ ಮಡುಗಟ್ಟಿ ನಿಂದು ಮಹಾರಾಷ್ಟ್ರಮಂಡಳದೊಳಟ್ಟುಂಬರೆವರಿದು ಮಳಯಮಂಡಳದೊಳ್ ವೇಳೆಗೊಂಡು ನೆಲಸಿ ಗುಜ್ಜರಮಂಡಳದೊಳೊಜ್ಜರಂ ಬರಿದು ಮರುಮಂಡಳದೊಳ್ ಪರೆಪುವಡೆದು ದನುಜಮನುಜತಿರ್ಯಕ್ಸಮಾಜಮಂ ಸುಕೃತಭಾಜನಂ ಮಾಡಿ ಪೆರ್ಮೆಗಾಶೀರ್ಮಮಾದುದು

ಆ ದುರಿತೇಭಸಿಂಹನ ಸಭಾವಳಯಂ ಬೞಕೆಯ್ದಿ ಪತ್ತು ಸ
ಮ್ಮೇದಮನಾದಿರಾಜ ಸಗರಾದಿ ವಿನಿರ್ಮಿತ ಚೈತ್ಯಮಾಳಿಕಾ
ಪಾದಮನಾತ್ತವಿಂಶತಿಜಿನೇಂದ್ರಸಮಾಧಿವಿಧಾನಸೌಖ್ಯ ಸ
ಮ್ಮೋದದಿನಿರ್ದ ಸಿದ್ಧಪದವೀಜಗತೀ ಪ್ರತಿಬದ್ಧಭೇದಮಂ ೪೮

ನೆಲೆ ಕಾಲ್ಗೊಳ್ಳವಘಾತಿಸಂಕುಲರಥಾಂಗಂ ಪೋಯ್ತು ಮುಂ ಘಾತಿಕ
ಟ್ಟಲೆ ಭವ್ಯಾಕ್ಷಿಕರೋತ್ಪಳಾಬ್ಜವರಲ್ದಂ ಸಂಕೋಚವಾಗುತ್ತಿರ
ಲ್ಕೆಲೆಗೊಂಡೊಪ್ಪಿರೆ ಶಾಂತದಿವ್ಯಪರಿಷಜ್ಜ್ಯೋತಿಸ್ತವಾಡಂಬರಂ
ನಿಲೆ ನಿಂದಂ ಜಿನಚಂದ್ರಭಾನುಪರಮಂ ಸಮ್ಮೇದಶೈಲಾಗ್ರದೊಳ್ ೪೯

ವ|| ಆ ಧರಾಧರದ ದಿವ್ಯಕಸ್ಥಳದನೇಕಾನೋಕಹಚ್ಛಾಯಾಚ್ಛನ್ನಪಾವನಪ್ರದೇಶದೊಳ್ ಪರಿದು ಪರ್ವಿದ ಶುದ್ಧಸ್ಫಟಿಕ ಶಿಲಾಪಟ್ಟದಲ್ಲಿ

ಮೇಗಣ ನಿಶ್ಶ್ರೇಯಸಲ
ಕ್ಷ್ಮೀಗಾಢಾಲಿಂಗನಕ್ಕತಿತ್ವರಿತಮನು
ದ್ಯೋಗಿಸಿದದೊಮ್ಮೆ ಪ್ರತಿಮಾ
ಯೋಗದೆ ನಿಂದನೊ ಮುನೀಂದ್ರವೃಂದಾರಾಧ್ಯಂ ೫೦

ಪರಮಜ್ಞಾನ ನಿಧಾನದೀಶ್ವರನೊಳಾಯುರ್ನಾಮಗೋತ್ರಂಗಳಂ
ಸರಿಕಂಡಿರ್ದ ಮಹಾನುಭಾವರಿರೆ ಕಾಯೋತ್ಸರ್ಗದಿಂದಾಱುಸಾ
ಸಿರದೈನೂರ್ವರಪಾಸ್ತಕರ್ಮರನಿತುಂ ಗೋತ್ರಾದ್ರಿ ಸುತ್ತಿರ್ದ ಮಂ
ದರದಂತಿರ್ದನನಂತನಾಥನಚಲಂ ಕಲ್ಯಾಣಭಾಭಾಸುರಂ ೫೧

---

1 ಪ್ಲವಂ (ಎ)

ವ|| ಅಂತು ಪೂರ್ವಾಭಿಮುಖನಾಗಿ ನಿಂದು ನೆಲಸಿದ ಸಮಾಧಿನಿಷ್ಠೆಯೊಳ್ ಪ್ರಥಮ ಸೂಕ್ಷ್ಮಕ್ರಿಯಾಪ್ರತಿಪಾದಿತಮಪ್ಪ ಶುಕ್ಲಧ್ಯಾನಮನಪ್ಪುಕೆಯ್ದು ಕರ್ಮಲಾಘವ ಪರಿಪಾಚನಶಕ್ತಿಯಿಂ ಪರಮೌದಾರಿಕದೇಹತ್ರಿಗುಣಬಾಹುಲ್ಯದಿನಂತರ್ಮುಹೂರ್ತದೊಳ್ ವಿಶ್ವವಿಷ್ಟಪವಿಸ್ತಾರಿತದಂಡಕವಾಟಪ್ರತರಪೂರಣಮೆಂಬ ಸಮುದ್ಭೂತಚತುಷ್ಟಯಮನನುಕ್ರಮದಿನೆಯ್ದಿಸಿ ತತ್ತ್ರದುಪಸಂಹೃತಿವ್ಯತ್ಕ್ರಮದಿಂ ಪೂರ್ವಶರೀರಪ್ರಮಾಣದೊಳ್ ನೆಲಸಿ ಬೞಿಯಮುೞಿದಘಾತಿಗಳಂ ಸ್ಥಿತಿಕರ್ಮಕ್ಕೆ ಸಕ್ಕಸರಿಮಾಡಿ ಗುಪ್ತಮನೋವಾಕ್ಕಾಯಯೋಗದಿನಯೋಗಿಕೇವಳಿಗುಣಸ್ಥಾನಮನಳಂಕರಿಸಿ ತೃತೀಯಶುಕ್ಲಧ್ಯಾನ[1]ದಿಂ[1] ಸೂಕ್ಷ್ಮಕಾಯಸ್ಥಿತಿಯೊಳ್ ಶೀಲಗುಣಸಮಾನಸಂಪೂರ್ಣಮಾಗೆ ಸಂರುದ್ಧಸಕಲಾಸ್ರವಂ ಲಘನೋಚ್ಚಾರಿತ ಪಂಚಾಕ್ಷರಮಾತ್ರದೊಳ್ ಸಮುಚ್ಛಿನ್ನಪ್ರಾಣಾಪಾನಸಮೀರಣಪ್ರಚಾರನಾಗಿ ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಪರಮಶುಕ್ಲಧ್ಯಾನದೊಳ್ ನಿಂದು ನಿಜೋಪಾಂತಸಮಯದೊಳ್

ಜನತಾಭ್ಯಂತರವೇದನೀಯವಶದಿಂ ಗತ್ಯಂತರಕ್ಕೈದು ಸಂ
ಹನನಸ್ಥಾನನಿಬಂಧ ವರ್ಣರಸಗಂಧಸ್ಪರ್ಶನಾಮಂಗಳಿಂ
ಬಿನಮೆಪ್ಪತ್ತೆರಡೆಂಬ ತತ್ಪ್ರಕೃತಿಯಿಂ ಬೇಱಿರ್ದು ವಾಕ್ಯಾರ್ಥದಿಂ
ಧ್ವನಿಬೇಱಿರ್ದೆಸೆವಂತದೇನೆಸೆದನೋ ಕಾಲಾಂತಕಾನಂತಕಂ ೫೨

ವ|| ಅನಂತರಮನಂತನಾಥಂ ಚರಮಸಮಯದೊ[2]ಳಾಭ್ಯಂ[2]ತರವೇದನೀಯಮನುಷ್ಯಗತಿ ಪಂಚೇಂದ್ರಿಯಜಾತ್ಯಾನುಪೂರ್ವಿಬಾದರಪರ್ಯಾಪ್ತಕಶುಭಗಾದೇಯಯಶಃಕೀರ್ತಿರುಚ್ಚೈರ್ಗೋತ್ರತೀರ್ಥಕರಾಖ್ಯಾನಮೆಂಬಿವಾದಿಯಾಗಿ

ಪದಿಮೂಱುಂ ಪ್ರಕೃತಿಪ್ರಪಂಚಮನವಂ ಪಿಂತಿಕ್ಕಿ ಮುಂತಾಂತು ಸಾ
ರ್ಚಿದ ಸಿದ್ಧಾಷ್ಟಗುಣಂಗಳಂ ತನಗು[3]ಹಸ್ತಾ[3]ಲಂಬನಂ ಮಾಡಿ ಚೈ
ತ್ರದಮಾವಾಸ್ಯೆಯ ಮುನ್ನಿರುಳ್ಗೆ ಚರಮರ್ಕ್ಷಂ ಕೂಡೆ ನಿರ್ದ್ವಂದ್ವಸಂ
ಪದದೊಳ್ನಿರ್ವೃತಿಭೂಮಿಯೊಳ್ನೆಲಸಿದಂ 'ನಿರ್ವಾಣಲಕ್ಷ್ಮೀ[4]ವರಂ[4] ೫೩

ಎನಿತೊಂದಂಗಿಗಳಂಗಸೌಖ್ಯಶತಮೊಂದೇಕಕ್ಷಣಕ್ಕಿಲ್ಲ ನಾ
ಕನಿವಾಸಕ್ಕವರೊಳ್ಪೊದಳ್ದ ಸುಖಸಂದೋಹಂ ಮಿಷಕ್ಕಿಲ್ಲಮಿ
ಲ್ಲನಿಮೇಷಾಧಿಪರ್ಗಿಂದ್ರಸೌಖ್ಯಮುಹಮಿಂದ್ರರ್ಗಾವಲೆಕ್ಕಕ್ಕಮಿ
ಲ್ಲಿನಿತುಂ ಸಿದ್ಧರನಿತ್ಯಸೌಖ್ಯದೊರೆಗೆಲ್ಲಾ ಸಿದ್ಧನಾದಂ ಜಿನಂ ೫೪

ವ|| ಆ ಸಿದ್ಧಕ್ಷೇತ್ರಮೆಂತುಟೆಂದೊಡೆ

---

1 ದಿನ (ಅಇಉ) 2 ಳನ್ಯ (ಎ) 3 ಪಾಸ್ಥಾ (ಅಇಉ) 4 ರಮಂ (ಎ)

ಅದು ಸಮವೃತ್ತಮಾದತಿನಿಯೋಜನಲೆಕ್ಕದ ನಾಲ್ವತ್ತೈದು ಲ
ಕ್ಕದ ಪರಿಷಷ್ಟಿಯೋಜನದೊಳಂ ಕ್ರಮತುಂಗಿಯುಮಿಂದ್ರಕಾಂತಪ
ಟ್ಟದ ನೆಲೆ ವಿಷ್ಟಪಾಧಿಪನ[1]ಮೂರ್ತಿ [ಯ] ನೇವುರದಂತೆ ಚೆಲ್ವುವೆ[1]
ತ್ತುದು ಪವನತ್ರಯೋದರದೊಳಿರ್ದೊಡೆ ಶುದ್ಧ ಸುಸಿದ್ಧಭೂತಳಂ ೫೫

ಪರಮಪವಿತ್ರಂ ಶಾಶ್ವತ
ಮರುಜಮ[2]ನಿಂ[2]ದ್ರಿಯಮ[3]ನಿಂದ್ಯ[3]ಮಕ್ಷಯಮಜರಂ
ನಿರುಪದ್ರವ[4]ಮದ[4]ಚಲಮ
ಸ್ವರಮಪುನರ್ಭವಮನಂತಮಮೃತನಿವಾಸಂ ೫೬

ನಿರವಯ[5]ವ[5]ನಲ್ಲಿ ಪರಮಂ
ಚರಮಶರೀರಂ ಪ್ರಮಾಣಮೇನಾನುಂಗುಂ
ದಿರೆ ಜೀವಘನೀಭೂತಂ
ನಿರುಪಮನಿಜರೂಪನಿತ್ಯಸುಖಮಯನಾದಂ ೫೭

ಸನ್ನಿದಮೆನೆ ತಾಂ ತನ್ನಂ
ತನ್ನಿಂದಂ ಕಂಡು ತನಗೆ ತನ್ನತ್ತಣಿನೇಂ
ತನ್ನ ಗುಣಂಗಳ್ ನೆಱೆದಿರೆ
ತನ್ನೊಳೆ ನಿಂದನೊ ವಿನೇಯಜನಮುಖತಿಲಕಂ ೫೮

ವ|| ಆಗಳಾ ಪರಮೇಶ್ವರನ ಪರಿನಿರ್ವಾಣಕಲ್ಯಾಣ ಸಮಭ್ಯರ್ಚನೋತ್ಸುಕ ಚಿತ್ತನಾಗಿ

ಅನಿತುಂ ಸಮ್ಮೇದಶೈಲಂ ಸೊಡರ್ಗಲರ್ಗೆ ಫಲಂಗಳ್ಗೆ ಮುಕ್ತಾಕ್ಷ[6]ತಂ[6]ಗ
ಳ್ಗೆ ನಿತಿಲ್ಲಿಲ್ಲೆಂಬಿನಂ ಮಂಗಳಯುವತಿಯರುಂ ಮಂಗಳದ್ರವ್ಯದಿವ್ಯಾ
ರ್ಚನಮಂ ಮಾಂಗಲ್ಯಸಂಗೀತಕಮುಮೆಸೆವಿನಂ ಭಕ್ತಿಯಿಂ ಭಾವನೇಂದ್ರ
ರ್ದನುಜೇಂದ್ರಜ್ಯೋತಿರಿಂದ್ರಪ್ರಭೃತಿಗತಪೃತನರ್ಬಂದರಾ ಕಲ್ಪಜೇಂದ್ರರ್ ೫೯

ಮದನನ ಮಂತ್ರದೇವತೆಯ[7]ರೊ[7]ಡ್ಡಣಮೊಡ್ಡಿದುದೆಂಬ ವಡ್ಡೆಯಿಂ
ಕೆದಱುವ ಸೌಸವಂ ತಳಿವ ಲಾಜೆ ತೊಡರ್ಚುವ ತೋರಣಂಗಳೆ
ತ್ತಿದ ಗುಡಿ ಪೊತ್ತ ಕನ್ನಡಿ ನೆಗಪ್ಪಿದ ಪೊಂಗಳಸಂಗಳೊಪ್ಪೆ ಬಂ
ದುದು ಸುರಸೌಂದರೀನಿವಹಮಾ ದಿವಿಜಾಧಿಪರಿಕ್ಕೆಲಂಗಳೊಳ್ ೬೦

1 ನೇವುರದಂತೆ.... ಚೆಲ್ವುವೆ (ಅಇಉ) ನಮೂರ್ತಿವನೆತ್ತಿಪುರವನದಂತೆ (ಎ)
2 ತೀಂ (ಎ) 3 ರುದ್ರ (ಅಇಉ) 4 ಮ(ಎ) 5 ಮ (ಅಇಉ)
6 ತೆ (ಅಇಉ) (ಎ) ಯಲ್ಲಿ ಲುಪ್ತ 7 ರ (ಅಇಉ)

ಪಳುಕಿನ ಕಳಶಂ ಗಂಗಾ
ಜಳಭರಿತಂ ಮೊಲೆಯ ಮೇಲ್ಗೆ ಎಂದುಂ ಕೀಱಿ
ಗಿಱಿಸಿದಳೊರ್ವಳ್ವಿಧುಮಂ
ಡಳವುಂ ತಳ್ತಿಱಿದು ಚಪಲಚಪಲಾಲ[1]ಕೆಯಿಂ[1] ೬೧

ಕುರುಳ ನೆಟಿಲ್ಪ್ರತಿಬಿಂಬಿಸೆ
ಸಿರಿಖಂಡದೊಳಮರಿ ಬೆದಱಿ ಮತ್ತೊರ್ವಳ್ಕ
ಸ್ತುರಿ ಜಿನರ ಪೂಜೆ[2]ಗೊಂಡೆಂ
ದರೆಬರೊಳಾರಯ್ದು[2] ನಗಿಸಿದಳ್ಕೆಳದಿಯರಂ ೬೨

ಓಲಗಿಸಲ್ನೆರೆದುವು ತಾ
ರಾಳಿಗಳೀವಧುವಿನಾಸ್ಯವಿಧುಬಿಂಬಮನೆಂ
ದಾಳೋಕಿಸೆ ನೀಱಿಸ್ಫುರ
ಬಾಳಕಿ ಬಿಡುಮುತ್ತಿನಕ್ಕಿಯಂ ತಳೆದಿರ್ದಳ್ ೬೩

ಸೂಳುಂ ಕುಡೆ ದೋರ್ಮಾಲೆಗೆ
ಕೀಲಿಸಿದ ನಮೇರುಮಾಲೆ ಸುರತರುಣಿಯುದೇ
ನಾಳಂಗೊಂಡಳೊ ಬಯಲೊ
ಳ್ಬೀಱಲ್ವರಿದಂಗಭವನ ಜಂಗಮಲತೆಯಂ ೬೪

ಚರುಭಾಂಡಮನಿಂದುಮಣಿ
ಸ್ಫುರಿತಮನೆತ್ತಿದ ಸುರೇಂದ್ರಸೌಂದರಿಯೊರ್ವಳ್
ಪರಿವೇಷ್ಟಿಸಿದವೊಲೆಸೆದ
ಳ್ಸ್ಮರ ಕಾರ್ಮುಕಲಕ್ಷ್ಮೀಶರದಡಕಿಲ್ಮುಗಿಲಂ ೬೫

ಮಗಮಗಿಸುವಗರು ಧೂಪದ
ಪೊಗೆಯ ಕವಲ್ವಳ್ಳಿಯೆಂದು ಮಿಳ್ಳಿಸುವಳಿಮಾ
ಲೆಗಳಂ [3]ಸೋವದೆ[3] ಮುಚ್ಚಲ್
ಬಗೆದೆತ್ತಿದಳೊರ್ವಳಮರಿ ಕರಪಲ್ಲವಮಂ ೬೬

---

1 ಕೆಯಂ (ಅಇಉಎ) 2 ಗೆ ತಂದರೆಂಬರೊಳಾಯ್ತು (ಎ)
3 ಸಾಯವ (ಎ)

ತೊಳಗುವ ತೋರಮುತ್ತುಗಳ ಪುಂಜನೊ ನೀಲದ ಪುಂಜ[1]ವೋ ಇ[1]ವಾ
ಮಳಕಫಲಂಗಳಲ್ಲಮಿವು ಜಂಬುಫಳಾವಳಿಯಲ್ಲಮೆಂಬಿನಂ
ತಳೆದು ಸರೋಜರಾಗಮಣಿದೀಪಕಳಾಪಮನಾಂತು ಬರ್ಪ ಕೋ
ಮಳೆಯರ ಸರ್ವರತ್ನನಿಧಿಲಕ್ಷ್ಮಿಯಿವೆಂಬಿನವೊಪ್ಪೆ ತೋಱಿದಳ್ ೬೭

ವ॥ ಅಂತು ವಿಯತ್ತಳದಿಂದಿೞಿದು ಇಳಾಮಂಡಳಕ್ಕವತರಿಸಿ

ಇಳೆಯಂ ವ್ಯೋಮಮುಮಂ ತಡಂಗಲಿಸಿ ದಿಕ್ಚಕ್ರಕ್ಕೆ ನಿಂದಿಕ್ಕೆ ಮಂ
ಗಳತೂರ್ಯಧ್ವನಿ ಭೂಷಣಧ್ವನಿಗಳಿಂದಿಂದ್ರಾದಿಜ್ಯೋತಿಷ್ಕರಾ
ವಳಿಗಳ್ಮೊವಳಸಾಗಿ ಸುತ್ತಿ ಸುೞಿದೇ[2]ೞು[2]ತ್ತಿರ್ಪ ಮೇಲ್ವಾಸದಾ
ಬಳಿಸಮ್ಮೇದಮನೇಱಿ ಮೂಮೆ ಬಲಗೊಂಡುತ್ತುಂಗಶೃಂಗಾಗ್ರದೊಳ್ ೬೮

ವ॥ ಅನಂತಗುಣನಿಳಯನನಂತನಾಥನಂ ತೀರ್ಥವಲ್ಲಭನನಾಲಿಂಗಿಸಿದ ನಿಃಶ್ರೇಯಸಶ್ರೀಯ ಸಿರಿಮಂಚದ ಕೆಳಗೆ ಪೊಳೆವ ಪೞವಾವುಗೆಯಂತೆ ಪಳಚ್ಚನಾದಚ್ಚವಳುಕಿನ ಸಮಾಧಿಶಿಲಾಪಟ್ಟಕಮುಮಿಂದ್ರಸಮಾಜಮುಮಿಂದ್ರಾಣಿಗಣಮುಂ ಕೊಟೀರಕೋಟಿ [3]ಮಣಿಮರೀಚಿಗಳ[3] ತುಂಬಿಗುರುಳ್ಗಳೊಳ್ ನಿಲುಂಬಿ ಮೆರೆವ ಚಿನ್ನ ಪೂದುಱುಗಲ ರನ್ನ ಕೆನ್ನ ಕೆಂಪುಗಳ ಬೆರಕೆವೆಳಗು ವಾಸವಶರಾಸನದ ಬಾಸಣಿಗೆಯಿಕ್ಕೆನಿಂದು

ಕರಗಿದುದಾತ್ಮಮೋಚನದ ಬೆಂಬೞಿಯೊಳ್ ತನು ಶುಕ್ಲಲೇಶ್ಯಕಂ
ಪರಮಪವಿತ್ರ[4]ಮಾಗಿ ಬೞಿಕ್ಕೆ ನಖಾಳಕಶೇಷ ಖಜಾಳ[4]ಮಾಯ್ತು ಕ
ರ್ಪುರಮುರಿದಳ್ಕಿದಲ್ಲಿ ಕರಿಕೆರ್ದಪುದೇ ಸಹಜಪ್ರಕಾಶಮಂ
ತರಿಸಲೊಡಂ ವಿಬೋಧಮಯಮೆಂತುಟಿದಪ್ಪುದೊಡಲ್ಜಿನೇಂದ್ರನಾ ೬೯

ವ॥ ಎಂದು ಪರಿನಿರ್ವಾಣ ಕಲ್ಯಾಣಪ್ರದೇಶಮೆ ಸಮಸ್ತಮಂಗಳವಸ್ತು ವಿಸ್ತೀರ್ಣಮಾಗೆ ಸವಿಸ್ತರಮಾರಾಧಿಸಿ ಸಮನಂತರಂ ಸಮಾನಸಮಾಧಿಸಂಗತ ಪ್ರಗತಕೇವಳಿನಿಚಯಚೇತಕಳಸಕಂಗಳೊಳ್ ನವರತ್ನರಚಿತಪ್ರಕೃತಿ ಪ್ರದಾನಮಂ ಬೇಱಿವೇಱಿ ನಿಱಿಸಿ ದೇವೇಂದ್ರವೃಂದಮನಿತುಮಾನಂದರಸದೋಕುಳಿಯಾಡೆ ಸೌಧರ್ಮೇಂದ್ರಂ ನಿಟಿಲತಟಘಟಿತಕರಕಮಲಕುಟ್ಮಳನುಂ ಜಯಜಯೋಚ್ಚಾರಿತ ಮುಖರಿವಮುಖಮಂಡಳನುಮಾಗಿ

ಮದನನನಿಕ್ಕಿ ಗೆಲ್ದ ಪರಿನಿಷ್ಕ್ರಮಣಾಯತಿ ತಳ್ತ ಘಾತಿಯಂ
ಬೆದಱಿ ಸುಬೋಧಮಂ ಬೆಳಗಿದುನ್ನತಿ ಲೋಕಮನುಯ್ದುರುಂಡು ತೇ
ಗಿದ ಜವನಂ ಜವಂಗೆಡಿಸಿ ನಿತ್ಯನಿವಾಸಮನಾಳ್ದ ಶಕ್ತಿಯೊ
ಪ್ಪಿದುದೆಲೆ ದೇವದೇವ ನಿನಗಿಂ ನಿನಗೀವುದದೇಂ ಜಿನೇಶ್ವರಾ ೭೦

---

1 ಮೊಪೊಯ್ವ (ಅಉ) 2 ಱು (ಅಉ) 3 ಪ್ರಭೆಗಳ (ಅಉ)
4 ಮಂಕಬಳಕೆನ....ಬಾಳ (ಅಇಉ) ಮಾಮುಗ್ಗಿ........(ಎ)

ವ॥ ಎಂದು ಕೀರ್ತಿಸಿಯುಮರ್ಚಿಸಿಯುಂಪೂಜಿಸಿಯುಂ ನೋಡಿಯುಂ ತಣಿಯದೆ

ಕ್ಷೋಣಿಯಂ ಷಯದೇೞ್ಗಿ ಬಳ್ವಳ ಬಳ್ಕಿಸುತ್ತಿರೆ ಮಿಕ್ಕ ದಿ
ಕ್ಕೋಣಮಂ ಕಡವಾಗಿಸುತ್ತಿರೆ ಹಸ್ತಚಾಪಳನಭ್ರಮಂ
ವೀಣೆ ವಾಮಭುಜಾಗ್ರಲಂಬಿತನಂಕಿಸುತ್ತಿರೆ ನಿಂದು ನಿ
ರ್ವಾಣನೃತ್ಯಮನಾಡಿದಂ ಸುರನಾಯಕಂ ವೃತನಾಯಕಂ ೭೧

ಖಳಕರ್ಮಾಷ್ಟಕಷ್ಟಬಾಧೆಗಿದು ಲಕ್ಷಾಲಕ್ಷಮೆಂದಾ ಸಮು
ಜ್ಜ್ವಳಿತ ಸ್ತೋತ್ರಸಕಲಾಪರಕ್ಷೆಗಳನೆಲ್ಲಂ ಕೊಂಡು ಬೊಟ್ಟಿಟ್ಟು ಮಂ
ಗಳಸಂಗೀತಕಮುಂ ನೆಗೞ್ಚಿ ದಿವಿಜೇಂದ್ರರ್ಪೋದರ್ ಕುತೂ
ಹಳಿತಸ್ವಾಂತನನಂತರಂ ನೆಲೆಗೆ ಪೌಳೋಮೀಮನೋವಲ್ಲಭಂ ೭೨

ಪರಿನಿರ್ವಾಣನಿವಾಸಲಕ್ಷ್ಮಿಯ ವಿವಾಹೋತ್ಸಾಹಮಂ ತಾಳ್ದಿದೀ
ಶ್ವರನಕ್ಷಯನಜೇಯನನಂತರಹಿತಂ ತಾನಿರ್ದನಂತಂ ನಿರಂ
ತರಮೊಲ್ದೀಗೆ ವಿನೇಯಸಂತತಿಗೆ ಸಮ್ಯಗ್ದರ್ಶನಜ್ಞಾನಸ
ಚ್ಚರಿತಶ್ರೀಯಮನುತ್ತರೋತ್ತರಸುಖಶ್ರೀಯಂ ಜ[1]ಗಚ್ಛ್ರೀಯ[1]ಮಂ ೭೩

ಸುರವೃಂದಾರಕವೃಂದನಂ[2]ತು[2] ಜಿನಪಶ್ರೀಪಂಚಕಲ್ಯಾಣಭಾ
ಸ್ಕರಪೂಜಾವಿಧಿಯಂ ನೆಗೞ್ಚಿ ಬೞಯಂ ವಾಕ್ಪೂಜೆಯಂ ಮತ್ತೆ ಬಿ
ತ್ತರಿಸಲ್ ತಾಂ ಕವಿಭಾಳಲೋಚನ[3]ನ[3]ಶೇಷಾಖ್ಯಾನದಿಂ ತಿರ್ದಿದಂ
ಬರೆದಂ ಶ್ರೀಮದನಂತನಾಥಕೃತಿಯಂ ಲೋಕಂ ಗುಣಂಗೊಳ್ವಿನಂ ೭೪

ಕ್ರಮದಿಂ ಕಾಶ್ಯಪಗೋತ್ರದಿಂ ಜನಿಯಿಸಂದಾಷಾಢಮುಂ ಕೃಷ್ಣಪ
ಕ್ಷಮುಮಾ ರೇವತಿಯುಂ ಜನಾರ್ದನಕವೀಂದ್ರಂಗಂ ಜಿನೇಂದ್ರಂಗಮಿ
ದಮದೊಂದಾದುದು ಮುಂತೆ ಕೂಡುವುದ[4]ನುಂ[4]ತುಂ [5]ಪೇೞದೆ[5] ಸ್ಪಷ್ಟಮ
ಷ್ಟಮಲೋಕಾ[6]ಧಿನಿ[6]ವಾಸನೃತ್ಯಪದವೀ [7]ಮಾಂಗಲ್ಯಸಾಕ[7]ಲ್ಯದೊಳ್ ೭೫

ಚರಿತಪುರಾಣಮಂ ನೆಱೆಯೆ ಪೇೞ್ವಿಡೆಯೊಳ್ಪರಮಾಗಮಕ್ಕೆ ಮೇ
ಲ್ಗುರುಗಳನಾಂತು ನಿಂದೆಡೆಗೆ [8]ಬಲ್ಗವಿಯಂ[8] ನವಸುಪ್ರಯೋಗತ
ತ್ಪರತೆಗೆ ಬೇೞೆ ಪಂಡಿತರನಳ್ಕುೞೆ ಕೇಳದ ನೋಡದಾಸೆವ
ಟ್ಟರದಸಹಾಯನಲ್ತೆ ಸುಕಳಾನ್ವಯದೊಳ್ಕವಿಭಾಳಲೋಚನಂ ೭೬

---

1 ಯ ಶ್ರೀ ಯು (ಎ) 2 ತ (ಅಇಉ) (ಎ) ಯಲ್ಲಿ ಲುಪ್ತ 3 ವಿ (ಅಇಉ)
4 ನೆಂ (ಅಇಉ) 5 ಪೇೞ್ವುದೆ (ಅಇಉ) ಪಡಿವೆ (ಎ) 6 ಧಿಪ (ಎ)
7 ಸಾಕಲ್ಯಮಾಂಗ (ಎ) 8 ಬಲ್ಲವಿಯೆಂ (ಅಇಉ) ಬಿಲ್ಲವಿಯಂ (ಎ)

ರನ್ನಂ ವೈಯಾಕರಣಂ
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ
ಹೊನ್ನನಸಹಾಯಕವಿ ಮೇಣ್
ಜನ್ನಿಗನಸಹಾಯಸುಕವಿ ಕವಿಚಕ್ರಿಗಳೊಳ್ ೭೭

ಪಾಡುವ ಸಾಳಗಂ ಬಳಿಯೊಳಾಡುವ ನಚ್ಚಣಿ ಮೆಯ್ವಸಂಗಳಿಂ
ತೀಡುವ ತೆಂಬೆಲರ್ತೊಳಗಿ ಮೂಡುವ ಪೂರ್ಣಸುಧಾಂಶು ರಾಗದಿಂ
ನೋಡುವ ಪೆಣ್ಣ ಕಣ್ಣಕಡೆ ಸೋಲಿಸಲಾರ್಩ವೆ ಭಾಳಲೋಚನಂ
ಮಾಡಿದ ಕಾ[1]ವ್ಯ[1]ರೀತಿ [2]ಕಿವಿದಾಗಿದ[2] ಭಾವಕರಂತರಂಗಮಂ ೭೮

*ಪದಪಿಂ ತಾಂ ಪೆಸರ್ಗೊಂಡಿಳಾಧಿಪತಿಯೇ ರಾಯಂನಲಂಪಿಂದಮಿ
ರ್ದುದೆ ಸರ್ವಜ್ಞಸಭಾಸ್ಥಲಂ ಗಡಣಗೊಂಡಾ ಜಾಣರೊಳ್ ಜಾಣರಿ
ರ್ದುದೆ ದೇವಪ್ರುಜದೊಳ್ಸದೇಶ ಮುದದಿಂ ವ್ಯಾಖ್ಯಾನಮಂ ಮಾಡಿಕೇ
ಳಿದಪಂ ವಾಗ್ಮಿಗಣಾಗ್ರಗಣ್ಯನೆನೆ ಜನ್ನಂಗಾರ್ಸಮಂ ಧಾತ್ರಿಯೊಳ್ ೭೯

ಇದು ಲೋಕೋತ್ತಮುಮುಪ್ಪ ವಿದ್ಯೆ ಜಗದೊಳ್ತಾನಿತ್ತ ಕೆಯ್ಯಲ್ಲದೊ
ಡ್ಡಿದ ಕೆಯ್ಯಲ್ಲದ ಪೆಂಪು ಭೂಭುಜರೊಳದ್ವೈತೀಯಮಾಗಿರ್ಪಸ
ಲ್ಗೆ ದಿಟಕ್ಕನ್ಯರ ಲೇಸನಲ್ಲದೆನಗಿಂತಂತೆಂದು ಮಾತಾಡಲೊ
ಲ್ಲದ ಸತ್ವಂ ಕವಿಭಾಳಲೋಚನನೊಳುಂಟೆನ್ನೊರ್ವರೊಳ್ತ್ರೀಜಿಂಸಾ ೮೦

ಕೊಡೆಯಂ ಪಟ್ಟಮನಾಂತ ಚಕ್ರಿ ಕವಿತಾಸಾಮ್ರಾಜ್ಯದೊಳ್ತೇಜದು
ಗ್ಗಡಮಂ ಕೀರ್ತಿಯನಾಂತ ಬಲ್ಲಹಸಿಳಾಪುತ್ರತ್ವದೊಳ್ ಚಾಗಮಂ
ನುಡಿಯೊಳ್ಸತ್ಯಮನಾಂತ ರಾಜಮುನಿಪಂ ಸಮ್ಯಕ್ತ್ವದೊಳ್ಗೌರವಂ
ಬಡೆದಂ ಮಾನವಮೇರು ಜನ್ನಮರಸಂ ಸಾಹಿತ್ಯ[3]ರತ್ನಾಕರಂ[3] ೮೧

---

1 ಬ್ಯ (ಎ)  2 ಕವಿತಾಗುಣದ (ಎ)  3 ಪಾರೋದಯಂ (ಎ)

* ಇದರಬದಲು ಎ ಪ್ರತಿಯಲ್ಲಿ ಈ ಪದ್ಯವಿದೆ :

ಪದಪಿಂ ತಾಂ ಪೆಸರ್ಗೊಂಡಿಳಾಧಿಪತಿರಾಯಂ ತಾನಲಂಪಿಂದಮಿ
ರ್ದುದೆ ಸರ್ವಜ್ಞಸಭಾಸ್ಥಳಂ ಸ್ವರುಚಿಯಿಂ ತಾಂಕಬ್ಬಮಂ ಪೇಳ್ದು ಮಾ
ಡಿದ ತಾರಾದಾತಾರನೆ ಖೇಚರೇಶ್ವಶನಿದೇಂ ಸಾಮರ್ಥ್ಯ ಸೌಭಾಗ್ಯಸಂ
ಪದಮೇ ಬಾಪು ಜನಾರ್ಧನಂಗಮೃತವಾಣಿತ್ವಂ ಜಗದ್ಜೃಂಭುಕಂ

ಪೊಸಚೈತ್ಯಂ ಗಂಡರಾದಿತ್ಯನ ಪೊಟಿಲೊಳನಂತಂಗೆ ಚೆಲ್ವಪ್ಪಿನಂ ಮಾ
ಡಿಸಿ ನಾಂದೀಪದ್ಯಮಂ [1]ಪರ್ಣಿಸಿ[1] ಚರಿತಪುರಾಣಕ್ಕದಂ [2]ವರ್ಷ[2]ದೊಳ್ದೋ
ರಸಮುದ್ರಂ [3]ಮೆಚ್ಚೆ[3] ತಾಂ ಮಾಡಿಸಿದ ಸೊಬಗ ಶಾಂತೀಶ್ವರಾವಾಸದೊಳ್ ಸ್ಥಾ
ಪಿಸಿದಂ ಜನ್ನಂಗೆ ಸಲ್ಗುಂ ಕೃತಿವಸತಿಯ ನಿರ್ವಾಣಪುಣ್ಯಪ್ರಭಾವಂ ೮೨

ದೋರಸಮುದ್ರದೊಳ್ ವಿಜಯಪಾರ್ಶ್ವಜಿನೇಶ್ವರದಿವ್ಯಮಂದಿರ
ದ್ವಾರದ ಮುಂತೆ ಮಾಡಿಸಿದ ಶಾಂತಿಜಿನಾಲಯದೊಳ್ಳಮೇರುವುಂ
ದಾರದ ಕೊಂಬನರ್ಥಿಯಿನಲುಂಬಿದ[4]ವೋಲ್[4] ಕವಿಭಾಳಲೋಚನಂ
ಧಾರಿಣಿಗಿಂತು ಮಾಡಿದನನಂತಪುರಾಣದ ಸುಪ್ರತಿಷ್ಠೆಯಂ ೮೩

ಶಕಸಂವತ್ಸರಮಂದು ಸಾಸಿರದ ನೂಱ್ನಾವತ್ತೆರಡಪ್ಪಿನಂ
ವಿಕೃತಾಬ್ದಂ ಬರೆ ಚೈತ್ರಶುದ್ಧದಶಮೀ ದೇವೇಜ್ಯನೊಳ್ಪುಷ್ಯತಾ
ರಕದೊಳ್ಮಾಡಿಸಿದಂ ಪ್ರತಿಷ್ಠೆಯನನಂತಶ್ರೀಪುರಾಣಕ್ಕೆ ಕ
ಮ್ಮೆಕುಲಾಂಭೋರುಹಭಾನು ಜನ್ನಮರಸಂ ಸಾಹಿತ್ಯರತ್ನಾಕರಂ ೮೪

ನರಸಿಂಹಂ ಮಗಧಾದಿರಾಯಲಯಕಾಲಂ ಭಾಳವಿಸ್ತಾರಕಂ
ಸ್ಥಿರರಾಜ್ಯೋದ್ಭವಲಕ್ಷ್ಮಿಯಿಂದೆ ಸುಖಮಿರ್ಕಾಚಂದ್ರತಾರಂ ಜಿನೇ
ಶ್ವರಧರ್ಮಂ ತ್ರಿಜಗದ್ವಿನೇಯಖಿಳಕರ್ಮಧ್ವಾಂತಮಂ ತೂಳ್ದಿ ಭಾ
ಸ್ಕರಬಿಂಬಂ ಶರದಿಂದುಬಿಂಬಮೆನೆ ಸಲ್ಗಾಕಲ್ಪಕಲ್ಪಂಬರಂ ೮೫

## ಗದ್ಯ

ಇದು ಪರಮಜಿನಸಮಯ ವನವಸಂತಸಂತಾನಾರಾಮ ರಾಮಚಂದ್ರಮುನೀಂದ್ರ
ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸನ್ನಾಂತಃಕರಣ
ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ
ಅನಂತನಾಥ ಪುರಾಣದೊಳ್ ಪರಿನಿರ್ವಾಣಕಲ್ಯಾಣವರ್ಣನಂ
ಚತುರ್ದಶಾಶ್ವಾಸಂ ಅನಂತನಾಥ ಪುರಾಣಂ
ಸಂಪೂರ್ಣಂ

---

1 ಟಿಪ್ಪಣಿಸಿ (ಅಇಉ) ಪಟಿಪಿಸಿ (ಎ) 2 ದರ್ಶ (ಅಇಉ) 3 ಮೇರು (ಅಇಉ) 4 ಮೇಣ್ಕೆ (ಅಇಉ)

## ಅನುಬಂಧ-೧

### ಚಾವುಂಡರಾಯವಿರಚಿತಮಪ್ಪ ತ್ರಿಷಷ್ಟಿಲಕ್ಷಣಮಹಾಪುರುಷ ಪುರಾಣೋಕ್ತ ಅನಂತತೀರ್ಥಕರ ಕಥಾಸಂಗತಿ.

ಶ್ರೀಮಹಿತಮೆನಿಪ ಸದ್ಧ
ರ್ಮಾಮೃತದಿಂ ತಣಿಪಿ ಭವ್ಯರಂ ನೆಗಳ್ವ ಮಹೋ
ದ್ದಾಮಗುಣರ್ ಲೋಕೈಕ ಶಿ
ಖಾಮಣಿಗಳನಂತರೀಗನಂತಶ್ರೀಯಂ ೧

ಧಾತಕೀಷಂಡದ ಮೂಡಣ ಮಂದರದ ಐರಾವತಕ್ಷೇತ್ರದರಿಷ್ಟಪುರವನಾಳ್ವ ಪದ್ಮರಥನೆಂಬರಸಂ ಸ್ವಯಂಪ್ರಭಜಿನರ ಪಕ್ಕದೆ ಧರ್ಮಮಂ ಕೇಳ್ದು ವೈರಾಗ್ಯಪರಂ ತನ್ನ ಮಗಂ ಘನರಥಂಗೆ ರಾಜ್ಯಮಂ ಕೊಟ್ಟು ಸಂಯಮಧರನೇಕಾದಶಾಂಗಧಾರಿ ಷೋಡಶಭಾವನೆಗಳಿಂ ತೀರ್ಥಕರಪುಣ್ಯಮಂ ಕಟ್ಟಿ ಜೀವಿತಾಂತದೊಳ್ ಆರಾಧನಾವಿಧಿಯಿಂದಚ್ಯುತಕಲ್ಪದೊಳ್ ಮುಡುಪಿ ಪುಷ್ಪೋತ್ತರವಿಮಾನದೊಳ್ ಅಚ್ಯುತೇಂದ್ರನಿಪ್ಪತ್ತೆರಡು ಸಾಗರೋಪಮಾದ್ಯಮಾಱು ಮೊಟಿ ನಿಡಿಯನುಂ ಶುಕ್ಲಲೇಶ್ಯಾಪರಿಣಾಮನುಂ ಸಪ್ತಮಪೃಥ್ವೀಗತಾವಧಿಜ್ಞಾನನುಮಾಗಿ ಸುಖಮನನುಭವಿಸುತ್ತುಮಿರ್ಪಿನಮಿತ್ತ ಜಂಬೂದ್ವೀಪದ ಭರತಕ್ಷೇತ್ರದಯೋಧ್ಯಾನಗರಮನಾಳ್ವ ಇಕ್ಷ್ವಾಕುವಂಶದ ಕಾಶ್ಯಪಗೋತ್ರದ ಸಿಂಹಸೇನಮಹಾರಾಜಂಗೆ ಯರಸಿ ಜಯಶ್ಯಾಮಾಮಹಾದೇವಿ ಸೌಧರ್ಮಕೃತ ವಸುಧಾರಾದಿಪೂಜಾಪೂರ್ವಕಂ ಕಾರ್ತಿಕ ಪಾಡಿವದ ಬೆಳಗಪ್ಪ ಜಾವದೊಳ್ ರೇವತೀನಕ್ಷತ್ರದೊಳ್ ಷೋಡಶಶುಭ ಸ್ವಪ್ನದರ್ಶನಾನಂತರವೊಂದು ಗಜಂ ತನ್ನ ಮುಖಮಂ ಪುಗುವುದಂ ಕಂಡು ಅವಧಿಜ್ಞಾನಿಯಪ್ಪ ನಿಜೇಶನಿಂ ತತ್ಫಲಮನಱಿದು ಸುಖಮಿರ್ಪಿನಮಚ್ಯುತೇಂದ್ರಂ ಸ್ವರ್ಗಾವತರಣಕಲ್ಯಾಣಪೂಜಾಪೂರ್ವಕಮಾ ದೇವಿಯ ಗರ್ಭಕ್ಕವತರಿಸಿ ವಿಮಲಭಟ್ಟಾರಕರ ಸಂತಾನಂ ಪತ್ತು ಸಾಗರೋಪಮದ ಕಡೆಯ ಪಲ್ಯೋಪಮದ ತ್ರಿಭಾಗದೊಳ್ ಧರ್ಮವ್ಯುಚ್ಛಿನ್ನಮಾಗಿರ್ದ ಕಾಲದೊಳ್ ಜ್ಯೇಷ್ಠ ಬಹುಳ ದ್ವಾದಶಿಯೊಳ್ ಪುಷ್ಪಯೋಗದೊಳ್ ಪುಟ್ಟೆ ಸೌಧರ್ಮೇಂದ್ರಂ ಬಂದು ಜನ್ಮಾಭಿಷೇಕಪೂರ್ವಕಮನಂತಜ್ಞಾನಾದಿ ಸಕಲಗುಣಸಂಪನ್ನರಪ್ಪರೆಂದನಂತರೆಂಬನ್ವರ್ಥನಾಮಮನಿಟ್ಟುಪೋದನಿತ್ತಲಾ ತೀರ್ಥಕರಕುಮಾರಂ ತ್ರಿಜ್ಞಾನಧರರುಂ ತ್ರಿಂಶಲ್ಲಕ್ಷ ವರುಷ ಪರಮಾಯುಷ್ಯರುಂ ಐವತ್ತು ಬಿಲ್ನಿಡಿಯರುಂ ಕನಕವರ್ಣರುಮಾಗಿ ಬಳೆಯೆ ಲಕ್ಕೆಯುಮಯ್ವತ್ತುಸಾಸಿರ ವರ್ಷಂ ಕುಮಾರಕಾಲಂ ಪೋಗೆ ರಾಜ್ಯದೊಳ್ನಿಂದು ಪದಿನೈದು ಲಕ್ಕೆ ವರ್ಷಂ ರಾಜ್ಯಕಾಲಂ ಸಲ್ವಿನಮೊಂದು ದಿವಸಮುಳ್ಕಾಪಾತದರ್ಶನದಿಂ ಮತಿಜ್ಞಾನಕ್ಷಯೋಪಶಮಪ್ರಯೋಗಸಂಜನಿತನಿರ್ವೇಗಂ ಲೌಕಾಂತಿಕದೇವರ್ ಪ್ರತಿಬೋಧಿಸೆ ತಮ್ಮ ಮಗನಪ್ಪ

ವಿಜಯನಂ ರಾಜ್ಯದೊಳ್ನಿಲಿಸಿ ಸಾಗರದತ್ತೆಯೆಂಬ ಶಿಬಿಗೆಯನೇಱಿ ಸಹೇತುಕವನಕ್ಕೆ ಷಷ್ಠೋಪವಾಸದಿಂ ಜ್ಯೇಷ್ಠ ಬಹುಳ ದ್ವಾದಶಿಯಪರಾಹ್ಣದೊಳ್ ರೇವತೀನಕ್ಷತ್ರಮಾಗೆ ಸಾಸಿರ್ವರರಸುಗಳ್ವೆರಸು ದೀಕ್ಷೆಗೊಂಡು ಚತುರ್ಜ್ಞಾನಧರನಯೋಧ್ಯಾಪುರಕ್ಕೆ ಚರಿಗೆವರೆ ಕನಕವರ್ಣನಪ್ಪ ವಿಶಾಖನೃಪನ ಮನೆಯೊಳ್ ನಿಲೆ ಪಂಚಾಶ್ಚರ್ಯಂ ನೆಗೞೆ ಮೌನ ವ್ರತದಿನೆರಡು ವರ್ಷಂ ಛದ್ಮಸ್ಥಕಾಲಂ ಸಲೆ ಸಹೇತುಕವನದಶ್ವತ್ಥವೃಕ್ಷದಡಿಯೊಳ್ ಚೈತ್ರಮಾಸದಮಾವಾಸೆಯಪರಾಹ್ಣದೊಳ್ ರೇವತೀನಕ್ಷತ್ರದೊಳ್ ಕೇವಲಜ್ಞಾನೋತ್ಪತ್ತಿಯಾಗೆ ಸೌಧರ್ಮಕೃತಕಲ್ಯಾಣಂ ಸಾಸಿರದೆಂಟನ್ವರ್ಥ ನಾಮಂಗಳಂ ತಾಳ್ದಿ ಜಯಧಾಮರ್ಮೊದಲಾಗಯ್ವದಿಂಬರ್ಗಣಧರರುಂ ಸಾಸಿರ್ವರ್ ಪೂರ್ವಧರರುಂ ಮೂವತ್ತೊಂಬೈಸಾಸಿರದಯ್ನೂರ್ವರ್ಶಿಕ್ಷಕರುಂ ನಾಲ್ಛಾಸಿರದ ಮೂವದಿಂಬರವಧಿಜ್ಞಾನಿಗಳುಂ ಐಸಾಸಿರ್ವರ್ ಕೇವಲಿಗಳುಂ ಎಣ್ಛಾಸಿರ್ವರ್ ವಿಕ್ರಿಯರ್ಧಿಪ್ರಾಪ್ತರುಂ ಐಸಾಸಿರ್ವರ್ ಮನಃಪರ್ಯಯಜ್ಞಾನಿಗಳುಂ ಎರಡುಲಕ್ಕೆ ವಾದಿಗಳುಂ ಸರ್ವಶ್ರೀಮೊದಲಾಗೊಂದು ಲಕ್ಕೆಯುಮೆಣ್ಛಾಸಿರ್ವರಜ್ಜಿಯರುಂ ಎರಡುಲಕ್ಕೆ ಶ್ರಾವಕರುಂ ನಾಲ್ಕು ಲಕ್ಕೆ ಶ್ರಾವಕಿಯರುಂ ಅಸಂಖ್ಯಾತದೇವರುಂ ದೇವಿಯರುಂ ಸಂಖ್ಯಾತತಿರ್ಯಗ್ಜಾತಿಗಳುಂ ಪಾತಾಳ ಯಕ್ಷನುಮನಂತಮತಿಯಕ್ಷಿಯುಂ ಬೆರಸು ಧರ್ಮೋಪದೇಶಂಗೆಯ್ವುತ್ತುಮೆರಡು ವರುಷಂ ಗುಂದಿದೇೞುಲಕ್ಕೆಯುಮಯ್ವತ್ತುವರ್ಷಂ ವಿಹಾರಿಸಿ ಸಮ್ಮೇದಗಿರಿಯೊಳೊಂದು ತಿಂಗಳ್ ವಿಹರಣಮನುೞಿದು ಆಱು ಸಾಸಿರದ್ವೈನೂರ್ವರ್ಮುನಿಗಳ್ವೆರಸು ಪ್ರತಿಮಾಯೋಗಧರನ ಮಾವಾಸೆಯ ಪೂರ್ವರಾತ್ರದೊಳನಂತಭಟ್ಟಾರಕರ್ ಮುಕ್ತಿಗೆ ಸಂದರ್. ಸೌಧರ್ಮೇಂದ್ರಂ ಪರಿನಿರ್ವಾಣಕಲ್ಯಾಣದೊಳಾನಂದನೃತ್ಯಮನಾಡಿ ಪೋದಂ.

ಇದು ಸಕಲಶಾಸ್ತ್ರಸಂಯಮಸಂಪನ್ನ ಶ್ರೀಮದಜಿತಸೇನಭಟ್ಟಾರಕ
ಚರಣಕಮಲಚಂಚರೀಕಧರ್ಮ ವಿಜಯ ಶ್ರೀಮಚ್ಚಾವುಂಡ
ರಾಜ ವಿರಚಿತಮಪ್ಪ ತ್ರಿಷಷ್ಟಿಲಕ್ಷಣ ಮಹಾ
ಪುರಾಣದೊಳ್ ಅನಂತನಾಥ ಪುರಾಣಂ

## ಅನುಬಂಧ ೨

## ಅನಂತ ವ್ರತ *

ಶ್ರೀಮದನಂತಚತುಷ್ಟಯ
ಧಾಮು ಮಹಾವೀರ್ಯನತುಳಬೋಧಾಧೀಶಂ
ಪ್ರೇಮದೊಳನಂತಸುಖಮಂ
ಕಾಮಹರಂ ಮಾಳ್ಕನಂತತೀರ್ಥಾಧೀಶಂ ೧

ಅನಂತವಿಜ್ಞಾನಮನಂತವೀರ್ಯತಾ
ಮನಂತಸೌಖ್ಯತ್ವಮನಂತದರ್ಶನಂ
ಬಿಭರ್ತಿ ಯೋಽನಂತಚತುಷ್ಟಯಂ ವಿಭುಃ
ಕರೋತು ಶಾಂತಿರ್ಭವದುಃಖಶಾಂತಯೇ ೨

ಈ ಜಂಬೂದ್ವೀಪದೊಳಭಿ
ರಾಜಿಪುದಾ ಮಗಧವಿಷಯಮದರೊಳಗೆಸೆವಾ
ರಾಜಗೃಹನಗರದಧಿಪಂ
ರಾಜಿಸುವಂ ಶ್ರೇಣಿಕಂ ಮಹಾಮಂಡಲಿಕಂ ೩

ಆ ಭೂಪನರಸಿ ಸಕಳಗು
ಣಾಭರಣೆ ವಿಭೂಷಿತಾಂಗಿ ಚೇಳಿನಿಯೆಂಬಳ್
ಭೂಭುವನವಿನುತೆ ಪಿರಿದುಂ
ಶೋಭಿಪಳನವದ್ಯಚರಿತೆ ಶೀಲೋನ್ನತಿಯಿಂ ೪

ವ || ಅಂತವರಿರ್ವರುಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ ಲೊಂದು ದಿವಸಂ

ಪರಿತಂದು ಋಷಿನಿವೇದಕ
ನರಸಂಗಿಂತೆಂದು ಬಿನ್ನಪಂಗೆಯ್ದನವಂ
ನರನಾಥ ವಿಪುಳಗಿರಿಯೊಳ್
ಪರಮಾತ್ಮಂ ಬಂದು ನೆಲಸಿದಂ ವೀರಜಿನಂ ೫

ವ || ಎಂದು ಬಿನ್ನಪಂಗೆಯ್ಯೆ ಶ್ರೇಣಿಕಮಹಾರಾಜನುಂ ಚೇಳಿನೀಮಹಾದೇವಿಯುಂ ಹರ್ಷೋತ್ಕರ್ಷಚಿತ್ತರಾಗಿ ಆ ದಿಸೆಗೆ ಏಳಡಿಯಂ ನಡೆದು ಸಾಷ್ಟಾಂಗವಾಗಿ ಪೊಡ

* ಕನ್ನಡ ಅಧ್ಯಯನ ಸಂಸ್ಥೆಯ ಕೆ. ಬಿ. ೨೫೨ ನೆಯ ಹಸ್ತಪ್ರತಿಯಿಂದ ಆಯ್ದುದು.

ಮಟ್ಟು ವಸಗೆ ಪೇಳ್ದಂಗಂಗಚಿತ್ರಮುಂ ಕೊಟ್ಟು ಆನಂದಭೇರಿಯಂ ಪೊಯ್ಸಿ ಕತಿಪಯ ಪುರಜನಪರಿಜನಾಂತಃಪುರಜನಪರಿವೃತನಾಗಿ ಮದಕರೀಂದ್ರಮುಂ ಚೇಳಿನೀ ಮಹಾದೇವಿ ವೆರಸು ಕುಳ್ಳಿರ್ದು ಅನೇಕ ವಾದ್ಯರವಮೆಸೆಯೆ ನಡೆಯೆ ತದನಂತರಂ ದೂರಾಂತರದಿಂ ವಾಹನಮನಿಳಿದು ಪಾದಮಾರ್ಗದಿಂ ಸಮವಸರಣಮಂ ಪೊಕ್ಕು ಗಂಧಕುಟಿಯಂ ತ್ರಿಃ ಪ್ರದಕ್ಷಿಣಂಗೆಯ್ದೊಳಗಂ ಪೊಕ್ಕು ಶ್ರೀಮದರ್ಹತ್ಪರಮೇಶ್ವರಂಗಭಿಮುಖನಾಗಿ,

ಜಯ ದುರಿತಹರಣ ನಿರುಪಮ
ಜಯ ಶಾಶ್ವತಸೌಖ್ಯದಾಯಿ ನಿತ್ಯಾನಂದಾ
ಜಯ ಮದನಮದವಿಭಂಜನ
ಜಯಜಯ ಸರ್ವಜ್ಞ ಮೋಕ್ಷಲಕ್ಷ್ಮೀನಾಥಾ ೬

ವ॥ ಎಂದನೇಕಸ್ತುತಿಶತಸಹಸ್ರಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿ ಶ್ರುತಪೂಜೆಯಂ ಮಾಡಿ ತದನಂತರಂ ಗೌತಮಸ್ವಾಮಿ ಪ್ರಮುಖಋಷಿ ಸಮು ದಾಯಮಂ ಯಥಾಕ್ರಮದಿಂ ವಂದಿಸಿ ಪಾದಾರ್ಚನೆಯಂ ಮಾಡಿ ಪನ್ನೊಂದನೆಯ ಮನುಷ್ಯಕೋಷ್ಠದೊಳ್ ಕುಳ್ಳಿರ್ದು ನಿರ್ಮಳಮನದಿಂ ಧರ್ಮಶ್ರವಣಮನಿರ್ವರುಂ ಕೇಳ್ದ ನಂತರಂ, ಚೇಳಿನಿಮಹಾದೇವಿಯು ಪ್ರಥಮಗಣಧರಮಪ್ಪ ಗೌತಮಸ್ವಾಮಿಗಳಿಗೆ ವಂದಿಸಿ, ಕರಕಮಲಮುಕುಳಿತೆಯಾಗಿ ಎಲೈಸ್ವಾಮಿ, ಎನಗೆ ಅನಂತಸುಖಮಂ ಮಾಳ್ಪುದಾವುದಾನು ಮೊಂದು ನೋಂಪಿಯಂ ಬೆಸಸಿಮೆನೆ, ಅವರಿಂತೆಂದು ಪೇಳ್ದರು.

ಅತಿಶಯತೀರ್ಥೇಶ್ವರರಾದ ಅನಂತಕೇವಲಿಗಳ ನೋಂಪಿಯುಂಟೆನಲು ಆ ನೋಂಪಿಯ ವಿಧಾನವೆಂತೆಂದೊಡೆ, ಪೇಳ್ದಪರು.

ಭಾದ್ರಪದಶುದ್ಧತ್ರಯೋದಶಿಯೊಳು ನೋಂಪಿಯಂ ಕೈಕೊಂಬುದು, ಆ ಪರ ಮೇಶ್ವರಂ ನವಕ್ಷಾಯಿಕಲಬ್ಧಿಗಧಿನಾಥನಪ್ಪುದರಿಂ, ತಾವರೆಯ ತಂತುವಿನೊಳಾನುಂ, ಪಟ್ಟೆ ಸೂತ್ರದೊಳಾನುಂ, ಸುವರ್ಣಸೂತ್ರದೊಳಾನುಂ, ಶುದ್ಧಮಪ್ಪ ಕಾರ್ಪಾಸಸೂತ್ರ ದೊಳಾನುಂ, ಇಪ್ಪತ್ತೇಳು ಎಳೆಯ ದಾರಮಂ ಮಾಡಿ ಆ ದಾರದೊಳಾದಿತೀರ್ಥೇಶ್ವರರ್ಮೊ ದಲಾದನಂತತೀರ್ಥಕರಪರ್ಯಂತಂ ಪದಿನಾಲ್ಕು ತೀರ್ಥಕರ ಸಂಖ್ಯೆಯ ಗಂಟುಗಳಂ ಮಾಡಿ, ಧೌತವಸ್ತ್ರವನುಟ್ಟು, ಶುಚಿರ್ಭೂತರಾಗಿ ಪಂಚಾಮೃತಾಭಿಷೇಕ ಅಷ್ಟವಿಧಾ ರ್ಚನಾದ್ರವ್ಯಂ ಬೆರಸಿ ಬಸದಿಗೆ ಬಂದು ನಿಷಿದ್ಧಿಯಿಂದೊಳಗಂ ಪೊಕ್ಕು ದರ್ಶನಸ್ತುತಿಗೆಯ್ದು ಈರ್ಯಾಪಥಶುದ್ಧಿಯಂ ಮಾಡಿ, ಮಂಡಪಮಂ ಫಲಾವಳಿಗಳಿಂದಲಂಕರಿಸಿ ಪಂಚವರ್ಣದ ರಂಗವಲ್ಲಿಯಿಂ ಪಂಚಮಂಡಲಮನುದ್ಧರಿಸಿ, ಮಧ್ಯದೊಳಷ್ಟದಳಕಮಲಮಂ ಬರೆದು ಮಧ್ಯದೊಳರ್ಹತ್ಪರಮೇಶ್ವರನನ್ನು ಚತುರ್ದಿಗ್ಗತ ದಳಗಳೊಳು ಸಿದ್ಧಸೂರಿಪಾಠಕ ಸರ್ವ ಸಾಧುಗಳನ್ನು ವಿದಿಗ್ಗತದಳಗಳೊಳು ಧರ್ಮಶ್ರುತಚೈತ್ಯಚೈತ್ಯಾಲಯಗಳಂ ಮಂತ್ರ ಕ್ರಮದಿಂ ಬರೆವುದು.

## ಮಂತ್ರ ವಿಧಿಕ್ರಮ

೧ ಓಂ ಹ್ರಾಂ ಅರ್ಹದ್ಭ್ಯಃ ಸ್ವಾಹಾ
೨ ಓಂ ಹ್ರೀಂ ಸಿದ್ಧೇಭ್ಯಃ ಸ್ವಾಹಾ
೩ ಓಂ ಹ್ರೂಂ ಸೂರಿಭ್ಯಃ ಸ್ವಾಹಾ
೪ ಓಂ ಹ್ರಾಂ ಪಾಠಕೇಭ್ಯಃ ಸ್ವಾಹಾ
೫ ಓಂ ಹ್ರಃ ಸರ್ವಸಾಧುಭ್ಯಃ ಸ್ವಾಹಾ
೬ ಓಂ ಹ್ರೀಂ ಜಿನಧರ್ಮೇಭ್ಯಃ ಸ್ವಾಹಾ
೭ ಓಂ ಹ್ರೀಂ ಜಿನಾಗಮೇಭ್ಯಃ ಸ್ವಾಹಾ
೮ ಓಂ ಹ್ರೀಂ ಜಿನಚೈತ್ಯೇಭ್ಯಃ ಸ್ವಾಹಾ
೯ ಓಂ ಹ್ರೀಂ ಜಿನಾಲಯೇಭ್ಯಃ ಸ್ವಾಹಾ

ಈ ಮಂತ್ರಂಗಳಿಂ ಕರ್ಣಿಕೆ ಮೊದಲ್ಗೊಂಡು ಪ್ರದಕ್ಷಿಣ ಕ್ರಮದಿಂದಷ್ಟದಳಂಗಳೊಳಗೆ ಬರೆಯುವುದು. ಆ ಕರ್ಣಿಕೆಯಲ್ಲಿ ಧಾನ್ಯಮಂ ಸ್ಥಾಪಿಸಿ ಹೊಸ ಕುಂಭದೊಳಗಂ ಪೊರಗಂ ಕುಂಕುಮ ಕರ್ಪೂರಾದಿ ಸುಗಂಧದಿಂದನುಲೇಪನಂ ಗೆಯ್ದು ಮೂನೂಲಂ ಸುತ್ತಿ ನವೀನವಸ್ತ್ರದಿಂದಳಂಕರಿಸಿ ಆ ಧಾನ್ಯದ ಮೇಲೆ ಕುಂಭಮಂ ಸ್ಥಾಪಿಸಿ ಪಾಲ್ಮರದ ಪಲಗೆಯಿಂ ಮೇಣು ಕಾಂಚನ ಪಲಗೆಯಿಂ ಮೇಣು ಶ್ರೀಗಂಧ, ಕುಂಕುಮ, ಗೋರೋಚನ, ಕರ್ಪೂರ, ಅಗಿಲು, ಚಂದದ ಸಾಧು ಜಾತಿಫಲಂ ಮೊದಲಾದ ಅಷ್ಟಗಂಧದಿಂ ಅನಂತನಾಥನ ಅನಾಹತ ಯಂತ್ರಮಂ ಸುವರ್ಣ ಶಿಲಾಕೆಯಿನುದ್ಧರಿಸಿ ಈ ಮಂತ್ರಮಂ ಬರೆವುದು.

ಓಂಕಾರಂ ಪೂರ್ವಮರ್ಹಂತಂ ಕಳಾಯುಕ್ತಂ ಚ ಪತ್ರಕಂ
ಹಂಸಂ ಸುಯುಕ್ತಂ ಮಧ್ಯೆ ಅನಾಹತಂ ಯಂತ್ರ ಪೂರ್ವಕ್ಯೈಃ

ಉದ್ಧರಿಸಿ

ಆಹ್ವಾನಂ ಸ್ಥಾಪನಂ ಚೈವ ಸನ್ನಿಧೀಕರಣಂ ತಥಾ
ಪೂಜಾ ವಿಸರ್ಜನಂ ಚೇತಿ ಪೂಜಾ ಪಂಚವಿಧಾ ಸ್ಮೃತಾ

ಇಂತು ಪಂಚೋಪಚಾರಸಮನ್ವಿತ ದೇವರಿಗಭಿಷೇಕಮಂ ಮಾಡಿ, ಈ ಮಂತ್ರದಿಂ ಗಂಧೋದಕಮಂ ಮಾಳ್ಪುದು.

ಓಂ ನಮೋ ಅರ್ಹತೇ ಭಗವತೇ ಅನಂತ ತೀರ್ಥಂಕರಾಯ ದಿವ್ಯ ತೇಜೋಮೂರ್ತಯೇ ನಮಃ ಶ್ರೀ ಶಾಂತಿನಾಥಾಯ ಸರ್ವವಿಘ್ನ ಪ್ರಣಾಶನಾಯ ಸರ್ವರೋಗಾಪಮೃತ್ಯು ವಿನಾಶನಾಯ ಸರ್ವರೋಗಾಪಮೃತ್ಯು ವಿನಾಶನಾಯ ಓಂ ಹ್ರಾಂ ಹ್ರೀಂ ಹ್ರೌಂ ಹ್ರಃ ಅಸಿಆಉಸ ಸ್ವಾಹಾ ಎಂದು ನೋಂಪುವರೆಲ್ಲಂ ಗಂಧೋದಕಮಂ ಮಸ್ತಕದೊಳ್ತಳೆದು ಕೊಂಬುದು. ತದನಂತರಂ ಆ ದಾರಮಂ ಪ್ರಕ್ಷಾಲಿಸುವ ಮಂತ್ರ—

ಓಂ ಹ್ರೀಂ ಶ್ರೀಂ ಕ್ಲೀಂ ಬ್ಲೂಂ ಅರ್ಹಂನಮೋ ಅರ್ಹತ ಭಗವತೆ ತ್ರೈಲೋಕ್ಯನಾಥಾಯ ಸರ್ವನೃಸುರಾರಾರ್ಚಿತಾಯ ಅನಂತ ತೀರ್ಥಂಕರಾಯ ಸ್ವಾಹಾ—ಈ ಮಂತ್ರದಿಂ ದಾರಮಂ ಪ್ರಕ್ಷಾಲಿಸಿ ಆ ದಾರಮನಾ ಯಂತ್ರದ ಮೇಲೆ ದೇವರ ಮುಂದಿಟ್ಟು, ಓಂ ಹ್ರೀಂ ಅನಂತಚತುಷ್ಟಯಾತ್ಮಕಾಯ ಅನಂತತೀರ್ಥಂಕರಾಯ ನಮಃ ಸ್ವಾಹಾ

ಓಂ ವೃಷಭ, ಅಜಿತ, ಶಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರಿಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ ರೆಂಬೀ ಪದಿನಾಲ್ಕು ತೀರ್ಥಕರ ಪೆಸರ್ಗೊಂಡು ಗಂಟುಗಳಂ ಮುಟ್ಟಿ ದಾರವಂ ಸ್ಥಾಪ್ಯಂ ಮಾಡಿ

ಓಂ ಣಮೋ ಅರ್ಹತೋ ಭಗವತೋ ಅಣಂತೋ ಅಣಂತ ಸಿದ್ಧ್ಯತು ಮೆ ಭವತು ಮಹಾವೀರ್ಯ, ಓಂ ಮಹಾವೀರ್ಯ ಅಣಂತೇ ಅಣಂತ ಕೇವಳಿಯೆ ಅಣಂತಕೇವಳಿ ಣಾಣೆ ಅಣಂತಕೇವಳಿ ದಂಸಣೆ ಅಇಷ್ಟು ಜೀವಾಸಣೆ ಅಣಂತಾಗಮೆ ಕೇವಳಿಯೇ ಸ್ವಾಹಾ ಎಂಬೀ ಮಂತ್ರದಿಂ ನೂರೆಂಟು ಕೇತಪುಷ್ಪಮನಿಕ್ಕುವುದು. ತದನಂತರಂ ಈ ಮಂತ್ರದಿಂದ ಷ್ಟವಿಧಾರ್ಚನೆಯಂ ಮಾಳ್ಪುದು. ಮಂತ್ರವಿಧಿಕ್ರಮ—

ಓಂ ನಮೋ ಅರ್ಹತೇ ಭಗವತೇ ಶ್ರೀಮದನಂತ ತೀರ್ಥಂಕರಾಯ ಅನಂತಜ್ಞಾನಾಯ ಅನಂತದರ್ಶನಾಯ ಅನಂತ ವೀರ್ಯಾಯ ಅನಂತ ಸುಖಾಯ ಅನಂತತೀರ್ಥಂಕರಾಯ ಜಲಂ ನಿರ್ವಪಾಮಿ ಸ್ವಾಹಾ

ಎಂದು ಅಷ್ಟವಿಧಾರ್ಚನೆಯಂ ಮಾಡಿ

ಓಂ ಹ್ರೀಂ ಶ್ರೀಂ ಕ್ಲೀಂ ಅರ್ಹಂ ಅನಂತತೀರ್ಥಕರಾಯ ಓಂ ಹ್ರಾಂ ಹ್ರೀಂ ಹ್ರೂಂ ಹ್ರೌಂ ಹ್ರಃ ಅಸಿಆಉಸ ಮಮ ಸರ್ವಶಾಂತಿಂ ಕಾಂತಿಂ ತುಷ್ಟಿಪುಷ್ಟಿ ಸೌಭಾಗ್ಯಮಾಯುರಾರೋಗ್ಯಮಿಷ್ಟಸಿದ್ಧಿಂ ಕುರು ಸರ್ವವಿಘ್ನ ವಿನಾಶನಂ ಕುರುಇ ಸಮಸ್ತ ರೋಗಾಪಮೃತ್ಯು ವಿನಾಶನಂ ಕುರುಇ ಸ್ವಾಹಾ

ಎಂದೀ ಮಂತ್ರದಿಂದದರ್ಘ್ಯಮನೆತ್ತುವುದು, ತದನಂತರಂ ಶ್ರುತಮುಂ ಗುರುಗಳುಮಂ ಪೂಜಿಸಿ ಮೂರುದಿನ ಬ್ರಹ್ಮಚರ್ಯಪೂರ್ವಕಂ ಚತುರ್ದಶಿಯಮುಪವಾಸಮಂ ಕೈಕೊಂಡು ಮನೆಗೆ ಬಂದು ಮರುದಿನ ಬ್ರಹ್ಮಚರ್ಯ ಪೂರ್ವಕಂ ಚತುರ್ದಶಿಯ ಪೊತ್ತನತಿ ಕ್ರಮಿಸದೆ ಮಗದ ದೇಶದೊಬ್ಬಳ್ಳ ಗೋಧಿಯ ಪಿಟ್ಟಂ ನಾಲ್ವತ್ತೊಂಬತ್ತು ಮಂಡಿಗೆಯಂ ಮಾಡಿ ನೋಂಪುವರೆಲ್ಲಂ ಶುಚಿಭೂರ್ತರಾಗಿ ಅಷ್ಟವಿಧಾರ್ಚನಾ ಸಮನ್ವಿತರಾಗಿ ಚೈತ್ಯಾಲಯಕ್ಕೆ ಬಂದು ಪಂಚೋಪಚಾರ ಸಮನ್ವಿತದಿಂದನಂತತೀರ್ಥಕರಿಗೆ ಪಂಚಾಮೃತಾಭಿಷೇಕಮಂ ಮಾಡಿ ಹಿಂದೆ ಹೇಳಿದ ಮಂತ್ರದಿಂ ಗಂಧೋದಕಮಂ ಮಾಡಿ ನೋಂಪುವರೆಲ್ಲಂ ಮಸ್ತಕದೊಳ್ ತಳಿದು ಕೊಂಬುದು. ತದನಂತರಂ ಹಿಂದೆ ಹೇಳಿದ ಅಷ್ಟವಿಧಾರ್ಚನೆಯ ಮಂತ್ರದಿಂ ೧೪ ಜಲಧಾರೆ, ೧೪ ಗಂಧ, ೧೪ ಅಕ್ಷತೆಯಪುಂಜ, ೧೪ ತೆರದ ಪುಷ್ಪ, ೧೪ ಮಂಡಿಗೆ ಶರ್ಕರೆ ತುಪ್ಪಸಹಿತ ಚರುವನಿಡುವುದು. ೧೪ ಕರ್ಪೂರ ದೀವಿಗೆಗಳಂ ಬೆಳಗುವುದು. ೧೪ ಕಾಲಾಗರು ಧೂಪಮನಿಕ್ಕುವುದು. ೧೪ ತೆರದ ಫಲಂಗಳಿಂ ೧೪ ಅಡಕೆ ಎಲೆಗಳಿಂದರ್ಚಿಸುವುದು. ತದನಂತರಂ ಹಿಂದೆ ಹೇಳಿದ ಮಂತ್ರದಿಂದರ್ಘ್ಯಮನೆತ್ತುವುದು. ತದನಂತರಮೇನಾನು ಸುವರ್ಣಮಂ ದೇವತಾ ಸಂಕಲ್ಪದಿಂ ಮಡಗುವುದು. ಬಳಿಕಂ ಶ್ರುತಮುಂ ಗುರುಗಳುಮಂ ಪೂಜಿಸುವುದು.

ಓಂ ನಮೋ ಅರ್ಹತೋ ಭಗವತೋ ಅನಂತ ತೀರ್ಥಕರಾಯ ಅನಂತ ಸೌಖ್ಯಪ್ರದ

ಕಾರಣಾಯ ಸಕಲಗುಣಗಣಾಭರಣಭೂಷಿತಾಯ ಓಂ ಹ್ರೀಂ ಶ್ರೀಂ ಕ್ಲೀಂ ಅರ್ಹಂ ನಮಃ. ಮಮ ಸರ್ವಶಾಂತಿಂ ಕಾಂತಿಂ ತುಷ್ಟಿಪುಷ್ಟಿಸೌಭಾಗ್ಯಮಾಯುರಾರೋಗ್ಯಮಿಷ್ಟಸಿದ್ಧಿಂ ಕುರು ವಷಟ್ ಸ್ವಾಹಾ ||

ಈ ಮಂತ್ರಮನೋದುತಂ ಹೊಸದಾರಮಂ ಕಟ್ಟಿಕೊಂಬುದು

ಓಂ ಹ್ರೀಂ ಶ್ರೀಂ ಕ್ಲೀಂ ಐಂ ಅರ್ಹಂ ಮಮ ಸರ್ವಕರ್ಮ ಬಂಧನವನಿರ್ಮುಕ್ತಾಯ ಅನಂತತೀರ್ಥಕರಾಯ ಅನಂತ ಸುಖ ಪ್ರದಾಯ ನಮಃ ಸ್ವಾಹಾ

ಎಂದು ಮುನ್ನಿನ ಹಳೇದಾರಮಂ ಬಿಟ್ಟು ಕಳೆವುದು ತದನಂತರಂ ದಕ್ಷಿಣ ಸಹಿತ ಬಾಯಿನಮಂ ಕೊಡುವುದು.

ಓಂ ಹ್ರೀಂ ಗೀತೆಯ ನಮಸ್ಮೈದತ್ತಾನಂತಫಲಂ ಮಂತ್ರಮನೋದುತಂ ರತ್ನತ್ರಯಶ್ರಾವಕರ್ಗೆ ಬಾಯಿನಮಂ ಕೊಡುವುದು. ಬಾಯಿನಮಂ ಕೊಂಬುವರು "ಆಯುಷ್ಮಾನ್ಭವೇನ್ನಿತ್ಯಂ" ಎಂದು ಬಾಯಿನಮಂ ಕೊಂಬುದು. ಕಥೆಯಂ ಕೇಳ್ದು ಕಥಕನಂ ಪೂಜಿಸುವುದು. ಶ್ರುತಮಂ ಗುರುಗಳುಮಂ ಪೂಜಿಸುವುದು. ಉಪವಾಸಕ್ಕೆ ಆರದಿರ್ದೊಡೆ ಹಿಂದೆ ಹೇಳಿದ ೪೯ ಮಂಡಿಗೆಯಲ್ಲಿ ದೇವರಿಗೆ ೧೪, ಶ್ರುತಕ್ಕೆ ೪, ಗಣಧರರಿಗೆ ೩, ಬಾಗಿನಕ್ಕೆ ೧೪ ಮಂಡಿಗೆ ಹೋಗಲಾಗಿ ನಿಂತ ೧೪ ಮಂಡಿಗೆಯಂ ಹಾಲುತುಪ್ಪ ಶರ್ಕರೆಯಂ ಬೆರಸಿ ಏಕಭುಕ್ತಿಯಂ ಮಾಡುವುದು. 'ನೋಂಪಿಯ ಕ್ರಮವಿಾ ಪಾಂಗಿನಿಂದೀರೇಳು ವರ್ಷಂಬರಂ ನೋಂತುಜ್ಜವಣೆಯಂ ಮಾಳ್ಪ ಕ್ರಮಮೆಂತೆಂದೊಡೆ—ಮುನ್ನ ದೇವತಾಸಂಕಲ್ಪದಿಂ ಮಡಗಿದ ಧನದಿಂದನಂತತೀರ್ಥಕರ ಪ್ರತಿಮೆಯಂ ಯಕ್ಷಯಕ್ಷಿ ಸಹಿತವಾಗಿ ಮಾಡಿಸಿ ಆ ಚತುರ್ದಶಿಯ ದಿನಂ ಮೇಣ್ ಭಾದ್ರಪದಶುದ್ಧ ಚತುರ್ದಶಿಯೊಳು ಪ್ರತಿಷ್ಠಾವಿಧಾನದಿಂ ಅಂಕುರಾರ್ಪಣೆ ಜಲಾಧಿವಾಸನೆ ಸಹಿತ ವೇದಿಕೆಯನಿಕ್ಕಿ ಭೃಂಗಾರಚ್ಛತ್ರ ಚಾಮರ ಧ್ವಜ ಪತಾಕೆಗಳಂ ಮಾಡಿಸಿ ಹೋಮ ಸಹಿತ ಶುಭದಿನದಲ್ಲಿ ಮುಹೂರ್ತದಿ ಪ್ರತಿಷ್ಠೆಯಂ ಮಾಡಿಸುವುದು, ಆ ಚತುರ್ದಶಿಯ ಪರ್ಯಂತರ ಮಹಾಭಿಷೇಕಪೂಜೆಯಂ ಮಾಡಿಸಿ ಆ ಚತುರ್ದಶಿಯ ದಿನ ಮೇಣ್ ಭಾದ್ರಪದ ಚತುರ್ದಶಿಯಲ್ಲು ದಂತಧಾವನ ಸ್ನಾನಾದಿಗಳಿಂ ಶುಚಿರ್ಭೂತರಾಗಿ ಬಂದು ಅಭಿಷೇಕಾಷ್ಟವಿಧಾರ್ಚನೆ ದ್ರವ್ಯಂ ಬೆರಸು ಚೈತ್ಯಾಲಯಕ್ಕೆ ಬಂದು ತ್ರಿಃ ಪ್ರದಕ್ಷಿಣಂಗೆಯ್ದು ನಿಷಿದ್ಧಿಯಿಂದೊಳಗಂ ಪೊಕ್ಕು ದರ್ಶನ ಸ್ತುತಿಪೂರ್ವಕವಾಗಿ ಈರ್ಯಾಪಥ ಶುದ್ಧಿಯಂ ಮಾಡಿ ಮಹಾವಿಭವದಿಂ ಮಂಟಪಮನಲಂಕರಿಸಿ ದೇವರಿಗೆ ಮಹಾಭಿಷೇಕ ಪೂಜೆಯಂ ಮಾಡಿಸಿ ಪೂರ್ವಕ್ರಮದೊಳೆ ಯಂತ್ರಮನುದ್ಧರಿಸಿ ಆ ಯಂತ್ರದ ಮುಂದೆ ತಾನು ಹೊಸದಾಗಿ ಪ್ರತಿಷ್ಠೆಯಂ ಮಾಡಿಸಿದ ಅನಂತನಾಥನ ಪ್ರತಿಮೆಯಂ ಸ್ಥಾಪ್ಯಂ ಮಾಡಿ, ೧೪ ಜಲಧಾರೆ, ೧೪ ಗಂಧ, ೧೪ ಅಕ್ಷತಪುಂಜ, ೧೪ ಬಗೆಯ ಪುಷ್ಪ, ೧೪ ಬಗೆಯ ಭಕ್ಷ್ಯ, ೧೪ ಕರ್ಪೂರದಾರತಿ, ೧೪ ಕಾಲಾಗರು ಧೂಪ ೧೪ ಪ್ರಕಾರದ ಫಲಂಗಳುಮಂ, ಪುಷ್ಪಂಗಳಮುಂ ಪ್ರತ್ಯೇಕ ಭಕ್ಷ್ಯಂಗಳುಮಂ ಪ್ರತ್ಯೇಕ ಹದಿನಾಲ್ಕು ಹದಿನಾಲ್ಕು ಅಥವಾ ಏಳು ಏಳು ಮೇಣ್ ಮೂರು ಮೂರು ಈ ಮರ್ಯಾದೆಯಲಿ ತಂತಮ್ಮ ಶಕ್ತ್ಯಾನುಸಾರದಿಂ ಹಿಂದೆ ಹೇಳಿದ ಮಂತ್ರಂಗಳಿಂದಷ್ಟವಿಧಾರ್ಚನೆಯಂ

ಮಾಡಿ ಅರ್ಘ್ಯದ ಮಂತ್ರದಿಂ ಅರ್ಘ್ಯಮನೆತ್ತುವುದು. ತದನಂತರಂ ಶ್ರುತಕ್ಕೆ ಪ್ರತ್ಯೇಕ ನಾಲ್ಕು ನಾಲ್ಕು ತೆರದ ಪುಷ್ಪ ಫಲ ಭಕ್ಷ್ಯಂಗಳಿಂದಷ್ಟವಿಧಾರ್ಚನೆಯಂ ಮಾಡಿ ಪೂರ್ವಾಚಾರ್ಯರ್ಗೆ ಮೂರು ತೆರದ ಪಕ್ವಾನ್ನಗಳಿಂ ಮೂರು ತೆರದ ಅಷ್ಟ ವಿಧಾರ್ಚನೆಯಂ ಮಾಡಿ ಅರ್ಘ್ಯಮಂತ್ರದಿಂದರ್ಘ್ಯಮನೆತ್ತುವುದು. ಮುನ್ನ ಕಟ್ಟಿದ ಹಳೆದಾರವಂ ಮಂತ್ರಮನುಚ್ಚರಿಸುತ್ತ ಬಿಚ್ಚಿ ಯಂತ್ರದ ಮುಂದೆ ಇರಿಸುವುದು. ಬಳಿಕ ಒಂದೆರಡು ಬಾಯಿನವುಂ ಕೊಡುವುದು. ತದನಂತರಂ ಋಷಿ ಸಮುದಾಯವುಂ ವಂದಿಸಿ, ಚತುರ್ದಶಿಯುಪವಾಸಮಂ ಕೈಕೊಂಬುದು. ಬ್ರಹ್ಮಚರ್ಯ ಮೊದಲಾಗಿ ಪಂಚ ವ್ರತಗಳನ್ನು ದಿಗ್ವಿರತಿ ದೇಶವಿರತಿ ಮೊದಲಾದ ವ್ರತನಿಯಮದಿಂ ದ್ವಾದಶವ್ರತಮಂ ಕೈಕೊಂಬುದು. ಆ ರಾತ್ರಿ ನಾಲ್ಕು ಜಾವಕ್ಕಂ ನಾಲ್ಕು ಅಭಿಷೇಕಮಂ ಹಿಂದೆ ಹೇಳಿದ ಕ್ರಮದಿಂ ನಾಲ್ಕು ಅಷ್ಟವಿಧಾರ್ಚನೆಯಂ ತೂರ್ಯತ್ರಯ ಸಮನ್ವಿತವಾಗಿ ಪರಮಾನಂದದಿಂ ಮಾಡಿ ಜಾಗರಮಿರ್ದು ಕಥೆಯಂ ಕೇಳ್ದು ಮರುದಿನ ದೇವರಿಗೆ ಮಹಾವಿಭವದಿಂ ಮಹಾಭಿಷೇಕಾಷ್ಟವಿಧಾರ್ಚನೆಯಂ ಮಾಡಿ ಶ್ರುತ ಗುರು ಪೂಜೆಯಂ ಮಾಡಿ ಬಳಿಕ್ಕಂ ೧೪ ಹಡಲಿಗೆಯೊಳು ಪ್ರತ್ಯೇಕವಾಗಿ ೧೪ ಬಗೆಯ ಭಕ್ಷ್ಯ, ೧೪ ಬಗೆಯ ಫಲ, ೧೪ ಬಗೆಯ ಪುಷ್ಪ ಒಂದೊಂದು ಬಗೆಗೆ ಹದಿನಾಲ್ಕು ಹದಿನಾಲ್ಕು ಅಥವಾ ಏಳು ಏಳು ಮೂರು ಮೂರು ಫಲಪುಷ್ಪ ಭಕ್ಷ್ಯಗಳನಿಕ್ಕಿ ೧೪ ಅಡಕೆ ೧೪ ಎಲೆ ಕುಂದದೆ ಗಂಧಾಕ್ಷತೆ ಸಹಿತಂ ಮೂನೂಲಂ ಸುತ್ತಿ ದಕ್ಷಿಣೆ ಸಹಿತಂ ೧೪ ಸಮ್ಯಗ್ದೃಷ್ಟಿಗಳಿಗೆ ವಿನಯ ಪುರಸ್ಸರವಾಗಿ ಬಾಯಿನವಂ ಮಂತ್ರಮನುಚ್ಚರಿಸುತ್ತ ಕೊಡುವುದು. ದೇವರ ನಿತ್ಯಮಹಕ್ಕೆ ಕ್ಷೇತ್ರಂಗಳಂ ಬಿಡಿಸಿ ಉಪಕರಣಂಗಳಂ ಮಾಡಿಸಿ ಕೊಡುವುದು. ನಿತ್ಯಾಭಿಷೇಕಕ್ಕೆ ಕಪಿಲೆಗಳಂ ಕೊಡುವುದು. ೧೪ ತಂಡ ಋಷಿಯರ್ಗೆ ತಟ್ಟು, ಕುಂಚ, ಕಮಂಡಲು, ಕವಣೆಕೋಲು, ಪುಸ್ತಕ, ಶ್ರುತ ಪಾವಡೆ, ಪಟ್ಟನೂಲು ಸಹಿತಂ ಕೊಡುವುದು. ಅಜ್ಜಿಯರಿಂಗೆ ಬ್ರಹ್ಮಚಾರಿಗಳಿಗೆ ಉಡುಪಂ ಕೊಡುವುದು. ೧೪ ಶ್ರಾವಕ ಮಿಥುನಕ್ಕೆ ಉಣಲಿಕ್ಕಿ ಉಡಕೊಡುವುದು. ಚಾತುರ್ವರ್ಣಕ್ಕೆ ಆಹಾರ ದಾನ ಪುರಸ್ಸರವಾಗಿ ದೀನಾನಾಥರ್ಗೆ ಯಥೋಚಿತಂ ಮನ್ನಿಸುವುದು. ಈ ಕ್ರಮದಿಂ ಉತ್ತಮ, ಮಧ್ಯಮ, ಜಘನ್ಯ ಕನಿಷ್ಠದಿಂ ಪದಿನಾಲ್ಕು ಏಳು ಮೂರು ಒಂದು ತಂಡ ಋಷಿಯರ್ಗೆ ಒಂದು ಮಿಥುನಕ್ಕೆ ಶಕ್ತ್ಯನುಸರಿತು ದಾನಮಂ ಮಾಡುವುದು. ಇನಿತಕ್ಕಾರದಿರ್ದೊಡೆ ಮುನ್ನ ಪೇಳ್ದ ಕಥಕನಂ ಪೂಜಿಸುವುದು. ಈ ನೋಂಪಿಯಂ ಬಡವರೊಡೆಯರೆನ್ನದೆ ನೋಂಪುವುದು. ಅಥವಾ ಯಥಾಶಕ್ತಿಯಿಂ ಹದಿನಾಲ್ಕು ತೀರ್ಥಕರ ಪೂಜೆಯಂ ಮಾಡಿ ದಾರಮಂ ಕಟ್ಟಿಕೊಳ್ಳುವುದೆಂದು ಗೌತಮ ಸ್ವಾಮಿಗಳು ಶ್ರೇಣಿಕ ಮಹಾರಾಜಂಗಂ ಚೇಳಿನೀಮಹಾದೇವಿಗಂ ಪೇಳಿ ಕೇಳ್ದು, ಮತ್ತಮಾ ಮುನ್ನ ನೋಂತವರ ಕಥೆಯಂ ಬೆಸಸಿಮೆನೆ ಮುನೀಂದ್ರೋತ್ತಮರಿಂತೆಂದರು.

ಈ ಜಂಬೂದ್ವೀಪದ ಭರತಕ್ಷೇತ್ರದೊಳು ಕುರುಜಾಂಗಲಮೆಂಬುದು ವಿಷಯಂ, ಹಸ್ತಿನಾಪುರಮೆಂಬುದು ಪತ್ತನಮದನಾಳ್ವಂ ಶಾಂತನೆಂಬರಸಂ, ಆತನರಸಿ ವಿಮಳಗಂಗೆ ಎಂಬಳಾಪುರದ ರಾಜಶ್ರೇಷ್ಠಿ ಸುದರ್ಶನನೆಂಬನಾತನ ಭಾರ್ಯೆ ಸನ್ಮತಿ ಎಂಬಳವರ್ಗೆ

ಗುಣವತಿ ಎಂಬ ಮಗಳು ಪುಟ್ಟಿ ಶಿಶುತ್ವಮಂ ಪತ್ತುವಿಟ್ಟು ಆ ಪೊಳಲ ಕಮನೀಯಾಂಕ ನೆಂಬ ಚೈತ್ಯಾಲಯದೊಳು ಸುಪ್ರಭಾರತಿಯೆಂಬಜ್ಜಿಯರ ನಿಕಟದೊಳು ಅಕ್ಷರಾ ಭ್ಯಾಸಮಂ ಮಾಡಿ.

ಶ್ಲೋಕ || ಮೂಢತ್ರಯಂ ಮದಾಶ್ಚಾಷ್ಟೌ ತಥಾನಾಯತನಾನಿ ಷಟ್
ಅಷ್ಟೌ ಶಂಕಾದಯಶ್ಚೇತಿ ದೃಗ್ದೋಷಾಃ ಪಂಚವಿಂಶತಿ

ಈ ರೀತಿಯಾಗಿ ಇಪ್ಪತ್ತೈದು ಮಲರಹಿತವಾದ ಸಮ್ಯಕ್ತ್ವದೊಳಿರಲು

ಶ್ಲೋಕ || ಅಣುವ್ರತಾನಿ ಪಂಚೈವ ತ್ರಿಃ ಪ್ರಕಾರಂ ಗುಣವ್ರತಂ
ಶಿಕ್ಷಾವ್ರತಾನಿ ಚತ್ವಾರೀತ್ಯೇತದ್ದ್ವಾದಶಧಾ ವ್ರತಂ

ಎಂಬ ವ್ರತತ್ರಯದೊಳನೂನಮಾಗಿ ನೆಗಳುತ್ತಮಿರಲೊಂದು ದಿವಸಂ ಸುಪ್ರ ಭಾವತಿಯರೀ ನೋಂಪಿಯಂ ಭವ್ಯಜನಂಗಳಿಗೆ ನೋನಿಸುತ್ತಮಿರೆ ಗುಣವತಿ ಕಂಡೀ ನೋಂಪಿಯ ಪೆಸರೇನೆನೆ ಅವರಿಂತೆಂದರತಿಶಯ ಕೇವಲಿಗಳಪ್ಪ ಅನಂತನಾಥರ ನೋಂಪಿ ಯನೆ ಅವಳದರ ವಿಧಾನಮೆಂತೆನಲು ಮುಂಪೇಳ್ದ ವಿಧಾನದಿಂ ಸವಿಸ್ತರಂ ಪೇಳ್ದು ಮತ್ತ ಮಿಂತೆಂದರು.

ವೃಷಭತೀರ್ಥಕರ ಸಮವಸರಣಕ್ಕೆ ಭರತೇಶ್ವರ ಚಕ್ರವರ್ತಿ ಬಂದು ಗಂಧಕು ಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸಾಷ್ಟಾಂಗನಾಗಿ ಪೊಡಮಟ್ಟು ಕೈಗಳಂ ಮುಗಿದು.

ಶರಣಾಗು ಕಂತುಮದಹರ
ಶರಣಾಗಮರೇಂದ್ರವಂದ್ಯನಿರುಪಮಮಹಿಮಾ
ಶರಣಾಗನಂತಬೋಧಾ
ಶರಣಾಗೆನಗಾವಭವದೊಳಂ ವೃಷಭಜಿನಾ

ಎಂದನೇಕ ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿ ಗಣಧರ ದೇವಾದಿ ಮುನಿಸಮುದಾಯಮಂ ವಂದಿಸಿ ಸ್ವಯೋಗ್ಯ ಕೋಷ್ಠದೊಳ್ಕುಳ್ಳಿರ್ದು ನಿರ್ಮಳ ಚಿತ್ತದಿಂ ಧರ್ಮಶ್ರವಣಮಂ ಮಾಡಿ ತದನಂತರಂ ವೃಷಭತೀರ್ಥಂಕರರ ಶ್ರೀಪಾದ ಸನ್ನಿ ಧಿಯೊಳು ಭರತೇಶ್ವರಂ ತಾನವಧಿಜ್ಞಾನಸಂಪನ್ನನಪ್ಪುದರಿಂ ಪ್ರಥಮ ಗಣಧರರಾಹ ವೃಷ ಭಸೇನರಿಗೆ ಕರಕಮಲಂಗಳಂ ಮುಗಿದು ಎಲೈ ಸ್ವಾಮಿ ! ಎನ್ನ ಚಕ್ರಭಂಗಮಾವಕಾರಣ ದಿಂದಾದುದು ವೃಷಭಾದ್ರಿಯೊಳೆನ್ನಂಕಮಾಲೆಗೆ ಎಡೆಯಾಗದ ಕಾರಣಮೇನೆನೆ ಅವರು ದುಂದುಭಿಗಭೀರ ಧ್ವನಿಯೊಳಿಂತೆಂದು ಪೇಳ್ದರು. ಅಸಂಖ್ಯಾತೋತ್ಸರ್ಪಣಾವಸರ್ಪಣ ಕಾಲಗಳು ಪೋದಡೊಂದು ಹುಂಡಾವಸರ್ಪಣಮೆಂಬ ಕಾಲಂ ಬಕ್ಕುಂ. ಹುಂಡಾವಸರ್ಪಣ ಕಾಲದೋಷದಿಂತಾದುದೆನೆ ಆ ಕಾಲ ದೋಷಪರಿಹಾರಾರ್ಥಮಾಗಿ ಅನಂತಸುಖಮ ಪ್ಪುದಾವದಾನೊಂದು ನೋಂಪಿಯಂ ಬೆಸಸಿಮೆನಲವರಿಂತೆಂದು ಪೇಳ್ದರು. ಈ ಆದಿ

ತೀರ್ಥೇಶ್ವರರಿಗೆ ಪದಿನಾಲ್ಕನೆಯ ತೀರ್ಥಕರರಪ್ಪ ಅನಂತನಾಥರೆಂಬ ಜಿನೇಶ್ವರರು ಕೌಸಲ ದೇಶದಯೋಧ್ಯಾಪುರಮನಾಳ್ವ ಸಿಂಹಸೇನ ಮಹಾರಾಜಂಗಂ ಆತನರಸಿ ಲಕ್ಷ್ಮೀಮತಿ ಮಹಾದೇವಿಗಂ ಪುಟ್ಟಿಗುಂ. ಆ ಪರಮೇಶ್ವರೋದಯದೊಳ್ ಹರಿಘಂಟಾ ಭೇರಿ ಶಂಖ ವಂಗಳ್ ಜ್ಯೋತಿಷ್ಕಕಲ್ಪಭವನ ವ್ಯಂತರರೆಂಬ ಚತುರ್ವಿಧಾಮರರ ಭವನಂಗಳೊಳ್ ನೆಗಳ ಲಮರಲೋಕಂಗಳಾಶ್ಚರ್ಯಂಬಡಲಮರೇಂದ್ರನಾಜ್ಞೆಯಿಂ ಧನದಂ ಪಂಚರತ್ನಸಮನ್ವಿತ ಮಪ್ಪ ಸುವರ್ಣವೃಷ್ಟಿಯಂ ಮುನ್ನರುದಿಂಗಳುಂಟೆನೆ ದಿನಂ ಪ್ರತಿಯೊಳು ಮೂರು ಸಂಜೆ ಯೊಳು ಮೂರುವರೆ ಕೋಟಿದ್ರವ್ಯಮಂ ಸುರಿಯಲಾ ಪುರಜನಂಗಳೆಲ್ಲ ಅನಂತಸುಖಿಗಳಾಗಿ ಕ್ಷಾಮಡಾಮರಂಗಳಿಲ್ಲದಿಪ್ಪುದರಿಂದಾ ಪರಮೇಶ್ವರಂ ಅನಂತ ಜ್ಞಾನಾದಿ ಗುಣಗಳಿಂದಧಿ ಕನಪ್ಪುದರಿಂ.

ಶ್ಲೋಕ ॥ ಅನಂತದರ್ಶನಜ್ಞಾನಂ ಕರ್ಮಾದಿ ಕ್ಷಯಕಾರಣಂ
ಯಸ್ಯಾನಂತಸುಖಂ ವೀರ್ಯಂ ಸೋऽನಂತಾನಂತಸದ್ಗುಣಃ

ವ ॥ ಎಂಬುದರಿಂದನಂತತೀರ್ಥೇಶ್ವರನೆಂಬ ಪೆಸರಿಂಗೊಡೆಯಂ ಪೊಂಬಣ್ಣನುಂ ಮುವತ್ತುಲಕ್ಷ ವರ್ಷಾಯುಷ್ಯನುಂ, ೫೦ ಬಿಲ್ಲಿಡಿಯನುಂ, ರಾಜ್ಯಾವಸಾನದೊಳ್ ವೈರಾಗ್ಯಪರನಾಗಿ ದೀಕ್ಷೆಯಂ ಕೈಕೊಂಡು ಪರಮಾತ್ಮಧ್ಯಾನದಿಂ ಘಾತಿಕರ್ಮಂಗಳಂ ಕೆಡಿಸಿ ಕೇವಲಜ್ಞಾನೋದಯಮಾಗಲುಂ ಧನದ ನಿರ್ಮಿತ ಸಮವಸರಣ ಮಧ್ಯದೊಳು ಸಿಂಹಪೀಠದಮೇಲೆ ಸಹಸ್ರದಳಪದ್ಮ ಕರ್ಣಿಕೆಯಂ ನಾಲ್ವೆರಳಂತರಂ ಮುಟ್ಟದೆ ವಪ್ಪುತ್ತಂ ಇರಲು ಜಯಗಣಧರರುಂ ಕರಡೀಲಾಂಛನಮುಂ ಪಾತಾಳಯಕ್ಷನುಂ ಅನಂತಮತಿಯ ಕ್ಷಿಯುಂ ಬೆರಸೊಪ್ಪುತ್ತಿರಲ್ಕಾ ಕಾಲದೊಳು ಸುಪ್ರಭನೆಂಬ ಬಲದೇವನುಂ ಪುರುಷೋತ್ತಮ ನೆಂಬ ವಾಸುದೇವನುಂ ೪ ನೆಯ ಬಲನಾರಾಯಣರಾಗಿ ತಮಗಿದಿರ್ಚಿದ ನಿಭಕುಂಭನೆಂಬ ಪ್ರತಿವಾಸುದೇವನಂ ರಣರಂಗದಲ್ಲಿ ಕಾದಿ ಗೆಲ್ದು ಬಂದು ತ್ರಿಖಂಡಮಂಡಲಕ್ಕಧಿಪತಿಗಳಾಗಿ ಅನಂತನಾಥನ ಸಮವಸರಣಮಂ ಪೊಕ್ಕು ಪರಮೇಶ್ವರನಂ ಸ್ತುತಿಶತ ಸಹಸ್ರಗಳಿಂ ಸ್ತುತಿಸಿ ಅನೇಕಾರ್ಚನಾದ್ರವ್ಯಗಳಿಂದರ್ಚಿಸಿ ತದನಂತರಂ ಗಣಧರದೇವಾದಿ ಮುನಿನಿಕರಮಂ ವಂದಿಸಿ, ಉಚಿತಾಸನದೊಳ್ ಕುಳ್ಳಿರ್ದು ಶುಭಚಿತ್ತದಿಂ ಧರ್ಮಶ್ರವಣಮಂ ಕೇಳ್ದು ತದ ನಂತರಂ ವಂದಿಸಿ ಗಣಧರರುಪದೇಶದಿಂದೀನೋಂಪಿಯಂ ನೋತು ಉಜ್ಜೈಸುವರೆಂದು ವೃಷಭಸೇನಗಣಧರರು ಬೆಸಸೆ ಕೇಳ್ದು ನೋಂಪಿಯಂ ನೋಂತುಜ್ಜೈಸುವ ಕ್ರಮಮಂ ಬೆಸಸೆ ಕೇಳ್ದು ಸಂತೋಷಮಂಬಟ್ಟು

ಜಿನರಂ ಬೀಳ್ಕೊಂಡು ಮತ್ತಂ ಸಕಲಗಣಧರರ್ಗಾಗತಾನಮ್ರನಾದಂ
ದೆನಿಸುಂ ವಾತ್ಸಲ್ಯಭಾಷಾನ್ವಿತನತುಳ ಗಜಾರೂಢನಾಗಲ್ಕೆ ಶಂಖ
ಸ್ವನಮುಂ ಬಂಭಾಮೃದಂಗಧ್ವನಿಗಳೆಸೆಯೆ ಸಚ್ಚಾಮರಾನೀಕಮೊಪ್ಪಲ್
ಮನುಜೇಂದ್ರಂ ಬಂದಯೋಧ್ಯಾಪುರಮನನುಪಮಂ ಪೊಕ್ಕನುತ್ಸಾಹದಿಂದಂ

ವ॥ ಅಂತು ಪುರಮನರಮನೆಯುಂ ಪೊಕ್ಕು ಭಾದ್ರಪದಶುದ್ಧ ಚತುರ್ದಶಿಯಂದು ರಾಜಾಧಿರಾಜಂ ವೃಷಭಸೇನ ಗಣಧರರ್ಬೆಸಸಿದಂದದಿಂ ನೋಂತುಜ್ಜವಣೆಯುಂ ಮಾಳ್ಪಾಗಳೇಕಾದಶೋಪಾಸಕ ನಿಕಾಯಯುಮಂ ಬರಿಸಿ ಅಂಕುರಾರ್ಪಣೆ ನಿಮಿತ್ತಂ ಮಾಡಿದಂಕುರಂಗಳಂ ಪಸರಿಸಲು ಅಂಕುರಂಗಳಂ ಮೆಟ್ಟಿ ಬಾರವೆನೆ ಅವಂ ತೆಗೆಯಿಸಿಯವರಂ ಬರಿಸಿ ಕೇಳ್ದೊಡೆ ಸಂಯಮಿಗಳಂಕುರಂಗಳಂ ಮುಟ್ಟಲಾಗದೆನೆ ಇವರು ಸಂಯಮಕ್ಕೆ ಯೋಗ್ಯರೆಂದರಿದು ಲೆಕ್ಕಂ ಮಾಡಲವರು ಮುವತ್ತಿಚ್ಛಾಸಿರವಾಗೆ ಅವರಂ ದಾನದೀಕ್ಷೆ ಯೋಗ್ಯರಂ ಮಾಡಿ ತ್ರಿಗುಣನವ ಪ್ರಮಾಣಮಪ್ಪ ತಾವರೆಯ ತಂತುವಿನಿಂ ಇಪ್ಪತ್ತೇಳೆಳೆಯ ದಾರಮಂ ಮಾಡಿ ರತ್ನತ್ರಯದ್ಯೋತಿಕರುಮೆಂದು

ಶ್ಲೋಕ ॥ ಕೇವಲಜ್ಞಾನ ಸಾಮ್ರಾಜ್ಯ ಯೌವರಾಜ್ಯಪದಾಪ್ತಯೇ
ರತ್ನತ್ರಯಮಿದಂ ಸೂತ್ರಂ ಕಂಠಾಭರಣಮಸ್ತು ವಃ

ಎಂದಿವಂ ಕೊರಳೊಳಿಕ್ಕಿ ಬಹುರತ್ನಸುವರ್ಣ ಸಮೇತಂ ಬಾಯಿನಮನಿತ್ತು ಭರತೇಶ್ವರ ಚಕ್ರವರ್ತಿ ನೋಂತನೆಂದು ಸುಪ್ರಭಾರತಿಯರ್ಬೆಸಸೆ ಕೇಳ್ದು ಅನಂತನಾಥ ಸ್ವಾಮಿಯ ನೋಂಪಿಯಂ ಗುಣವತಿ ಮಹಾದೇವಿಯುಂ ಕೈಕೊಂಡು ನೋನುತ್ತಮಿರಲತ್ತ ಕಾಶ್ಮೀರ ವಿಷಯದ ಚಿತ್ರಾಂಗ ಪುರಮನಾಳ್ವ ಉತ್ತುಂಗ ಭುಜಬಲ ಮಹಾರಾಜಂ ಗುಣವತಿ ಮಹಾದೇವಿಯು ಹಾವ ಭಾವ ವಿಲಾಸವಿಭ್ರಮಗಳಿಂ ಪ್ರೌಢೆಯಪ್ಪುದಂ ಕೇಳ್ದಾಸಕ್ತಚಿತ್ತನಾಗಿ ತನ್ನ ಮಂತ್ರಿಗಳಂ ಸುದರ್ಶನಶೆಟ್ಟಿಯಲ್ಲಿಗೆ ಕಂಠೋಕ್ತಿಯಿಂ ಬೇಡಿಸಲವರೊಡನೆ ನಿಮ್ಮರಸಂ ಸಮ್ಯಗ್ದೃಷ್ಟಿಯಲ್ಲಪ್ಪುದರಿಂ ಎಮ್ಮೊಳು ಕೊಳ್ಳು ಕೊಡುಗೆಗೆ ಯೋಗ್ಯರಲ್ಲೆಂದು ನಿರಾಕರಿಸಿ ಕಳೆಯೆ ಅವರ್ಭಂಗಿತರಾಗಿ ಪೋಗಿ ತಮ್ಮೊಡೆಯಂಗೆ ಪೇಳೆ ಕೇಳ್ದು ಕನ್ಯಾಲೋಭದಿಂ ತನ್ನ ಭೃತ್ಯರಪ್ಪ ವಿದ್ಯುನ್ಮಾಲಿಯುಮನಂತಮಾಲಿಯುಮೆಂಬ ಮಾಯಾವಿಗಳಂ ಕಳುಪಲವರ್ ಮಹಾಶ್ರಾವಕವೇಷಮುಂ ಕೈಕೊಂಡು ಗುಣವತಿ ಆಡುತಿರ್ದ ಚೈತ್ಯಾಲಯಕ್ಕೆ ಬಂದು ಆಕೆ ಸಮಯವಾತ್ಸಲ್ಯನಿಮಿತ್ತಮಿದಿರೆದ್ದು ಇಚ್ಛಾಕಾರಮೆಂದು ನೀವಿಂದೆಮಗಭ್ಯಾಗತರಾಗಿಮೆನೆ ಅವರಿಂತೆಂದರು. ಇಂದುಪವಾಸಮೆನೆ ಪರ್ವಾಷ್ಟಮಿಯಲ್ಲ ಉಪವಾಸಕ್ಕೆ ಕಾರಣಮೇನೆನೆ ಈ ಪುರದ ಬಹಿರ್ಭಾಗದೊಳಾನಂದಕರಮೆಂಬ ತೀರ್ಥಮುಂಟು, ಆ ತೀರ್ಥವಂದನೆಯಂ ಮಾಡಿ ಬಂದು ಮರುದಿವಸಂ ಪಾರಣೆಯಂ ಮಾಡಿದಪೆವುಯೆನೆ, ಕರಮೊಳ್ಳಿತ್ತು ತೀರ್ಥವಂದನೆಗೆ ನಿಮ್ಮೊಡನೆ ನಾನು ಬಂದಪೆನೆನೆ, ಕರಮೊಳ್ಳಿತ್ತಾಯಿತು ಬನ್ನಿಮೆನೆ, ಗುಣವತಿ ಸಹಿತಂ ಪೋಗಲವರು ತಮ್ಮೊಡೆಯಂಗೊಪ್ಪಿಸಲು, ಅವರಿಗೆ ಅಂಗಚಿತ್ತಮುಂ ಕೊಟ್ಟು, ತದನಂತರಂ ಕನ್ಯಾರತ್ನಮೆಂತು ತನ್ನ ವಶಮಾಡಲಾರದಿರ್ದು ಸುದರ್ಶನಶೆಟ್ಟಿಯಲ್ಲಿಗೆ ದೂತರಂ ಕಳುಪೆ ತಮ್ಮ ಮಗಳೆಮ್ಮ ಸಮೀಪಕ್ಕೆ ಬಂದಿರ್ದಪಳು. ಎಮಗೆ ತಾವು ಬಂದು ಮುಂದಿಟ್ಟು ಮದುವೆಯಂ ಮಾಳ್ಪುದೆಂದು ಕಳುಪಿದರೆಂದು ಪೇಳೆ ಕೇಳ್ದಾ ಪೊಳಲಿಂಗೆ ಸುದರ್ಶನಶೆಟ್ಟಿ ಬಂದು ಮಹಾ

ವಿಭೂತಿಯಂ ಮದುವೆಯಂ ಮಾಡಿ ಪೋದನಿತ್ತ ಕೆಲವಾನುದಿವಸಕ್ಕೆ ನೋಂಪಿಯ ದಿನಂಬರೆ ಗುಣವತಿಮಹಾದೇವಿ ತನ್ನರಸಂಗಿಂತೆಂದಳು. ಎನಗನಂತನಾಥಸ್ವಾಮಿ ನೋಂಪಿ ಯುಂಟೆನಲಾ ನೋಂಪಿಗೆ ತಕ್ಕ ಸಮಕಟ್ಟಂ ಕುಡಲ್ವೇಳ್ಕೆನೆ, ತಾನೊಲವುನಪ್ಪುದರಿಂ, ಭಂಡಾರಿಗನಂ ಬರಿಸಿ ಇವರೇನಂ ಬೇಡಿದರದಂ ಕೊಡುವುದೆನೆ, ಮಹಾಪ್ರಸಾದವೆಂದು ಕುಡೆ, ಗುಣವತಿಮಹಾದೇವಿ ಜಿನೇಶ್ವರನನನೇಕಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿ, ಮಹಾಮಹಿಮೆಯಿಂ ನೋಂತು ದಾನ ಪೂಜೆಯಂ ಮಾಡಿ ಮತ್ತಂ ಮಂತ್ರಪೂರ್ವಕಂ ದಾರಮಂ ಕಟ್ಟಿಕೊಂಡು ಸುಖದಿಂದಿರೆ ಅರಸನ ಸೂಳ್ಗೆ ಪೋಗಿ ಅರಸಂ ಗುಣವತಿಯ ತೋಳೊಳು ಕಟ್ಟಿರ್ದ ದಾರಮಂ ಕಂಡಿದೇನೆಂದು ಬೆಸಗೊಳ್ವುದುಂ ಆ ಗುಣವತಿ ಇಂತೆಂದು ಪೇಳ್ದಪಳು.

ಇದು ಅನಂತನಾಥಸ್ವಾಮಿಯ ದಾರಮೆನೆ ಅರಸಂ ನಿನಗೆ ಸವಣರು ಕೊಟ್ಟ ವಶೀಕರಣದ ದಾರಮೆಂದು ಅವಿವೇಕದಿಂ ಸಜ್ಜೆಯೊಳಿರ್ದ ಧೂಪಘಟದೊಳಿಕ್ಕಿದೊಡೆ ದುಮ್ಮಾನ ಚಿತ್ತಮಾಗಿ ಪತಿಭಕ್ತೆಯಪ್ಪುದರಿಂದುಸುರದಿರೆ, ಕೆಲವಾನು ದಿವಸದಿಂ ತನ್ನ ದಾಯಾದ್ಯರೆತ್ತಿ ಬಂದು ಕಾದಿ ಆನೆ ಕುದುರೆ ಸೇನೆ ಭಂಡಾರಮಂ ಸೆಳೆದುಕೊಂಡುಯೆಬ್ಬೆಟ್ಟಿ ಕಳೆಯೆ ರಾಜ್ಯಭ್ರಷ್ಟನಾಗಿ ಗುಣವತಿಮಹಾದೇವಿವೆರಸು ಪುರದ ಕೆಳಗಣ ಮಹಾ ಗಿರಿಯೊಳು ಅಲ್ಲಿ ಕಲ್ಲು ನೆಲೆಯೊಳಿರ್ದ ಮರ್ಷಿಯರಂ ಕಂಡು ಅರಸನಿಂತೆಂದನವರೆನ್ನ ರಾಜ್ಯ ಕೆಟ್ಟವೃತ್ತಾಂತಮಂ ಪೇಳ್ವಲ್ಲಡೆ ಪೊಡೆಮಡುವೆನಲ್ಲದೊಡೆ ಪೊಡಮಡೆನೆಂದು ತನ್ನ ಮನದೊಳು ನೆನೆಯುತ್ತಮವರ ಸಮಿಾಪಕ್ಕೆ ಬರೆ ಅವರು ಆತ್ಮಧ್ಯಾನಮಂ ನಿಷ್ಠಾಪಿಸಿ ಕುಳ್ಳಿರ್ದು ತದನಂತರಂ ಮನಃಪರ್ಯಯಜ್ಞಾನಿಗಳಪ್ಪುದರಿಂ ತಮ್ಮ ಸಮಿಾಪಕ್ಕೆ ಬಂದಾತಂ ಆಸನ್ನಭವ್ಯನೆಂದು ಗುಣವಂತನಕ್ಕುಮೆಂದರಿದು ಇರ್ಪನ್ನೆಗಂ ಗುಣವತಿ ಮಹಾದೇವಿ ಬಂದು ಸಾಷ್ಟಾಂಗವೆರಗಿ ಗುರುಭಕ್ತಿ ಪೂರ್ವಕಂ ನಮೋಸ್ತು ಮಾಡಲವರು ಹರಸಿ ಅರಸಂಗಿಂತೆಂದರು. ಎಲೆ ತುಂಗಭುಜಬಲ ಮಹಾರಾಜ ನಿಮ್ಮ ಮನದೊಳು ಇವರೆನ್ನ ರಾಜ್ಯ ಕೆಟ್ಟಕಾರಣಮಂ ಪೇಳ್ವಲ್ಲಡೆ ಪೊಡಮಡುವೆನಲ್ಲದೊಡೆ ಪೊಡಮಡೆನೆತ್ತುಂ ಬಂದಿರೆನೆ ತುಂಗಭುಜಬಲ ಮಹಾರಾಜಂ ಸಂತೋಷದಿಂ ಸಾಷ್ಟಾಂಗವೆರಗಿ ಎಲೆ ಸ್ವಾಮಿ ಎನ್ನಮಾವಕಾರಣದಿಂ ಕೆಟ್ಟುದು ? ಮತ್ತಮೆನಗಿನ್ನಾವ ಪುಣ್ಯದಿಂದಕ್ಕುಮೆನಲವರಿಂತೆಂದರು. ಗುಣವತಿ ಮಹಾದೇವಿಯು ಅನಂತನೋಂಪಿಯದಾರಮಂ ಕಟ್ಟಿಕೊಂಡಿರೆ, ನೀನಿದಂ ಸವಣರು ಕೊಟ್ಟ ವಶೀಕರಣದ ದಾರಮೆಂದು ಅಜ್ಞಾನದಿಂ ಪರಿದು ಸುಟ್ಟ ಕಾರಣದಿಂ ಪಾತಾಳಾಯಕ್ಷನುಂ ಅನಂತಮತಿಯಕ್ಷಿಯುಂ ಕೋಪಿಸಿ ನಿನ್ನ ಕೆಡಿಸಿದರೆಂದು ಪೇಳ್ದು ಮತ್ತಾ ತೀರ್ಥಕರ ನೋಂಪಿಯಂ ಮುನ್ನಿನಂತೆ ಸಮ್ಯಕ್ತ್ವಪೂರ್ವಕಂ ಕೈಕೊಂಡು ವ್ರತದೊಳು ದೃಢರಾಗಿ ಹರ್ಷೋತ್ಕೃಷ್ಟಚಿತ್ತರಾಗೆ ಮುಂದೆ ಲೇಸಪ್ಪುದಕ್ಕೆ ಇದೇ ದೃಷ್ಟಾಂತಮೆಂದಿಂತೆಂದರು. ಪಾತಾಳಯಕ್ಷನುಂ ಅನಂತಮತಿ ಯಕ್ಷಿಯುಂ ನಿನಗೆ ಸ್ವಪ್ನದೊಳು ಅನರ್ಘ್ಯ ರತ್ನಂಗಳಂ ಕೊಡುವುದಂ ಕಾಣುವೆಯೆಂದವರ್ಪರಸಿ ಪೋಗೆ ಅರಸನುಂ ಗುಣವತಿಯುಂ ಕೆಲವಾನು ದಿವಸಕ್ಕೆ ಮಹೋದ್ಭವವೆಂಬ ಚೈತ್ಯಾಲಯಕ್ಕೆ ಪೋಗಿ ದೇವರಿಗೆ

ವಂದನೆಯಂ ಮಾಡಿ ನಿದ್ರೆಗೈದಿರ್ಪನ್ನೆಗಂ ಬೆಳಗಪ್ಪ ಜಾವದೊಳು ಶುಭ ಸ್ವಪ್ನಂಗಳಂ ಕಂಡು ಓರ್ರೋರ್ವರ್ಗೆ ಪೇಳೆ ಪಿರಿದುಂ ಸಂತೋಷಮನೆಯ್ದಿರ್ಪನ್ನೆಗಂ ಇತ್ತಲ್ಲತ್ತಮ್ಮ ದಾಯಾದರು ತಮ್ಮೊಳಡಗಿ ಪೋಗಿ ಸಂತಾನವಿಲ್ಲದಿರೆ ಮಂತ್ರಿಗಳುಂ ಪುರಜನರುಂ ತುಂಗ ಭುಜ ಬಲಮಹಾರಾಜನಂ ಗುಣವತಿ ದೇವಿಯುಮನರಸುತ್ತಂ ಬಂದು ಅವರಂ ಕಂಡು ಒಡಗೊಂಡು ಪೋಗಿ ಮಹಾವಿಭೂತಿಯಿಂ ಪೊಳಲಂ ಪುಗಿಸಿ ಶುಭದಿನ ಮುಹೂರ್ತದೊಳು ಪಟ್ಟವಂ ಕಟ್ಟಿ ಮಹಾ ವಿಭವದಿಂ ರಾಜ್ಯಂಗೆಯ್ಯುತ್ತಮಾ ನೋಂಪಿಯಂ ನೋಂತುಜ್ಜವಣೆಯ ಫಲದಿಂ ಪ್ರತ್ಯಂತ ನಿವಾಸಿಗಳಪ್ಪರಸುಗಳೊಳ್ಕಪ್ಪಮಂ ಕೊಳ್ಳುತ್ತಮಿರೆ, ದೇವ ಸನ್ನಿಭರಪ್ಪ ಪಲಂಬರ್ ಕುಮಾರರಂ ಪಡೆದು ಪಲವು ನಿಧಿನಿಧಾನಕ್ಕೊಡೆಯರಾಗಿ ಸಮಸ್ತ ಭೋಗೋಪಭೋಗಂಗಳಂ ಪಲವುಕಾಲಮನುಭವಿಸಿ ತದನಂತರಂ ತುಂಗ ಭುಜಬಲಮಹಾರಾಜಂ ವಿಶಿಷ್ಟ ವೈರಾಗ್ಯ ಪರಾಯಣನಾಗಿ ತನ್ನ ಮಗನಪ್ಪ ವಿಶ್ವಸೇನ ಕುಮಾರಂಗೆ ರಾಜ್ಯಮಂ ಕೊಟ್ಟು ಸಾಗರದತ್ತ ಮುನಿಗಳ ಸಮಕ್ಷಮದೊಳು ಜಿನ ದೀಕ್ಷೆಯಂ ಕೈಕೊಂಡುಗ್ರೋಗ್ರ ತಪದೊಳ್ನೆಗಳ್ದು ಚರಮ ಕಾಲದೊಳು ಸಮಾಧಿವಿಧಿಯಂ ಚತುರಾರಾಧನೆಯಂ ಮಾಡಿ ನಿಃಶಲ್ಯನಾಗಿ ಶರೀರಭಾರಮನಿಳುಪಿ ಅಚ್ಯುತಕಲ್ಪದೊಳು ಪುಟ್ಟಿದಂ

ಇತ್ತ ಗುಣವತಿಮಹಾದೇವಿ ವೈರಾಗ್ಯಪರಾಯಣೆಯಾಗಿ ಕನಕ ಶ್ರೀಕಂತಿಯರ ಸಮಕ್ಷಮದೊಳು ಜಿನದೀಕ್ಷೆಯಂ ಕೈಕೊಂಡು ವಿಶಿಷ್ಟತಪದೊಳು ನೆಗಳ್ದು ಪರಮಾತ್ಮ ಧ್ಯಾನದಿಂದಂತ್ಯಕಾಲದೊಳು ಸಮಾಧಿ ವಿಧಿಯಿಂ ಶರೀರಭಾರವನಿಳುಪಿ ತತ್ಕಲ್ಪದೊಳು ಸಾಮಾನಿಕದೇವನಾಗಿ ಪುಟ್ಟಿ ಇಪ್ಪತ್ತೆರಡು ಸಾಗರೋಪಮ ಕಾಲಂಬರಂ ಶ್ರೀಯನನು ಭವಿಸಿ ಬಂದಿಲ್ಲಿ ಉತ್ಸರ್ಪಿಣೀಕಾಲದೊಳು ಭರತಕ್ಷೇತ್ರದೊಳ್ಪುಟ್ಟಿ ರಾಜ್ಯಶ್ರೀಯನನು ಭವಿಸಿ ವೈರಾಗ್ಯಂ ಪುಟ್ಟಿ ದೀಕ್ಷೆಯಂ ಕೈಕೊಂಡು ಅಷ್ಟಕರ್ಮಂಗಳಂ ನಿರ್ಮೂಲನಂ ಮಾಡಿ ಮೋಕ್ಷಲಕ್ಷ್ಮಿಯನ್ನೈದುವಳೆಂದು ಗೌತಮ ಸ್ವಾಮಿಗಳು ಶ್ರೇಣಿಕಮಹಾರಾಜಂಗಂ ಚೇಳಿನೀಮಹಾದೇವಿಗಂ ಪೇಳೆ ಕೇಳ್ದು ಮತ್ತಮಾ ಮುನಿಗಳಿಂತೆಂದರು. ಆ ದಾರಂ ಕೆಟ್ಟಡೆ ಸಿರಿ ಕೆಡುಗುಂ, ಅದು ಪರಿದೊಡೆ ಆಯುಷ್ಯಂ ಪರಿಗುಂ. ಅದನುದಾಸೀನಂ ಮಾಡೆ ಲೋಕಂ ತನ್ನ ಬಗೆಯುದು ಅದು ಕಾರಣದಿಂ ದಾರಂ ಪೋಗದಂತೆ ಮುನ್ನ ಪೇಳ್ದ ನೋಂಪಿಯ ಕ್ರಮದಿಂ ನೋಂಪುದೆಂದು ಬೆಸಸೆ ಕೇಳ್ದು ಚೇಳಿನೀಮಹಾದೇವಿ ತಾನುಂ ಆ ನೋಂಪಿಯಂ ಕೈಕೊಂಡು ಸರ್ವಜ್ಞಂಗೆ ಪೊಡಮಟ್ಟು ಗಣಧರರ್ಮೊದಲಾದ ಋಷಿ ಸಮುದಾಯಮಂ ವಂದಿಸಿ ಸಮವಸರಣಮಂ ಬಿಟ್ಟು ಪುರಮನರಮನೆಯಂ ಪೊಕ್ಕು ಕ್ರಮದಿಂ ನೋಂಪಿಯಂ ನೋಂತುಜ್ಜೈಸಿ ದೀಕ್ಷೆಯಂ ಧರಿಸಿ ಅಂತ್ಯದೊಳ್ ಸಮಾಧಿವಿಧಿಯಿಂ ಮುಡುಪಿ ಸುರೇಂದ್ರತ್ವಮನೆಯ್ದಿ ಬಂದು ಬಳಿಕಂ ನೃಪತ್ವಮಂ ಪಡೆದು ತಪಕ್ಕೆ ನಿಂದು ನಿರ್ವೃತಿಯೊಳೊಂದವಳು.

ಕಂ॥ ಇಂತೀ ಕಥೆಯ ಪೇಳ್ದೊಡ
ನಂತ ಸುಖಂ ಭವ್ಯಜನಕೆ ಪಡವಾತೇನೋ
ಸಂತತಶಾಶ್ವತ ಸುಖಮನ
ನಂತಜಿನಂ ನೋಂತವರ್ಗೆ ಕೊಡುವನನವರತಂ

ಈ ಕಥೆಯ ಕೇಳ್ದ ಭವ್ಯಾ
ನೀಕಮಿದಂ ಬರೆವ ನೆನೆವ ವಂದಿಪಜನರುಂ
ಲೋಕಂ ಸ್ತುತಿಯಿಸೆ ನೆಗಳ್ದರ
ನೇಕರು ಸುರಲೋಕಮೋಕ್ಷ ಸುಖಮಂ ಪಡೆವರ್

ಈ ನೋಂಪಿಯಂ ನೋಂತವರ್ಗಳುಂ ನೋನಿಸಿದವರ್ಗಳುಂ ಕ್ರಮದಿಂದೊಡಂಬಟ್ಟವರ್ಗಳುಂ ಬರೆದವರ್ಗಳುಂ ಇಹದೊಳುಂ ಪರದೊಳುಂ ಸುಖಮಂ ಪಡೆದು ಕ್ರಮದಿಂ ಸ್ವರ್ಗ ಮೋಕ್ಷಂಗಳಂ ಪಡೆವರೆಂದು ಗೌತಮಸ್ವಾಮಿಗಳು ಪೇಳಿರುವರು. ಸಿದ್ಧಾಂತಂ ತಪ್ಪಲಾರದು ನಿಶ್ಚಯವು.

ಇಂತೀ ಅನಂತನಾಥ ಸ್ವಾಮಿ ಕಥೆ

ಸಂಪೂರ್ಣಂ

## ಅನುಬಂಧ ೩

# ಅನಂತಾಷ್ಟಕ

ಶ್ರೀಸುರೇಂದ್ರನರೋರಗಾರ್ಚಿತಸಿಂಹಪೀಠನಿವಾಸಿಯಂ
ಭಾಸುರಾಮಲಬೋಧಸಂಯುತಹೇಮವರ್ಣಶರೀರನಂ
ವಾಸುದೇವನ ಕಂದನಂ ಗೆಲಿದಾತನೈದು ಸರಳ್ಗಳಂ
ಘಾಸಿಮಾಡಿದ ನಿನ್ನನೊಂದಿಪೆ ನಾನನಂತಜಿನೇಶ್ವರಾ ೧

ಸಾವುಹುಟ್ಟುಜರಾದಿದುಃಖಗಳಿಂದ ನೊಂದತಿದೈನ್ಯದಿಂ
ಕಾವರಿಲ್ಲದನಾಥನಾಗಿ ನಿಜಾಂಘ್ರಿಯಂ ನೆರೆಯೊಕ್ಕೆನಾಂ
ಆವ ಜೀವವನೆಲ್ಲಮಂ ಪರಿರಕ್ಷಿಸುತ್ತಿಹೆ ಸಂತತಂ
ಕಾವುದೆನ್ನನನಾಥಬಂಧುವೆ ನೀನನಂತಜಿನೇಶ್ವರಾ ೨

ಮೋಹಮಲ್ಲನನಿಕ್ಕಿ ಮೆಟ್ಟಿ ಸರಾಗದಿಂದವೆ ನೀನು ನಿ–
ರ್ಮೋಹಿಯಾಗಿ ಭವಬ್ಧಿವಾಂಥೆಯ ತೀರವೈದಿಸು ಭವ್ಯರಂ
ಮೋಹದಿಂದವೆ ದಾಂಟಿಸುತ್ತಿಹ ಮಾರ್ಗವೆಲ್ಲರಿಗಚ್ಚರಿ
ಸ್ನೇಹದಿಂದವೆ ನಿನ್ನನೊಂದಿಪೆನಾನಂತಜಿನೇಶ್ವರಾ ೩

ಪೋದನಂತಭವಂಗಳೊಳ್ ಜಿನ ನಿನ್ನ ಯುಕ್ತಿಯ ಕೇಳದಾಂ
ಕೈದುವಿಲ್ಲದೆ ಶತ್ರುವಂ ನಾ ಗೆಲ್ವುಪಾಯವ ಕಾಣದೇ
ಮೋದದಿಂದೆ ಜಿನೋಕ್ತಿಯಂ ಮನವಾರೆ ಕೇಳಿಯೆ ನಂಬಿದೆಂ
ಕಾಯ್ದುಕೊಳ್ಳೊ ಮಹಾಕೃಪಾರ್ಣವ ನೀನನಂತಜಿನೇಶ್ವರಾ ೪

ನೋಡೆ ನಿನ್ನ ಚರಿತ್ರಮದ್ಭುತ ಬೇಡಿದರ್ಗೆ ವರಂಗಳಂ
ನೋಡಿ ನೀ ಜಿನನಾಗಿ ಶಾಶ್ವತಮುಕ್ತಿಸೌಖ್ಯವನೀವುದಂ
ಕಾಡಪುಷ್ಪವನೊಂದನರ್ಚಿಸಿದಂಗನೇಕಪದಂಗಳಂ
ಕಾಡ ದೈವವನೆಂತು ವಂದಿಪೆನಾನನಂತಜಿನೇಶ್ವರಾ ೫

ತ್ಯಾಗಿ ನೀನೆ ಸುರೇಂದ್ರಲೋಕದೊಳಿರ್ದು ರತ್ನಸುವೃಷ್ಟಿಯಿಂ
ಬೇಗಮುನ್ನವೆ ಲೋಕದೊಳ್ಜನಕಿತ್ತುಧನ್ಯರ ಮಾಡಿದೈ
ಈಗ ನಿಷ್ಕಪಟಂಗಳಿಂದವೆ ತ್ಯಾಗಿಯೆಂಬುದನಱಿದೆನಾಂ
ತ್ಯಾಗಮಂ ಕೊಡು ಯೋಗಿವಂದಿತ ನೀನನಂತಜಿನೇಶ್ವರಾ ೬

ಜ್ಞಾನದಿಂದಲನಂತ ನೀನು ಸುನಾಮದಿಂದಲನಂತನೇ
ನಾನು ನಿನ್ನನು ಕೀರ್ತಿಸುತ್ತಿಹೆ ಭವ್ಯವಾರಿಜಭಾನುವೇ
ಜ್ಞಾನಹೀನನು ನಿನ್ನ ಶ್ರೀಪದಸೇವೆಯಂ ಬಿಡದಿರ್ಪೆನಾಂ
ಜ್ಞಾನಮಂ ಕೊಡು ಮುಕ್ತಿವಲ್ಲಭ ನೀನನಂತಜಿನೇಶ್ವರಾ ೭

ಫುಲ್ಲಬಾಣನ ಪುಷ್ಪಬಾಣಗಳಿಲ್ಲ ತುಂಬಿಗಳಿಂಜಲಿಂ
ದೊಲ್ಲದೇಳಿಸಿ ಬಲ್ಲರೆಲ್ಲರು ನಿಚ್ಚ ಪೂಜಿಸುವಂತೆ ನಾಂ
ನಿಲ್ಲದೇ ಸ್ತುತಿಯೆಂಬ ಸೌರಭ ಪೋಗದೀ ವರಮಲ್ಲಿಕಾ
ಮಾಲೆಯೆಂಟರಲಿಂದ ಪೂಜಿಪೆ ಶರಣನನಂತಜಿನೇಶ್ವರಾ ೮

# ಪರಿಶಿಷ್ಟ ೧

## ಅಭಿನವ ವಾದಿವಿದ್ಯಾನಂದನ ಕಾವ್ಯಸಾರದಲ್ಲಿ ಅನಂತನಾಥ ಪುರಾಣದಿಂದ ಉದ್ಧೃತವಾದ ಪದ್ಯಗಳ ಪಟ್ಟಿ

| ಕಾವ್ಯಸಾರ ಪದ್ಯಸಂಖ್ಯೆ | | | (ಅನಂತನಾಥ ಪುರಾಣ) ಅ—ಪು ಆಶ್ವಾಸ ಮತ್ತು ಪದ್ಯಸಂಖ್ಯೆ | |
|---|---|---|---|---|
| 40 | ... | ... | I | 45 |
| 46 | ... | ... | I | 42 |
| 47 | ... | ... | I | 40 |
| 63 | ... | ... | I | 50 |
| 92 | ... | ... | III | 9 |
| 96 | ... | ... | I | 85 |
| 112 | ... | ... | I | 81 |
| 119 | ... | ... | I | 82 |
| 128 | ... | ... | I | 92 |
| 191 | ... | ... | I | 106 |
| 220 | ... | ... | XIII | 11 |
| 236 | ... | ... | II | 9 |
| 237 | ... | ... | XIII | 8 |
| 238 | ... | ... | XIII | 9 |
| 241 | ... | ... | XIII | 10 |
| 242 | ... | ... | XIII | 7 |
| 249 | ... | ... | III | 22 |
| 252 | ... | ... | II | 7 |
| 253 | ... | ... | III | 23 |
| 254 | ... | ... | II | 6 |
| 268 | ... | ... | II | 14 |
| 269 | ... | ... | II | 16 |
| 270 | ... | ... | III | 25 |
| 337 | ... | ... | XII | 49 |
| 342 | ... | ... | XII | 68 |
| 390 | ... | ... | II | 20 |
| 393 | ... | ... | II | 21 |
| 397 | ... | ... | II | 22 |
| 398 | ... | ... | II | 24 |
| 399 | ... | ... | II | 23 |

| | | | | |
|---|---|---|---|---|
| 400 | ... | ... | II | 32 |
| 473 | ... | ... | XI | 85 |
| 474 | ... | ... | XI | 83 |
| 488 | ... | ... | XIV | 3 |
| 490 | ... | ... | XIV | 4 |
| 492 | ... | ... | XIV | 5 |
| 511 | ... | ... | II | 27 |
| 524 | ... | ... | XI | 75 |
| 573 | ... | ... | XII | 24 |
| 626 | ... | ... | VIII | 43 |
| 659 | ... | ... | VIII | 49 |
| 725 | ... | ... | VI | 84 |
| 732 | ... | ... | VII | 4 |
| 748 | ... | ... | I | 94 |
| 891 | ... | ... | VII | 69 |
| 927 | ... | .... | VII | 82 |
| 937 | ... | ... | VII | 83 |
| 945 | ... | ... | VII | 85 |
| 954 | ... | ... | VII | 87 |
| 967 | ... | .... | VIII | 4 |
| 972 | ... | ... | VIII | 2 |
| 984 | ... | .... | VIII | |
| 997 | ... | ... | VIII | 55 |
| 998 | ... | ... | VIII | 57 |
| 999 | ... | ... | VIII | 40 |

## ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಅನಂತನಾಥಪುರಾಣದಿಂದ ಉದ್ಧೃತವಾದ ವಾಕ್ಯ ಮತ್ತು ಪದ್ಯ

| ಶಬ್ದಾನುಶಾಸನ | | | | ಅನಂತನಾಥಪುರಾಣ | |
|---|---|---|---|---|---|
| ಪುಟ | ಪಙ್ತಿ | | | ಆಶ್ವಾಸ | ಪದ್ಯ |
| 87 | 22 | .... | ... | II | 60(d) |
| 401 | 15 | ... | ... | XIII | 22 |

# ಪದ್ಯಗಳ ಅಕಾರಾದಿ

ಉಷಾ ಪ್ರೆಸ್, ಮೈಸೂರು-೧

